VI II K. G. Bhat

# ತೂರಿಬಂದ ತಾರೆ

(ಒಂದು ಕಾಲೇಜ್ ಪ್ರಣಯ ಕಥೆ)

ನಿನ್ನ ಸಿರಿಬಾಳಿನಲಿ ಕ್ಷಣಮಾತ್ರ ಸುಳಿದಳಿದೆ
ಸುಂದರಿಯು ನೆನೆಯುತ್ತ ಏಕೆ ಸುಯ್ವೆ ?
ಉಳಿದೆಲ್ಲ ಸುಖಗಳನು ಬದಿಗೊತ್ತಿ ಕೊರಗುತಿರೆ
ಜೀವನದ ಕೆಲಸಗಳನೆಂತು ಗೈಯ್ವೆ ?

—ಶ್ರೀ ಲೂಯಿ

ಬರೆದವರು :
**ಶ್ರೀನಿವಾಸರಾವ್ ಕೊರಟಿ**

ಪ್ರಕಾಶಕರು :
**ಆನಂದ್ ಬ್ರದರ್ಸ್**
**ಬೆಂಗಳೂರು ೨.**

# ಲೇಖಕನ ಮಾತು

ನಾನು 'ತೂರಿಬಂದ ತಾರೆ' ಯನ್ನು ಬರೆದು ಎರಡು ವರ್ಷಗಳಿಗೆ ಬಂತು. ಇಂದು ಇದು ಬೆಳಕಿಗೆ ಬರುತ್ತಿರುವುದಾದರೂ, ಅದು ಮೆಸರ್ಸ್ ಆನಂದ್ ಬ್ರದರ್ಸ್ ಅವರ ಪ್ರೋತ್ಸಾಹದಿಂದ. ಅವರು ನನ್ನ ವಿಷಯದಲ್ಲಿ ಪ್ರಕಾಶಕ ಲೇಖಕರ ಬಾಂಧವ್ಯಕ್ಕೂ ಮೀರಿದ ಸ್ನೇಹ, ವಿಶ್ವಾಸ ತೋರಿಸಿದ್ದಾರೆ. ಕಾಗದ ದುರ್ಲಭವಾಗಿರುವ ಈ ಕಾಲದಲ್ಲಿಯೂ ಅವರು ಸೊಗಸಾದ 'ಆಂಟಿಕ್' ಕಾಗದ ಒದಗಿಸಿದ್ದಾರೆ. ಅವರಿಗೆ ನಾನೆಷ್ಟು ಋಣಿಯಾಗಿದ್ದರೂ ಸಾಲದು. ಅಂತೆಯೇ ಈಸ್ಟರ್ನ್ ಪ್ರೆಸ್ಸಿನ ಶ್ರೀ ಚಿಂತಾಮಣಿ ಅವರು, ಪುಸ್ತಕವನ್ನು ಕಂಡೊಡನೆಯೇ ಹಿರಿಹಿರಿ ಹಿಗ್ಗುವಷ್ಟು ಸುಂದರವಾಗಿ, ಮುದ್ರಿಸಿಕೊಟ್ಟಿದ್ದಾರೆ. ಅವರಿಗೂ, ಅವರ ಸಹೋದ್ಯೋಗಿಗಳಿಗೂ ನನ್ನ ಅನಂತ ವಂದನೆಗಳು. ತೂರಿಬಂದ ತಾರೆಯ ಹಸ್ತಪ್ರತಿಯನ್ನು ಬರೆದುಕೊಟ್ಟ ಗೆಳೆಯ ಶ್ರೀ ವೇಣುಗೋಪಾಲ್ ಅವರಿಗೂ, ಹಸ್ತಪ್ರತಿಯಲ್ಲೇ ಕಥೆಯನ್ನು ಓದಿ ಅನೇಕ ಉಪಯುಕ್ತ ಸಲಹೆಗಳನ್ನು ಇತ್ತ ನನ್ನ ಎಲ್ಲ ಸ್ನೇಹಿತರಿಗೂ ನಾನು ಕೃತಜ್ಞನಾಗಿದ್ದೇನೆ. ಪುಸ್ತಕದಲ್ಲಿ ನನ್ನ ಅಜಾಗರೂಕತೆಯಿಂದ ಹಲವಾರು ಅಚ್ಚಿನತಪ್ಪುಗಳೂ, ಅಶುದ್ಧ ಪದಪ್ರಯೋಗಗಳೂ ಉಳಿದುಬಿಟ್ಟಿವೆ. ಇವುಗಳನ್ನು ತಿದ್ದಿಕೊಂಡು ಓದಬೇಕೆಂದು ನಿಮ್ಮಲ್ಲಿ ನನ್ನ ನಮ್ರ ವಿನಂತಿ.

ಕೃತಿಯ ಬಗ್ಗೆ ನಾನೇನೂ ಹೇಳುವುದಿಲ್ಲ. ಅದು ನಿಮ್ಮೆದುರಿಗಿದೆ. ಈ ಕಥೆಯ ಮುಗಿವು ಅಪೂರ್ಣವೆನಿಸಬಹುದಾದರೂ, ಮೂರ್ತಿಯ ಮದುವೆಯ ಪ್ರಸಂಗವನ್ನು ಇನ್ನೊಂದು ಕಥೆಗೆ ಉಳಿಸಿಕೊಂಡು, ಆ ವಿಷಯವನ್ನು ತಾತ್ಕಾಲಿಕವಾಗಿ ಓದುಗರ ಊಹೆಗೆ ಬಿಟ್ಟಿದೆ.

ಸಂಕ್ರಾಂತಿ, (೧೪-೧-೫೧)
ಬೆಂಗಳೂರು

ಇಂತಿ ನಿಮ್ಮವ
**ಶ್ರೀನಿವಾಸರಾವ್ ಕೊರಟಿ**

# ಅರ್ಪಣೆ

ನನ್ನ ಬಾಳ್ವೆಯ ಶಿಲ್ಪಕೃತಿಗೆ
ಹೊಸ ಉಸಿರು ತುಂಬಿದ
ಜೀವದ ಗೆಳೆಯರಿಗೆ



ಮಹಾರಾಜಾ ಕಾಲೇಜಿನ ಶತಮಾನೋತ್ಸವದ
(೨೦-೧-೧೯೫೧) ಸವಿನೆನಪಿನಲ್ಲಿ

# ಗೆಳೆಯರು

ಮಹಾರಾಜ ಕಾಲೇಜ್ ಹಾಸ್ಟೆಲಿನಲ್ಲಿ ನಮ್ಮನ್ನು 'ಮೆರಿತ್ರಿ' ಎಂದು ಕರೆಯುತ್ತಿದ್ದರು. ಇದನ್ನೇ ನಮಗಾಗದ ಕೆಲವರು ಹಿಗ್ಗಿಸಿ 'ಏನು ಮೆರೀತೀರ್ರಿ' ಎಂದು ಪರೋಕ್ಷವಾಗಿ ಟೀಕಿಸಿದರೂ – ಎಲ್ಲರ ಪಾಲಿಗೆ ನಾವು 'ಮೆರಿತ್ರಿ' – ನಗುಮೊಗದ ತ್ರಿಮೂರ್ತಿಗಳು. ನಾವು ಮೂವರೂ ಸದಾ ಒಟ್ಟಿಗಿರುತ್ತಿದ್ದುದಲ್ಲದೆ, ಸ್ನಾನ, ಊಟ, ತಿಂಡಿ, ಕಾಲೇಜು, ವಿಹಾರಗಳಿಗೆ ಕೂಡ ಒಟ್ಟಿಗೆ ಹೋಗುತ್ತಿದ್ದೆವು. ನಾವು ಅಗಲುತ್ತಿದ್ದುದೇ ಅಪರೂಪ. ನನ್ನ ಗೆಳೆಯರು – ಶ್ರೀ ಕಾಂತನ್, ಬಾನಾಡಿ – ಕಲಾಮಂದಿರದ ನಿವಾಸಿಗಳು; ನಾನು ಅದೇ 'ಬ್ಲಾಕ್'ನಲ್ಲಿ – ಒಂದು ಕಾಲದಲ್ಲಿ ಕಿನ್ನರಲೋಕವಾಗಿದ್ದ ಕೊಠಡಿಯಲ್ಲಿದ್ದೆ. ಅದೇ ಕೊಠಡಿಯನ್ನು ಈ ಬಾರಿಯೂ ನಾನು ಆರಿಸಿಕೊಳ್ಳಲು ಹಲವಾರು ಕಾರಣಗಳು. ನನ್ನ ಕೊಠಡಿಯು ಸ್ನಾನಗೃಹ, ಭೋಜನಶಾಲೆ, ವಾಚನಾಲಯ, ಆಫೀಸ್‌ಗಳಿಗೆ ಸಮೀಪವಾಗಿತ್ತು. ಅಲ್ಲದೆ ನಮ್ಮ ಕೋಣೆಯ ಮುಂದೆ ವಿಶಾಲವಾದ ಬಯಲು. ಕೋಣೆಯ ಹೊರವಲಯದಲ್ಲಿ ನಿಂತು ಬಯಲಿಗೆ ಮುಖ ಮಾಡಿದರೆ ಎದುರಿಗೆ ಚಾಮುಂಡಿ ಬೆಟ್ಟ – ಶತಶತಮಾನಗಳಿಂದ ಹಾಯಾಗಿ ನಿದ್ರಿಸುತ್ತಾ ಮಲಗಿರುವ ಜಡ ಬಸವನಂತೆ ಸದಾಕಾಲ ಕಂಗೊಳಿಸುವುದು. ಕಿಟಕಿಯ ಬಾಗಿಲುಗಳನ್ನು ತೆರೆದು ಮಂಚದ ಮೇಲೆ ಮಲಗಿದಾಗಲೂ ಕಣ್ಣೆದುರಿಗೆ 'ಅಮ್ಮನವರ' ದೇವಸ್ಥಾನ. ದೀಪೋತ್ಸವ ಕಾಲದಲ್ಲಿ, ಹಬ್ಬ ಹರಿದಿನಗಳಲ್ಲಿ – ದೇಗುಲದ ಪ್ರಾಕಾರ, ಗೋಪುರಗಳು ವಿದ್ಯುತ್ ಕಾಂತಿಯಲ್ಲಿ ತೊಯ್ದೆದ್ದು, ಹೊನ್ನಿನ ಗೋಪುರದಂತೆ, ನಭೋ ಮಂಡಲದಲ್ಲಿ ಬೇರಾವ ಆಸರೆಯಿಲ್ಲದೆ ಮೋಡಗಳ ಮೇಲೆ ನಿಂತಂತೆ ತೋರುವುದು. ಈ ದೃಶ್ಯಕ್ಕಾಗಿಯೇ ನಾನು ಆ ಕೋಣೆಯನ್ನು ಈ ಬಾರಿಯೂ ಆರಿಸಿದ್ದು.

ಹಾಸ್ಟೆಲಿನ ಗೆಳೆಯರಷ್ಟೇ ಆಪ್ತರಾದ ನನ್ನ ಇನ್ನಿತರ ಗೆಳೆಯರೆಂದರೆ – ಶ್ರೀಧರ್ ಮತ್ತು ಅನಂತ್.

ಶ್ರೀಧರ್ ತನ್ನ ಅಕ್ಕನಮನೆಯಲ್ಲಿದ್ದುಕೊಂಡು ತನ್ನ ವಿರಾಮವನ್ನೆಲ್ಲಾ ನಮ್ಮೊಂದಿಗೆ ಕಳೆಯುತ್ತಿದ್ದರು. ಅನಂತ್ ನಮ್ಮೊಂದಿಗೆ ಹೆಚ್ಚಾಗಿ ಬೆರೆಯದೆ ಇದ್ದರೂ ಆತ ನನಗೆ ಹಿರಿಯಮಿತ್ರ; ಬಾಲ್ಯದ ಗೆಳೆಯ.

ಈ ನಾಲ್ವರು ಗೆಳೆಯರನ್ನು ಹತ್ತಿರಕ್ಕೆ ತಂದು, ಆತ್ಮೀಯತೆಯ ಚಿಗುರೊಡೆಯುವಂತೆ ಮಾಡಿದುದು "ಮಿತ್ರಮೇಳ."

'ಮಿತ್ರಮೇಳ' ಮಹಾರಾಜಾ ಕಾಲೇಜಿನಲ್ಲಿ, ಪ್ರೊಫೆಸರ್ ಡಬ್ಲ್ಯು. ಜಿ. ಈಗಲ್‌ಟನ್ ಅವರ ನೇತೃತ್ವದಲ್ಲಿ ಕಳೆದ ನಾಲ್ಕುವರ್ಷಗಳಿಂದಲೂ ವಿದ್ಯಾರ್ಥಿಗಳಿಗೆ ಮನರಂಜನೆಯನ್ನು ಒದಗಿಸುತ್ತಾ ಬಂದ ಸಂಸ್ಥೆ. ಹಿಂದೆ ಕಾಲೇಜಿನಲ್ಲಿ ವೈಭವವಾಗಿ ಕೆಲಸಮಾಡಿದ್ದ 'ಯಾಕೂಬ್' ಸಂಸ್ಥೆಯ ಪತನದ ನಂತರ 'ಮಿತ್ರಮೇಳ' ಅದರ ಸ್ಥಾನವನ್ನು ಆಕ್ರಮಿಸಿಕೊಂಡಿತ್ತು. ಸಾಹಿತ್ಯ, ಸಂಗೀತ, ಚಿತ್ರ, ಅಭಿನಯಕಲೆಗಳಲ್ಲಿ ಆಸಕ್ತಿಗೊಂಡ ಉದಿತೋದಿತ ಕಲಾವಿದರನ್ನು ಬೆಳಕಿಗೆ ತರುವುದೇ ಮಿತ್ರಮೇಳದ ಹಿರಿಯ ಧ್ಯೇಯ. ತರುಣ ಕಲಾಭ್ಯಾಸಿಗಳಿಗೆ ಮುಂಬರೆಯಲು ಆಸೆ. ಆದರೆ, ಅವಕಾಶವಿಲ್ಲದೆ ಅವರ ಕಲೆ ಮೊಗ್ಗಿನಲ್ಲೇ ಮುದುಡಿಬೀಳುವ ಸಂಭವ ಹೆಚ್ಚು. ಮೇಳ ಇಂತಹ ಕೊರತೆಯನ್ನು ನೀಗಲು ಹುಟ್ಟಿಕೊಂಡ ಸಂಸ್ಥೆ.

ನಾವು ನಾಲ್ವರು ಗೆಳೆಯರು ಮಿತ್ರಮೇಳದ ನಾಲ್ಕು ಹಿರಿಯ ಸ್ಥಂಭಗಳು. ಇದರಲ್ಲಿ ನಾನು ಉಪಾಧ್ಯಕ್ಷ; [ಮಿತ್ರಮೇಳದ ಆಧಾರ ಸ್ಥಂಭ ಎಂದು ಕರೆದು ಹಾಸ್ಯಮಾಡುತ್ತಿದ್ದರು – ನನ್ನ ಆಕಾರ, ಸ್ಥಾನಮಾನ ನೋಡಿ.] ಶ್ರೀಕಾಂತನ್ ಕಾರ್ಯದರ್ಶಿ; ಬಾನಾಡಿ ಖಜಾಂಚಿ; ಶ್ರೀಧರ್ ವ್ಯವಸ್ಥಾಪಕ – ನಾಟಕಗಳ ದಿಗ್ದರ್ಶಕ. ಹೀಗಾಗಿ ಮಿತ್ರಮೇಳ – ನಾವು ನಾಲ್ವರು ಮಿತ್ರರ ಮೇಳ!

ಮಿತ್ರಮೇಳದ ಎಲ್ಲ ಆಗುಹೋಗುಗಳಿಗೆ ನಾವೇ ಕಾರಣಕರ್ತರು. ಮೇಳದ ಆಶ್ರಯದಲ್ಲಿ ಯಾವ ಸಮಾರಂಭವೇರ್ಪಡಲಿ – ನಾಲ್ವರೂ ಒಬ್ಬ ವ್ಯಕ್ತಿಯಂತೆ ದುಡಿಯುತ್ತಿದ್ದೆವು. ನಮ್ಮಲ್ಲಿ ನಾಲ್ವರದೂ ಭಿನ್ನಬಗೆಯ ವ್ಯಕ್ತಿತ್ವ, ಭಿನ್ನ ಅಭಿರುಚಿ. ಆದರೂ ನಮ್ಮದು 'ಏಕಜೀವ ಚತುರ್ದೇಹ

ನ್ಯಾಯ'. ನನ್ನ ಗೆಳೆತನ ಕೃತಕತೆಯ ನೆರಳು ಸೋಂಕದ ಆದರ್ಶ ಗೆಳೆತನ – ನಾಲ್ಕು ಬಗೆಯ ರತ್ನಗಳಿಂದ ಆದ ಅಪೂರ್ವ ಚಂದ್ರಾಹಾರ !

ಇದು ಬಾನಾಡಿಯ ಚಿತ್ರ :

ಬಾನಾಡಿಯನ್ನು ಕಂಡೊಡನೆ ಮೊದಲು ಮೂಡುವ ಭಾವ – ಆತ ಕಲಾವಿದ. ನಟನೆಗೂ, ನಾಟ್ಯಾನುಕರಣೆಗೂ ತಕ್ಕ ಮೈಕಟ್ಟು, ಮುಖಮುದ್ರೆ; ತೆಳ್ಳಗೆ ನೀಳವಾಗಿ ಬಳುಕುವ ಶರೀರ, ದುಂಡುಮುಖ. ದರ್ಶನಕಾರನಿಗೆ ಒಪ್ಪುವ ತೀಕ್ಷ್ಣವಾದ ಕಣ್ಣುಗಳು, ವಿಶಾಲವಾದ ಹಣೆ, ನೀಳವಾದ ಮೂಗು. ಬಾನಾಡಿಗೆ ನಾಟಕ, ನೃತ್ಯಕಲೆಗಳಲ್ಲಿ ತುಂಬ ಅಭಿರುಚಿಯಿದ್ದರೂ ಅವರ ಪೂರ್ಣ ಒಲವು ಚಿತ್ರಕಲೆಗೆ ಹಾಗೂ ಸಾಹಿತ್ಯಕ್ಕೆ. ಅವರು ಚಿತ್ರಕಲೆಯನ್ನು ಯಾರಲ್ಲಿಯೂ ಅಭ್ಯಾಸಿಸಿ ಕಲಿತಿಲ್ಲ. ಮನಸ್ಸು ಬಂದಾಗ ಪೆನ್ಸಿಲ್ ಹಿಡಿದು ಗೀಚುತ್ತಾರೆ. ಅದೇ ಸುಂದರ ಕಲಾಕೃತಿಯಾಗುತ್ತದೆ. ಆದರೂ ಅವರಿಗೆ ತಾನಿನ್ನೂ ಅಂಬೆಗಾಲಿಕ್ಕುವ ಸಾಧಕನೆನ್ನುವ ಅತೃಪ್ತಿ. ಮುಂದೊಮ್ಮೆ ಶಾಂತಿ ನಿಕೇತನಕ್ಕೆ ತೆರಳಿ, ಆಚಾರ್ಯ 'ನಂದಲಾಲ್ ಬಸು' ಅವರ ಪದತಳದಲ್ಲಿ ಕುಳಿತು ಚಿತ್ರಕಲೆಯನ್ನು ಶಾಸ್ತ್ರೋಕ್ತವಾಗಿ ಕಲಿತು ಬರಬೇಕೆನ್ನುವ ಮಹದಾಶೆ – ಅವರನ್ನು ಸದಾ ಬೆನ್ನುಹತ್ತಿ ಕಾಡುವ ಭೂತ !

ಅವರ ಅಪ್ರಬುದ್ಧ ಕೈಯಿಂದ ಹೊರಬಿದ್ದ ದಿವಂಗತ ಬಾಪೂಜಿ, ದಿವಂಗತ ವರದಾಚಾರ್ಯ, ದಿವಂಗತ ಭಾರತಿ, ನೆಹರು, ರಾಜಾಜಿ – ಮೊದಲಾದ ಮಹಾಪುರುಷರ ಚಿತ್ರಗಳು ಕಾಲೇಜಿನ ಗೋಡೆಯನ್ನು ಅಲಂಕರಿಸಿವೆ.

ಅವರು ಬರೆದ ಚಿತ್ರಗಳಲ್ಲೆಲ್ಲಾ ಕಳಸಪ್ರಾಯವೆನಿಸುವ ಕೃತಿ ಮಿತ್ರಮೇಳಕ್ಕೆಂದು ಅವರು ರಚಿಸಿಕೊಟ್ಟಿರುವ – "ದಿ ಬಿಗ್ ಬೆಲ್". ಸುಂದರವಾಗಿ ಕೆತ್ತನೆಯ ಕೆಲಸದಲ್ಲಿ ಎರಕ ಹೊಯ್ದಿರುವ ಒಂದು ಮಹೋನ್ನತ ಗಂಟೆ ! ನಾದಬ್ರಹ್ಮನ ಸೃಷ್ಟಿಗೆಂದು ಹೊರಟು ನಿಂತಿರುವ ಗಂಟೆಯ ನಾಲಿಗೆ. ಅದರ ಬದಿಯಲ್ಲೇ ಸರಪಣಿಗೆ ತೂಗಿ ಬಿಟ್ಟ ಪುರಾತನ ಕಾಲದ ಒಂದು ಹಣತೆ. ಅದರ ಮಂದ ಪ್ರಕಾಶದಲ್ಲಿ ಗಂಟೆಯ ಹೊರಮೈ ಮಿನುಗುತ್ತಿದೆ. ಗಂಟೆ ! ಹಣತೆ !! ಉದಿತೋದಿತ ಕಲಾವಿದರ ಪ್ರತಿಭೆಯನ್ನು ಲೋಕಕ್ಕೆ ಸಾರುವ ರಂಗಸ್ಥಳ ಮಿತ್ರಮೇಳ ಎನ್ನುವ ಸಂಕೇತ ! ಚಿತ್ರಕಾರ ಬಾನಾಡಿ ಕವಿಯ ಕಲ್ಪನೆಯನ್ನು ಕಪ್ಪು ಬಿಳುಪಿನಲ್ಲಿ, ಸುಸ್ಪಷ್ಟವಾಗಿ, ಚಿತ್ರಫಲಕದ ಮೇಲೆ ಚಿತ್ರಿಸಿದ್ದಾರೆ.

ಬಾನಾಡಿಯದು ತುಂಬಾ ಸರಳ ಸ್ವಭಾವ. ಆಡಂಬರ, ಕೃತಕತೆಯ ನ್ನರಿಯದ ವ್ಯಕ್ತಿ – ಆತ. ತುಂಬಾ ಸ್ನೇಹಮಯಿ. ಪರರ ದುಃಖದಲ್ಲಿ ಪಾಲುಗೊಳ್ಳಲು ಹಿಂದುಮುಂದು ನೋಡರು.

ಒಮ್ಮೆ ಬಾನಾಡಿಯ ಊರಿನವನೊಬ್ಬ ಮೈಸೂರಿಗೆ ಬಂದಿದ್ದರು. ಆತನ ಬಳಿಯಲ್ಲಿದ್ದ ಹಣವೆಲ್ಲಾ ವೆಚ್ಚವಾಗಿ, ಊರಿಗೆ ಮರಳಲು ಕಾಸಿಲ್ಲದೆ ಬಾನಾಡಿ ಯನ್ನು ಬಂದು ಕೇಳಿದ. ಆ ಹೊತ್ತಿನಲ್ಲಿ ನಾವು ನಾಲ್ವರು ಗೆಳೆಯರು ಸುಧಾಮರಾಗಿದ್ದೆವು. ಇಂಥ ಹೊತ್ತಿನಲ್ಲಿ ನಮ್ಮಿಂದ ಏನು ನೆರವು ಸಿಕ್ಕೀತು? ಆತನಿಗೋ ಮೂರುದಿನದಿಂದ ಊಟವಿಲ್ಲ. ಅವನ ಕಷ್ಟವನ್ನು ನೋಡಲಾರದೆ ಬಾನಾಡಿ ಕೇಳಬಾರದ ಸ್ನೇಹಿತರನ್ನು ಹಣಕ್ಕಾಗಿ ಕೇಳಿ ನೋಡಿದರು. ಆದರೂ ಸಾಕಷ್ಟು ಹಣ ಒದಗಲಿಲ್ಲ. ಕಡೆಗೆ ಬೇರೆ ದಾರಿಗಾಣದೆ ಬಾನಾಡಿ ಆ ಗೆಳೆಯ ನನ್ನು ಕರೆದು, ತಮ್ಮ ಕೈಗಡಿಯಾರವನ್ನು ಬಿಚ್ಚಿ ಆತನ ಕೈಗಿರಿಸಿ "ಇದನ್ನು ಯಾರಲ್ಲಾದರೂ ಒತ್ತೆ ಇರಿಸಿ ನಿನಗೆ ಬೇಕಾದಷ್ಟು ಹಣ ಪಡೆದುಕೊಂಡು ಹೋಗು. ನೀನು ಊರಿಗೆ ಹೋಗಿ ಹಣ ಕಳುಹಿಸಿಕೊಟ್ಟಾಗ ನಾನು ಬಿಡಿಸಿ ಕೊಳ್ಳುತ್ತೇನೆ" ಎಂದು ಹೇಳಿದರು. ಆ ಗೆಳೆಯನ ಕಣ್ಣಿನಲ್ಲಿ ನೀರುಬಂತು. ಆತ ಮಾತಿಲ್ಲದೆ, ಗಡಿಯಾರವನ್ನು ಮುಟ್ಟದೆ ಹೊರಟುಹೋದ. ಅವನಿಗೆ ದೇವರು ಮತ್ತೆಲ್ಲಿಯೋ ಹಣ ಅನುಕೂಲಮಾಡಿಕೊಟ್ಟನಂತೆ!

ಬಾನಾಡಿ ಮೂರು ನಾಲ್ಕು ವರ್ಷದ ಕೈಗೂಸಾಗಿರುವಾಗಲೇ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದರು. ತಂದೆ ತೀರಿಕೊಳ್ಳುವ ಮುನ್ನ ಮಗನಿಗೆ ಯಾವಕೊರತೆ ಇರದಷ್ಟು ಆಸ್ತಿ ಮಾಡಿಟ್ಟು ಹೋಗಿದ್ದರು. ತಾಯಿಯ ನಗನಾಣ್ಯಗಳೇ ಹತ್ತೆಂಟು ಸಾವಿರಕ್ಕೆ ಮಿಕ್ಕಿ ಬೆಲೆ ಬಾಳುತ್ತಿತ್ತು. ಆದರೆ ಅವುಗಳೊಂದೂ ಬಾನಾಡಿಯ ಕೈಹತ್ತಲಿಲ್ಲ. ನಗನಾಣ್ಯಗಳಿದ್ದ ಪೆಟ್ಟಿಗೆ ಯನ್ನು ಯಾರೋ ಕಳ್ಳರು – ನೋಡಿಕೊಂಡಿದ್ದವರು – ಎತ್ತಿಬಿಟ್ಟರು. ಕೈಸಾಲವಾಗಿ ಕೊಟ್ಟಿದ್ದ ಸಾವಿರಾರು ರೂಪಾಯಿ – ತಂದೆಯವರೊಂದಿಗೆ ಹಿಂತಿರುಗದ ನಿಧಿಯಾಯಿತು. ಇದ್ದಬದ್ದ ಉತ್ಕೃಷ್ಟ ಭೂಮಿಗಳನ್ನು, ಮಾಡು ತ್ತಿದ್ದ ರೈತರೇ ಅಲ್ಲವಲ್ಲದ ಬೆಲೆಗೆ 'ಹೊತ್ತುಹಾಕಿ' ಬಿಟ್ಟರು. ಆದರೂ ಬಾನಾಡಿ ಒಂದು ದಿನವಾದರೂ ಕಳೆದುಕೊಂಡ ಭಾಗ್ಯವನ್ನು ನೆನೆದು ಕೊರಗಿಲ್ಲ.

ಆತ ಆಶಾವಾದಿ. ಅಲ್ಪತೃಪ್ತ. ಕಣ್ತೆರೆಯುವ ಮುನ್ನ ಜಗತ್ತಿನ ಕಠೋರ ಶಾಸನ ಅವರಿಗೆ ಕಲಿಸಿಕೊಟ್ಟ ಪ್ರಥಮ ಪಾಠಗಳು ಅವು.

ಬಾನಾಡಿಯ ಮದುವೆಯ ನಿಶ್ಚಿತಾರ್ಥದ ಕಥೆ – ಒಂದು ಕರುಣ ಕಥೆ. ಆ ಘಟನೆ ಬಾನಾಡಿಯ ಸ್ವಾರ್ಥತ್ಯಾಗದ ಪರಮಾವಧಿ.

ಬಾನಾಡಿಯನ್ನು ಸಾಕಿ ಸಲಹಿದವರು ಅವರ ಸೋದರ ಮಾವ ಮತ್ತು ಸೋದರತ್ತೆ. ಅತ್ತೆ ಸೋದರಳಿಯನನ್ನು ಮನೆಯ ಅಳಿಯನನ್ನಾಗಿ ಮಾಡಿ ಕೊಳ್ಳಲು ಮೊದಲಿನಿಂದಲೂ ಆಸೆಯುಳ್ಳವರಾಗಿದ್ದರು. ಆದರೆ ಬಾನಾಡಿಗೆ ಏಕೋ ಈ ಸಂಬಂಧ ಮನಸ್ಸಿಗೆ ಬಂದಿರಲಿಲ್ಲ. ಈ ಪ್ರಸ್ತಾಪ ಬಂದಾಗಲೆಲ್ಲಾ 'ಬೇಡ' ಎಂದು ಹೇಳುತ್ತಾ ಬಂದರು. ಆದರೆ ಇದನ್ನು ಹುಡುಗತನದ ಮಾತೆಂದು ಅತ್ತೆ ನಿರ್ಲಕ್ಷಿಸುತ್ತಲೇ ಬಂದರು. ಕಡೆಗೊಂದು ದಿನ ಹುಡುಗಿ ಬೆಳೆದು ಮದುವೆಗೆ ನಿಂತಾಗ, ಯಾವುದನ್ನು ನಿಶ್ಚಯವಾಗಿ ತಿಳಿದುಕೊಳ್ಳುವ ಹೊತ್ತು ಬಂದಾಗ, ಬಾನಾಡಿ ಅಂದುಬಿಟ್ಟರು, "ನಾನು ಮದುವೆಯಾಗುವುದಿಲ್ಲ." ಮನೆಯ ಜನ ಕತ್ತು ಕರೆದು ಬಾನಾಡಿಯ ಮನ ಒಲಿಸಲು ಹೋಗಿ ವಿಫಲರಾದರು. ಆದರೆ ವಿಧಿಯ ವೈಚಿತ್ರ್ಯ ತುಂಬಾ ಆಶ್ಚರ್ಯಕರ. ಒಂದು ಬಾರಿ ಅದೇ ಹುಡುಗಿಯನ್ನು ಚಿಕ್ಕಮಗಳೂರಿನಿಂದ ಬೆಂಗಳೂರಿಗೆ ಕರೆತರುವ ಕೆಲಸ ಬಾನಾಡಿಗೆ ಬಿತ್ತು. ಬಾನಾಡಿ ಮನಸ್ಸಿಲ್ಲದ ಮನಸ್ಸಿನಿಂದ ಆ ಕೆಲಸಕ್ಕೆ ಒಪ್ಪಿಕೊಂಡರು. ದಾರಿಯಲ್ಲಿ ಒಂದು ಕಡೆ ಹುಡುಗಿ ಬಾನಾಡಿಯನ್ನು ಹಠಾತ್ತಾಗಿ ಕೇಳಿಯೇಬಿಟ್ಟಳು.

"ನನ್ನನ್ನೇಕೆ ನೀವು ಮದುವೆಯಾಗುವುದಿಲ್ಲ?"

ಹುಡುಗಿ ದಿಟ್ಟೆ, ಬುದ್ಧಿವಂತೆ – ಮೇಲಾಗಿ ಕಲಿತವಳು. ಆಕೆ ಮೊದಲಿನಿಂದಲೂ ಬಾನಾಡಿಯನ್ನು ಪತಿಯೆಂದೇ ಭಾವಿಸಿ, ಪ್ರೀತಿಸಿಕೊಂಡು ಬಂದಿದ್ದಳು.

ಹುಡುಗಿಯ ಪ್ರಶ್ನೆಗೆ ಬಾನಾಡಿ ಏನೆಂದು ಉತ್ತರ ಕೊಡಬೇಕು? ಆಕೆ ಹೀಗೆ ನೇರ ಪ್ರಶ್ನೆ ಕೇಳುವಳೆಂದು, ಆತ ಕನಸಿನಲ್ಲಿಯೂ ತಿಳಿದಿರಲಿಲ್ಲ. ಬಾನಾಡಿಗೆ ಏನೂ ಹೇಳಲು ತೋಚದೆ ಕ್ಷಣಕಾಲ ಮೌನವಾಗಿದ್ದ.

"ಹೂಂ. ಹೇಳಿಬಿಡಿ. ನನ್ನನ್ನೇಕೆ ನೀವು ಮದುವೆಯಾಗುವುದಿಲ್ಲ?"

ಬಾನಾಡಿ ಬಾಯಿಬಿಡಲೇ ಬೇಕಾಯಿತು. "ನನಗೆ ಈ ಸಂಬಂಧ ಬೇಕಿಲ್ಲ!" ಎಂದರು ಬಾನಾಡಿ.

"ನನ್ನ ಮೇಲಿನ ಸಿಟ್ಟನಿಂದ ಹಾಗೆ ಹೇಳುತ್ತಿಲ್ಲ ತಾನೆ?"

ಬಾನಾಡಿ ಮೌನವಾಗಿದ್ದರು.

"ಹಾಗೇನಾದರೂ ಮನಸ್ಸಿನಲ್ಲಿದ್ದರೆ ಹೇಳಿಬಿಡಿ. ಅಣ್ಣ ಬೇರೆ ಕಡೆ ಹುಡುಕುವ ಪ್ರಯತ್ನ ಮಾಡುತ್ತಾರೆ. ನೀವು ಯಾವುದನ್ನೂ ಖಚಿತವಾಗಿ ನನಗೆ ತಿಳಿಸಬೇಕು. ತಂಗಿಯೂ ಮದುವೆಗೆ ನೆರೆಯುತ್ತಿದ್ದಾಳೆ. ನನ್ನಿಂದ ಅವಳ ಮದುವೆ ತಡವಾಗಬಾರದಷ್ಟೇ........" ಎಂದಳು ಹುಡುಗಿ

ಬಾನಾಡಿ ಮಾತನಾಡಲಿಲ್ಲ. ಯಾವುದನ್ನ ನಿಶ್ಚಯವಾಗಿ ಹೇಳಬೇಕು?

"ನಾನು ನಿಮ್ಮನ್ನು ಮೊದಲಿನಿಂದಲೂ ನನ್ನ 'ಸ್ವಾಮಿ' ಎಂದು ತಿಳಿದಿದ್ದೇನೆ........ನನ್ನ ಮೊರೆ ನಿಮಗೆ ಕೇಳಿಸಲಿಲ್ಲ. ನನ್ನ ದುರದೃಷ್ಟ. ನಿಮ್ಮ ಹೃದಯದಲ್ಲಿ ನನಗೆ ಸ್ಥಾನ ಸಿಗಲಿಲ್ಲ........" ಹುಡುಗಿ ಕಣ್ಣಿನಲ್ಲಿ ನೀರು ತಂದುಕೊಂಡಳು. ಬಾನಾಡಿಯದು ಮೊದಲೇ ಮೃದು ಹೃದಯ. ಹೆಣ್ಣಿನ ಈ ಮಾತಿನಿಂದ ಅದು ಬೆಣ್ಣೆಯಂತೆ ಕರಗಿಹೋಯಿತು. ಆಕೆಯೊಂದಿಗೆ ತಾನೂ ಅಳಬೇಕೆನ್ನಿಸಿತು. ಆದರೆ ಅದರ ಬೆಲೆ? ತನ್ನೆಲ್ಲಾ ಆಸೆಯ ಬಲಿದಾನ! ಹೊಂ, ಈ ಅಗ್ನಿ ಪರೀಕ್ಷೆಯೂ ನಡೆದುಹೋಗಲಿ ಎಂದುಕೊಂಡು "ಆಗಲಿ, ನಿನ್ನನ್ನೇ ನಾನು ಮದುವೆಯಾಗುತ್ತೇನೆ." ಅಂದರು.

ಹುಡುಗಿಯ ಕಣ್ಣೀರು ಈಗ ಆನಂದಬಾಷ್ಪವಾಗಿ ಮಾರ್ಪಟ್ಟಿತು. ಮುಖವರಳಿತು. "ಖಂಡಿತ ತಾನೆ?........ಹಾಗಾದರೆ ಭಾಷೆಹಾಕಿ ಹೇಳಿ." ಬಾನಾಡಿ ಮಾತಿಲ್ಲದೆ ಭಾಷೆ ಹಾಕಿದರು.

ಮಗಳು ಈ ಸುದ್ದಿಯನ್ನು ಸೂಕ್ಷ್ಮವಾಗಿ ತಾಯಿಗೆ ನಿವೇದಿಸಿದಳು. ಮನೆಯಲ್ಲಿ ಹಿರಿಯರು ಮತ್ತೊಮ್ಮೆ ಮದುವೆಯ ಪ್ರಸ್ತಾಪ ತೆಗೆದಾಗ "ಆಗಲಿ, ಮಾಡಿಕೊಳ್ಳುತ್ತೇನೆ" ಎಂದು ಒಪ್ಪಿಗೆ ಕೊಟ್ಟರು – ಬಾನಾಡಿ.

ಬಾನಾಡಿಗೆ ಈ ಹುಡುಗಿಯಲ್ಲಿ ಅನುರಾಗವಿಲ್ಲದೆ ಇಲ್ಲ. ಆದರೆ ಆಕೆಗೆ ತಾನು ಯೋಗ್ಯವರನಲ್ಲವೆಂದು ಮೊದಲಿನಿಂದಲೂ ಅವರ ಒಳಮನಸ್ಸು ಎಡ ಬಿಡದೆ ನುಡಿಯುತ್ತಿತು. ತಾನು ಕನಸುಗಾರ. ಆದರ್ಶದ ಬೆನ್ನುಹತ್ತಿ ಹೋಗುವವ. ತನ್ನಂಥವನನ್ನು ಆಕೆ ಪತಿಯಾಗಿ ಪರಿಗ್ರಹಿಸಿದರೆ, ತನ್ನ ಎಲ್ಲ

ಆಸೆ – ಅಧಿಕಾರ, ಅಂತಸ್ತು, ಕೀರ್ತಿ, ಶ್ರೀಮಂತಿಕೆಗಳನ್ನು ಆಕೆ ತ್ಯಜಿಸ ಬೇಕಾಗುತ್ತದೆ. ಅಂತಹ ಸ್ತ್ರೀ ಸಹಜ ಆಸೆಯನ್ನು ಹತ್ತಿಕ್ಕಿ, ಕಲಾವಿದನ ಕಣ್ಮಣಿಯಾಗಿ, ಬಡತನದ, ಅಜ್ಞಾತದ ಬಾಳ್ವೆಯನ್ನು ಆಕೆ ಒಪ್ಪಿಯಾಳೆ? ಈ ಸಂದೇಹಕ್ಕೆ ಎಡೆಕೊಟ್ಟು ಬಾನಾಡಿ ಈ ಮದುವೆಯ ಪ್ರಸ್ತಾಪದಿಂದ ದೂರ – ಬಹುದೂರ ಸಿಡಿಯುತ್ತಿದ್ದರು. ಬಾನಾಡಿ ತನ್ನ ಬಾಳಿನ ಗೆಳತಿಯನ್ನು ಬೇರೊಂದು ಬಗೆಯಾಗಿ ಚಿತ್ರಿಸಿಕೊಂಡಿದ್ದರು. ಆಕೆಗೆ ಒಮ್ಮೆ ಬರೆದ ಕಾಲ್ಪನಿಕ ಪತ್ರದಲ್ಲಿ ತಮ್ಮ ಕನಸನ್ನು ಹೀಗೆ ತೋಡಿಕೊಂಡಿದ್ದರು.

" ಪ್ರಿಯ ಗೆಳತಿ,

"........ನಿನ್ನ ಪತ್ರ ಕರಗತವಾದೊಡನೆಯೇ ಓದುವುದಕ್ಕೆ ಆರಂಭಿಸಿದೆ. ಓದುತ್ತಾ, ಓದುತ್ತಾ ಆ ಪತ್ರದಲ್ಲಿ ನಿನ್ನ ಸೌಂದರ್ಯವನ್ನು ಕಂಡೆ........ ನಿನ್ನ ಕುಸುಮದಂತಹ ಕೈಯಿಂದ ಬರೆದ ಅಕ್ಷರಗಳಿಗೂ ನಿನ್ನ ಸೊಬಗು, ಕೋಮಲತೆ ಸಹಜವಾಗಿಯೇ ಬಂದಿದೆ........ನಿನ್ನ ಎದುರು ಮಾತನಾಡಿ ದಾಗ, ಎಷ್ಟೋ ಸಲ ನಿನ್ನ ಮಾತಿನ ಮಾಧುರ್ಯವನ್ನು ಕೇಳುತ್ತಾ ಬೆರಗಾ ದುದುಂಟು! ನಿನ್ನ ಬಾಯಿಂದ ಮಾತು ಹೊರಬಿದ್ದರೆ ಗಾನದಿಂಚರ ಕೇಳಿ ದಂತಾಗುವುದು. ಇಂದು ನಿನ್ನ ಪತ್ರ ನೋಡಿ ಅದೇ ಅನುಭವ ಮತ್ತೆ ಮತ್ತೆ ಆಗುತ್ತಿದೆ.

"ಇಲ್ಲಿಯವರೆಗೆ ನಾವು ಎಷ್ಟು ಸಲಿಗೆಯಿಂದ ಇದ್ದೆವು. ಒಬ್ಬರ ಮನಸ್ಸನ್ನು ಮತ್ತೊಬ್ಬರೆದುರಿಗೆ ಬಿಚ್ಚಿಡುತ್ತಿದ್ದೆವು............ನನ್ನ – ನಿನ್ನ ಮಧುರ ಬಾಂಧವ್ಯ ಪವಿತ್ರವಾದುದೆಂದು ತಿಳಿ. ಪ್ರೇಮ ಪ್ರಪಂಚದಲ್ಲಿ ಸರ್ವರೂ ಸ್ವತಂತ್ರರು. ಹೆಚ್ಚಿಲ್ಲ, ಕಡಿಮೆಯಿಲ್ಲ; ಮೇಲಿಲ್ಲ – ಕೀಳಿಲ್ಲ. ಅಲ್ಲಿ ಸಂಕೋಚಕ್ಕೆ ಎಡೆಯೆಯಿಲ್ಲ. ಆ ಪವಿತ್ರಪ್ರೇಮ ಬಹು ವಿಸ್ತಾರವಾ ದುದು. ಅಂತೆಯೇ ಅಲ್ಲಿ ಸೇರುವ ಪ್ರೇಮಿಗಳ ಮನಸ್ಸು. ಆ ವಿಸ್ತಾರ ಜಗತ್ತಿನಲ್ಲಿರುವುದೆಲ್ಲಾ ಚಲುವಿನ ಗಣಿಗಳೇ. ಅಲ್ಲಿ ಸೇರುವವರೆಲ್ಲ ಸೌಂದರ್ಯೋ ಪಾಸಕರೇ. ನಿನ್ನ ಸೌಂದರ್ಯ ನನ್ನ ಪ್ರೇಮ ಪ್ರಪಂಚದಲ್ಲಿ ಬೆಳಗುವ ಸೊಡರಿನಂತಿದೆ. ಆ ಸೊಡರಿಲ್ಲದೆ ನನ್ನ ಪ್ರಪಂಚಕ್ಕೆ ಬೆಳಕಿಲ್ಲ. ಪ್ರೇಮ ಪ್ರಪಂಚವೆಂಬ ದಿವ್ಯ ಪಾತ್ರೆಯಲ್ಲಿ ಮಧುರ ಮಧುವಿದ್ದಂತೆ ನೀನಿರುವೆ.

ಮಧು – ಮರಿದುಂಬಿಯ ಮನಸೆಳೆಯುವಂತೆ ನೀನೆನ್ನ ಸೆಳೆಯುತ್ತಿರುವೆ. ಆ ಮಧುವನ್ನು ಸವಿಯುವ ದಿನ ಬರುವುದೆಂದೋ ?................

"ನೀನು ಚಲುವಿನ ನೆಲೆಮನೆ; ನಾನು ಚಿತ್ರಕಲೋಪಾಸಕ. ನಿನ್ನ ಚಲುವಿನ ಸಂಪರ್ಕವಿಲ್ಲದೆ ನನ್ನ ಕಲೆಗೆ ಜೀವಕಳೆಯಿಲ್ಲ. ಅಂದಮೇಲೆ ನಮ್ಮಿಬ್ಬರ ಬಾಂಧವ್ಯ ಎಷ್ಟರಮಟ್ಟಿಗೆ ಹಣೆದುಕೊಂಡಿದೆ ಎಂದು ನಿನಗೆ ಅರ್ಥವಾಗಬಹುದು.

"...........ನಾನು ಹೋಗುತ್ತಿದ್ದ ಸ್ಥಳಗಳಿಗೆ ನೀನಿಲ್ಲದೆ ನಾನೊಬ್ಬನೇ ಹೋಗಲಾರೆ. ನೀನಿಲ್ಲದೆ ಆ ಉದ್ಯಾನವನಗಳು, ವಿಹಾರಗಳು, ಆ ಚಲನ ಚಿತ್ರಗಳು ಶೂನ್ಯವಾಗಿವೆ...........ನೀನು ಊರಿಗೆ ಹೋಗುವಾಗ ನಿನ್ನೊಡನೆ ನನ್ನ ಹೃದಯವನ್ನೂ, ಮನಸ್ಸನ್ನೂ ಅಪಹರಿಸಿಕೊಂಡು ಹೋಗುತ್ತಿರುವೆ. ಇನ್ನು ಆ ನಿನ್ನ ಮುಖಾರವಿಂದ ಕಾಣುವತನಕ ನನಗೆಲ್ಲಿ ಶಾಂತಿ ?............ ........ಹೋಗಿ ಬಾರೆನ್ನ ಮನದನ್ನೆ, ಚಿಂತಿಸದಿರೆನ್ನ ಹೃತ್ಕಮಲ ಪೀಠಕಧಿ ಕಾರಿಣಿ ! ನೀನೆನ್ನ ಜೀವನದೊಡನಾಡಿ !!"........

ಬಾನಾಡಿ ತನ್ನ ಸೋದರತ್ತೆಯ ಮಗಳನ್ನು ಈವೊದಲೆಂದೂ ಮನದನ್ನೆ ಯಾಗಿ ಕಂಡು, ಜೀವನದ ಒಡನಾಡಿಯಾಗಿ ತಿಳಿದು, ಹೃತ್ಕಮಲ ಪೀಠಕ್ಕೆ ಅಧಿಕಾರಿಣಿಯನ್ನಾಗಿ ಮಾಡಿಕೊಂಡಿರಲಿಲ್ಲ. ಆದರೆ ಹೆಣ್ಣುಮಗಳು ಕಣ್ಣೀರು ಸುರಿಸಿ ನಿರ್ಮಲಾಂತಃಕರಣದ ಪ್ರೇಮವಾಹಿನಿಯಿಂದ ಬಾನಾಡಿಯ ಕಣ್ಣು ತೊಳೆದಾಗ ಬಾನಾಡಿ ಅತ್ತೆಯ ಮಗಳಲ್ಲಿ, ತನ್ನ ಕನಸಿನ ಕನ್ಯೆಯ ದರ್ಶನ ಪಡೆದು ಆಕೆಯನ್ನು ಮುಕ್ತ ಮನಸ್ಸಿನಿಂದ ಪ್ರೇಯಸಿಯಾಗಿ ಒಪ್ಪಿದರು. ಆದರೆ ನನ್ನ ವಿಷಯವೊ ?............

ಬಾನಾಡಿ ಮತ್ತು ಶ್ರೀಕಾಂತನ್ ಒಂದೇ ಊರಿನವರು. ಅವರಿಬ್ಬರಿಗೂ ಬಾದರಾಯಣ ಸಂಬಂಧ. ಶ್ರೀಕಾಂತನ್ ನೋಡಲು ಅಂಥ ದಡೂತಿ ಆಳಲ್ಲದಿದ್ದರೂ – ಅಷ್ಟೇನು ಕುಳ್ಳಲ್ಲ. ಆತ ವಿಲಾಸಿ – ಕಾದಂಬರಿ, ಶಾಕುಂತಲಾ ಕಾವ್ಯಗಳು ಅವರಿಗೆ ಕರತಲಾಮಲಕ. ಏನು ಬರೆದರೂ, ಏನು ಹೇಳಿದರೂ ಆ ಕಾವ್ಯಗಳಿಂದ ಒಂದು ಪಂಕ್ತಿಯನ್ನು ಉದ್ಧರಿಸಿ ಹೇಳಿದ ಹೊರತು ಅವರಿಗೆ ಸಮಾಧಾನವಿಲ್ಲ. ಅವರು ಮೊದಲಿನಿಂದಲೂ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದು ಬಂದವರು. ಇಂತಹವರಿಗೆ ಜೀವನ – ಕಾಲೇಜಿನ

ಜೀವನ–ಒಂದು ಸುಖೀಗೀತವೆನಿಸುವುದು ಸಹಜವೇ. ಅವರ ಭಾಗಕ್ಕೆ ಮಹಾರಾಜಾ ಕಾಲೇಜು ಒಂದು ಅಪ್ಸರೆಯರ ಲೋಕ. ಕಾಲೇಜು ಕುಮಾರಿಯರು ತಾರಾಮಣಿಯರನ್ನು ನಾಚಿಸುವಂತೆ ವಸ್ತ್ರಾಲಂಕಾರ ಭೂಷಿತರಾಗಿ ಕಾಲೇಜಿಗೆ ಬಂದರಂತೂ ಶ್ರೀಕಾಂತನ್‌ಗೆ ಹಬ್ಬ.

ಶ್ರೀಕಾಂತನ್ ಕಾಲೇಜು ಹುಡುಗಿಯರಿಗೆ ಹೆಸರಿಡುವುದರಲ್ಲಿ ನಿಸ್ಸೀಮರು. ಬಳುಕುತ್ತಾ, ಬಾಗುತ್ತಾ ಕಾಲೇಜಿಗೆ ಬರುವ ಎರಡು ಜಡೆಯ ಹುಡುಗಿಯೊಬ್ಬಳಿಗೆ ಅವರು "ರೂಪರಾಣಿ ರವೀನ" ಎಂದು ಹೆಸರಿಟ್ಟಿದ್ದರು. ಮತ್ತೊಬ್ಬ ವಿಶಾಲಾಕ್ಷಿಗೆ "ಅಗಲಗಣ್ಣಮ್ಮ", ಮತ್ತೊಬ್ಬಾಕೆಗೆ "ಹಲಸಿನ ಕಾಯಿ ಹಸುವದನೆ" ಹೀಗೆಯೇ ಹಲವಾರು ಹೆಸರುಗಳು !

ಒಮ್ಮೆ ಶ್ರೀಕಾಂತನ್ ಬಾನಾಡಿಯಂತೆ ತಮ್ಮ ಕಲ್ಪನಾ ಸುಂದರಿಗೆ ಒಂದು ಪ್ರಣಯ ಪತ್ರ ಬರೆದಿದ್ದರು.

" ಹೃದಯೇಶ್ವರಿ

" ಅಳಕಾಪುರಿಯಲ್ಲಿ ತನ್ನ ಪ್ರೇಮ ಪುತ್ಥಳಿಯನ್ನು ಬಿಟ್ಟು, ಯಕ್ಷ ಒಂದು ವರ್ಷಕಾಲ ರಾಮಗಿರಿ ಪರ್ವತದ ಮೇಲೆ ಏಕಾಂಗಿಯಾಗಿ ವಾಸಿಸಬೇಕಾಯಿತು. ತನ್ನ ಅರಸಿಯ ಅಗಲಿಕೆಯನ್ನು ಸಹಿಸಲಾರದೆ, ಬಸವಳಿದು ಬೆಂಡಾಗಿ, ಆಕೆಯ ಯೋಗಕ್ಷೇಮವನ್ನು ತಿಳಿದುಕೊಳ್ಳುವುದಕ್ಕಾಗಿ, ಹಾಗೂ, ತನ್ನ ಯೋಗಕ್ಷೇಮವನ್ನು ಆಕೆಗೆ ತಿಳಿಸಿ, ಬೆಂದಮನಕ್ಕೆ ಕೊಂಚ ಶಾಂತಿಯನ್ನೀಯುವ ಸಲುವಾಗಿ ಮೇಘವನ್ನೇ ದೂತನನ್ನಾಗಿ ಮಾಡಿ ಸಂದೇಶವನ್ನು ಕಳುಹಿಸುತ್ತಾನೆ........

" ಮನದನ್ನೆ, ಚಿಂತಿಸದಿರೆನ್ನ ಚನ್ನಿಗ ಕನ್ನೆ ! ಇದುವರೆವಿಗೆ ನಾವಿಬ್ಬರು ಪ್ರಣಯ ರಥದಲ್ಲಿ ಕುಳಿತು ವಿಹರಿಸುತ್ತಿದ್ದೆವು ; ಕಷ್ಟಸುಖಗಳಲ್ಲಿ ಒಂದಾಗಿ ನಡೆಯುತ್ತಿದ್ದೆವು. ಆದರೆ ಇಂದು ನಮಗೆ ಪ್ರಣಯ ಪತ್ರಗಳೇ ಗತಿ !........

" ಗೆಳತಿ, ನಮ್ಮಿಬ್ಬರ ಪ್ರೇಮ ಹೇಗುಂಟಾಯಿತು. ಈ ಪ್ರೇಮ ವೃಕ್ಷಕ್ಕೆ ಎಂತು ಬೀಜ ಬಿದ್ದಿತು ಎನ್ನುವುದನ್ನು ನೆನೆಸಿಕೊಂಡರೆ ಈಗಲೂ ಆಶ್ಚರ್ಯವಾಗುತ್ತದೆ. ಕಾರ್ಯಾರ್ಥವಾಗಿ ಆಶ್ರಮಕ್ಕೆ ಆಗಮಿಸಿದ ಅರಸನಾದ ದುಷ್ಯಂತ ಆಕಸ್ಮಿಕವಾಗಿ ಕಂಡ ಮುಗ್ಧ ಮನೋಹರಿಯಾದ ಶಾಕುಂತಲೆಯ ರೂಪಿಗೆ ಮನಸೋತಂತೆ, ನಾನು ಅಂದು ಎಂದಿನಂತೆ ಕಿಟಕಿಯಲ್ಲಿ ಕನ್ನಡಿ

ಯಿಟ್ಟು 'ಕ್ರಾಪು' ಬಾಚಿಕೊಳ್ಳುತ್ತಿರುವಾಗ ಆಕಸ್ಮಿಕವಾಗಿ ಕಂಡ ನಿನ್ನ ರೂಪಿಗೂ, ಚಲುವಿಗೂ ಮನಸೋತೆ. ಅಂದು ನಾನು ವಿಹಾರಕ್ಕೆಂದು ಕರೆದೊಡನೆಯೇ ನೀನು ತಡಮಾಡದೆ ಅಲಂಕೃತಳಾಗಿ, ತಾಯಿಯವರ ಅನುಮತಿ ಪಡೆದು ಹೊರಟುಬಂದೆ........

"ಒಮ್ಮೆ ನಾವಿಬ್ಬರು ಚಾಮುಂಡಿ ಬೆಟ್ಟಕ್ಕೆ ಹೋಗಿದ್ದಾಗ, ನಮ್ಮಿಬ್ಬರ ಪ್ರೀತಿ ಚಿರಾಯುವಾಗಿರಲೆಂದು ನಾವಿಬ್ಬರು ದೇವಿಯ ಪಾದಗಳಿಗೆರಗಿ, 'ಡಬ್ಬಿ ಗಡಿಗೆಗೆ' ಮುಡುಪು ಹಾಕಿದುದನ್ನು ಮರೆತಿಲ್ಲ ತಾನೆ? ಬೆಟ್ಟದ ಮೇಲಿನ ಅರಮನೆಯ ಕಟಕಟೆಯ ಮುಂಚೆ ನೀನು ಸುಂದರ ದೃಶ್ಯಗಳನ್ನು ನೋಡುತ್ತಾ ಬೇಲೂರಿನ ಶಿಲಾಬಾಲಕಿಯಂತೆ ನಿಂತಾಗ, ನಾನು ಕ್ಯಾಮರಾದಲ್ಲಿ ತೆಗೆದುಕೊಂಡ ಫೋಟೋ ಇನ್ನೂ ನನ್ನ 'ಟೇಬಲ್ಲ' ಮೇಲೆ ಇದೆ. ಆ ಫೋಟೋಕ್ಕೆ ಸಂಜೆ ವಿಹಾರ ಮುಗಿಸಿಕೊಂಡು ಬರುವಾಗ ಹೂ ತಂದು ಅಲಂಕರಿಸುತ್ತೇನೆ.

"ನೆನಪಿದೆಯೇ,....ಆ ಪೂರ್ಣಿಮೆಯ ದಿನ ನಾವಿಬ್ಬರು ಕುಕ್ಕನ ಹಳ್ಳಿ ಕೆರೆಯ ವನಮಾಲಿಕಾ ಮಂಟಪದಲ್ಲಿ ಕುಳಿತಾಗ.........ನಾನು ನಿನ್ನ ಮುಡಿಗೆ ಕೆಂಗುಲಾಬಿಯನ್ನು ಮುಡಿಸಿ, ಚಂದ್ರಮನ ಬೆಳದಿಂಗಳಿನಲ್ಲಿ ಬೆಳಗುತ್ತಿದ್ದ ಆ ನಿನ್ನ ವದನವನ್ನು ನೋಡಿ ನಾನು ಚುಂಬಿಸಿದ್ದು........ನಮ್ಮಲ್ಲಾದ ಸರಸೋಕ್ತಿ....ನಾನು ಹೇಳಿದ ದುಷ್ಯಂತ ಶಾಕುಂತಲೆಯರ ಪ್ರಣಯ ಕಥೆ........

"ಈ ಪ್ರಣಯಿಗಳಿಗೆ ಒಂದೊಂದು ಸಾರಿ ಬರುವ ಕಷ್ಟಗಳನ್ನು ನೆನೆದರೆ ಎಲ್ಲಾ ಪ್ರಣಯಿಗಳ ಪಾಡು ಹೀಗೆಯೇ....ಎಂದೆನಿಸುತ್ತದೆ. 'ಪ್ರಳಯ ಬಂದರೂ ಪ್ರೀತಿ ಹೋಗುವುದಿಲ್ಲ' ಎಂದು ಕಾದಂಬರಿಯಲ್ಲಿ ಓದಿದ್ದು ನಿನಗೆ ನೆನಪಿರಬಹುದು. ರಾಜಕುಮಾರಿಯಾದ ಮಹಾಶ್ವೇತೆಗೆ ಋಷಿ ಕುಮಾರನಲ್ಲಿ ಪ್ರೀತಿಯುಂಟಾಗಿ, ತಾನು ಬಯಸಿದ ಪ್ರಿಯನನ್ನು ಪಡೆಯುವುದಕ್ಕಾಗಿ ಮೂರು ಜನ್ಮಗಳನ್ನು ತಪಸ್ಸಿನಲ್ಲಿ ಕಳೆಯುತ್ತಾಳೆ. ಕಡೆಗೆ ತಪಸ್ಸು ಸಿದ್ಧಿಸುತ್ತದೆ.

"ನನ್ನ ಚಿನ್ನ, ನಮ್ಮಿಬ್ಬರ ಪ್ರೇಮ ನಿಶ್ಚಲವಾಗಿರಲಿ. ಬರಿಯ ಇಂದ್ರಿಯ ಸುಖಕ್ಕಾಗಿ ನಾವಿಂದು ಪ್ರೀತಿಸುತ್ತಿಲ್ಲ. ಅಂಥ ನೀಚ ಬಾಳು ಬೇಡ. ಕ್ಷುದ್ರಾತುರನಾದವನಿಗೆ ಕಬಳಿಸುವುದೊಂದು ಗೊತ್ತೇ ಹೊರತು,

ಶುಚಿ, ರುಚಿಗಳ ಅರಿವಾಗುವುದಿಲ್ಲ. ಅಂತೇ ಕಾಮಾತುರನಿಗೆ ನಿಜವಾದ ಪ್ರೇಮದ ಬೆಲೆ ತಿಳಿಯದು. ಕಾಮವೆಂಬ ಅಗ್ನಿ ಅವನನ್ನು ದಹಿಸುತ್ತಿರುವಾಗ ಪ್ರೇಯಸಿಯ ಇಷ್ಟ, ಅಭೀಷ್ಟಗಳು ಅವನಿಗೇಕೆ? ...ನಿಜವಾದ ಪ್ರೇಮ ನಮ್ಮದಾಗಲಿ!

"ಮನದನ್ನೆ! ನಮ್ಮಿಬ್ಬರ ಪ್ರೇಮವೃಕ್ಷಕ್ಕೆ ನಿಮ್ಮ ತಂದೆಯಿಂದ ಕೊಡಲಿ ಪೆಟ್ಟು ಬೀಳದಂತೆ ನೋಡಿಕೋ........ನಮ್ಮ ನಿಮ್ಮ ಕುಲ ಡೊಂಕಾದರೂ, ನಮ್ಮ ಪ್ರೀತಿಯು ಡೊಂಕಲ್ಲ........ವಿಧಿಯಿತ್ತ ಕುಲಡೊಂಕು, ನಮ್ಮ ಪ್ರೀತಿಯು ಡೊಂಕೆ?........"

ರಸಿಕ ಶ್ರೀಕಾಂತನ್, ಒಮ್ಮೆ ತಮ್ಮ ರಸಿಕ ಪ್ರವರ್ತಿಯಿಂದಾಗಿ ಧರ್ಮ ಸಂಕಟಕ್ಕೆ ಸಿಕ್ಕಿಬಿದ್ದರು.

ಅಂದು ಮಿತ್ರಮೇಳದವರು ಕಾಲೇಜಿನ ಜೂನಿಯರ್ ಬಿ.ಎ. ಮಂದಿರದಲ್ಲಿ ಒಂದು ನಾಟಕವನ್ನು ಅಭಿನಯಿಸಲಿದ್ದರು. ನಾಟಕಕ್ಕೆ ಬೇಕಾದ ಎಲ್ಲಾ ವಸ್ತುಗಳ ಸಿದ್ಧತೆ ಮಾಡಿಕೊಂಡಿದ್ದರು. ನಾಟಕ ಇನ್ನೇನು ಆರಂಭವಾಗುವ ಹೊತ್ತು. ಮಂದಿರ ಕಾಲೇಜು ಹುಡುಗ ಹುಡುಗಿಯರಿಂದ ಕಿಕ್ಕಿರಿದಿದೆ. ಇತ್ತ ಬಣ್ಣದ ಕೋಣೆಯಲ್ಲಿ ಪಾತ್ರಧಾರಿಗಳ ವೇಷಭೂಷಣ ಮುಗಿದಿದೆ. ಸ್ತ್ರೀ ಪಾತ್ರಧಾರಿ ಬಣ್ಣ ಬಳಿದುಕೊಂಡು, ತಲೆಗೆ 'ಟೋರ್ಫ'ಕಟ್ಟಿ, ಹೂ ಮುಡಿದು, ಸೀರೆಯುಟ್ಟು ಎದೆಗೆ 'ಬಾಡಿ'ಬಿಗಿದು, ಕಂಚುಕಕ್ಕಾಗಿ ಕೈಚೀಲ ಹುಡುಕಿದ. ಕುಪ್ಪಸ ಅಲ್ಲಿಂದ ಮಾಯವಾಗಿತ್ತು. ಯೂನಿಯನ್‌ನಿಂದ ನಾಟಕದ ಸಾಮಾನುಗಳನ್ನು ತರುವ ಆತುರದಲ್ಲಿ ಕುಪ್ಪಸವನ್ನು ಅಲ್ಲಿಯೇ ಮರೆತು ಬಿಟ್ಟಿದ್ದರು. ಈ ಸುದ್ದಿ ಕಾರ್ಯದರ್ಶಿಗೆ ತಿಳಿಯಿತು. ಅವನ ಎದೆ 'ದಸಕ್' ಎಂದಿತು. ಅವನ ಕಾರ್ಯದರ್ಶಿತ್ವದಲ್ಲಿ ಎಂದೂ ಹೀಗಾಗಿರಲಿಲ್ಲ. ಇಂದು ನಾಟಕನಿಂತು ಅವಮಾನವಾಗುವ ಹೊತ್ತು ಬಂತೇ ಎಂದು ತಲೆಯ ಮೇಲೆ ಕೈಯಿಟ್ಟು ಕುಳಿತ.

ಹೊರಗಡೆ ಬಿ.ಎ. ಮಂದಿರದಿಂದ ಪ್ರೇಕ್ಷಕರ ಗದ್ದಲ, ಶಂಕವಾದ್ಯ, ಒಂದೇ ಸಮನೆ ಕೇಳಬರುತ್ತಿತ್ತು. ಇಂಥ ಹೊತ್ತಿನಲ್ಲಿ ಏನು ಮಾಡಬೇಕು?

ಆಗ ಶ್ರೀಕಾಂತನ್ ಅಂದರು "ನಿಮಗೆ 'ಲೇಡೀಸ್ ಫ್ರೆಂಡ್ಸ್' ಯಾರಾದರೂ ಇದ್ದರೆ ಅವರನ್ನು ಕೇಳಿ ತೆಗೆದುಕೊಂಡು ಬನ್ನಿ!"

ಈ ಮಾತನ್ನು ಕೇಳಿ ಅಲ್ಲಿದ್ದ ನಟರೆಲ್ಲ 'ಮುಸಿಮುಸಿ' ನಕ್ಕರು. ಕಾರ್ಯದರ್ಶಿಗೆ ಈ ಮಾತಿನಿಂದ ಮತ್ತಷ್ಟು ರೇಗಿತು. ಆತ ಸಿಟ್ಟಿನಿಂದ ಒದರಿದ "ನಿಮಗೆ ಹಾಸ್ಯಕ್ಕೆ ಹೊತ್ತು ಗೊತ್ತು ಒಂದೂ ತಿಳಿಯದು ಶ್ರೀಕಾಂತನ್."

"ನಾನು ಹಾಸ್ಯಕ್ಕಾಗಿ ಹಾಗೆನ್ನಲಿಲ್ಲ. ನೀವು ಹಾಗೆಂದು ತಿಳಿದರೆ ನಿಮ್ಮದೇ ತಪ್ಪು. ಇಂಥ ಅವೇಳೆಯಲ್ಲಿ ನಮಗೆ 'ಚೌಲಿವುಸ್' ಎಲ್ಲಿ ಸಿಕ್ಕುತ್ತೆ ಹೇಳಿ....ಇನ್ನು ಮಾರ್ಕೆಟ್ಟಿಗೆ ಓಡಬೇಕು – ಕೊಂಡುತರಲು....ಆ ವೇಳೆಗೆ ಬಂದವರೆಲ್ಲಾ ಎದ್ದು ಹೋಗಿರುತ್ತಾರೆ............"

ಕಾರ್ಯದರ್ಶಿ ತೆಪ್ಪಗಾದ.

"ನೀವೆಂದಂತೆಯೇ ಆಗಲಿ. ನನಗೆ 'ಲೇಡೀಸ್ ಫ್ರೆಂಡ್ಸ್' ಯಾರೂ ಇಲ್ಲ. ಈ ಕೆಲಸಕ್ಕೆ ನೀವೇ ಸರಿ.........ಎಲ್ಲಿ – ಹೊರಡಿ.........ಇನ್ನು ಹತ್ತು ನಿಮಿಷದೊಳಗೆ ಎಲ್ಲಿಂದಾದರೂ ಪತ್ತೆ ಹಚ್ಚಿ ತನ್ನಿ............"

ಶ್ರೀಕಾಂತನ್‌ಗೆ ಈಗ ಒಳ್ಳೆಯ ಪೀಕಲಾಟ. ಮದುವೆಯಾಗೋ ಗುಂಡ...............ಎಂದು ಹೇಳಿದವನ ಪಾಡಾಯಿತು, ಅವರದು. ತಮ್ಮ ಸೂಚನೆ ತಮ್ಮ ಕುತ್ತಿಗೆಗೆ ಉರುಳಾದೀತೆಂದು ಅವರೆಣಿಸಿರಲಿಲ್ಲ. ಇಂತಹ ಹೊತ್ತಿನಲ್ಲಿ ಯಾರನ್ನು ಕೇಳಬೇಕು – ನಿಮ್ಮ ಕುಪ್ಪಸ ಕೊಡಿರೆಂದು. ಹಾಗೇನಾದರೂ ಕೇಳಹೋದರೆ, ಕೇಳಿದವರಿಗೆ ಕಪಾಳಮೋಕ್ಷ ಖಂಡಿತ.!.... ಒಳ್ಳೆಯ ಗ್ರಹಚಾರ ಬಂತಲ್ಲ ಎಂದುಕೊಂಡು ವಿಧಿಯಿಲ್ಲದೆ, ಕುಪ್ಪಸ ಪತ್ತೆ ಹಚ್ಚಿಕೊಂಡು ಬರಲು ಸೈಕಲ್ ಹತ್ತಿದರು- ಶ್ರೀಕಾಂತನ್‌ಗೆ ದೂರದ ಆಸೆಯೆಂದರೆ, ಅವರು ಇಂಟರ್ ಕಾಲೇಜಿನಲ್ಲಿ ಕಲಿಯುತ್ತಿರುವಾಗ ಯಾರದೋ ಮನೆಯಲ್ಲಿ 'ರೂಂ' ಬಾಡಿಗೆಗೆ ತೆಗೆದುಕೊಂಡು ಇದ್ದರಂತೆ. ಆ ಮನೆಯವರಿಗೂ, ಶ್ರೀಕಾಂತನ್‌ಗೂ ತುಂಬಾ ವಿಶ್ವಾಸ, ಪರಿಚಯವಿತ್ತು. ಅವರಿಗೆ ತನ್ನ ಅಸಹಾಯಕ, ಸಂದಿಗ್ಧ ಪರಿಸ್ಥಿತಿಯನ್ನು ವಿವರಿಸಿದರೆ ಆಪತ್ಕಾಲದಲ್ಲಿ ನೆರವಾದಾರೆಂಬ – ಒಂದು ಆಸೆ.

ಒಂದೆರಡು ನಿಮಿಷಗಳಲ್ಲೇ ಅವರ ಮನೆಯೂ ಸಿಕ್ಕಿತು. ಗೇಟು ತೆರೆದು ಒಳಹೊಕ್ಕುದುದೂ ಆಯಿತು. ಅದರೆ ತಾವು ಬಂದ ವಿಷಯವನ್ನು ಹೇಗೆ ತಿಳಿಸಬೇಕು ಎಂದು ಆಲೋಚಿಸುತ್ತಾ ನಿಂತಿರುವಾಗಲೇ ಮನೆಯಾಕೆ ಎದುರಿಗೆ

ಬಂದು ನಿಂತರು. ಆಗ ಶ್ರೀಕಾಂತನ್‌ಗೆ ಜಂಘಾಬಲವೇ ಉಡುಗಿತು. ಮೂಕರಾಗಿ ನಿಂತ ಅವರನ್ನು ಕಂಡು, ಮನೆಯಾಕೆಯೇ ಮಾತನಾಡಿಸಿದರು.

"ಯಾಕೆ, ಶ್ರೀಕಾಂತನ್ ಹೀಗಿದ್ದೀರಿ, ಏನು ಅಪರೂಪವಾಗಿ ಈ ಕಡೆ ಬಂದು ಬಿಟ್ಟಿದ್ದೀರಲ್ಲ....ಬನ್ನಿ....ಕುಳಿತುಕೊಳ್ಳಿ."

"ಇಲ್ಲ, ನಾನು ಕುತ್ಕೊಳ್ಳೋ ಹಾಗಿಲ್ಲ. ನಿಮ್ಮಿಂದ ಒಂದು ಉಪಕಾರ ಆಗಬೇಕಾಗಿದೆ. ನೀವು ದಯವಿಟ್ಟು........ಏನೂ ತಿಳೀದೆ ಮಾಡ್ಕೊಡ ಬೇಕು...."

"ಏನು ಅಂಥಾ ಉಪಕಾರ ನನ್ನಿಂದಾಗಬೇಕಾದ್ದು....ಹೇಳಿ ಆಗೋ ದಾದ್ರೆ ಖಂಡಿತ ಮಾಡ್ಕೊಡ್ತೇನೆ...."

"ನೀವು ಖಂಡಿತ ಮಾಡ್ಕೊಡ್ತೇನೆ ಅಂದ್ರೇನೇ ನಾನು ಹೇಳೋದು...."

"ಆಗಲಿ, ಅದೇನು ವಿಷಯ ಹೇಳ್ಬಾರ್ದೇ? ಯಾಕಿಷ್ಟು ಸಂಕೋಚ...."

"ನೀವೇನೂ ತಿಳ್ಕೋಬಾರ್ದು. ನಾವು ಹುಡುಗ್ರು....ಕಾಲೇಜ್ನಲ್ಲಿ ನಾಟ್ಕ ಇಟ್ಕೊಂಡಿದೀವಿ. ಬಣ್ಣ ಬಳ್ಕೊಂಡು ಇನ್ನೇನ್ 'ಸ್ಟೇಜ್'ಗೆ ಬರ್ಬೇ ಕೂನ್ನೋವಾಗ – 'ಫೀಮೇಲ್ ರೋಲ್'ದು ಕುಪ್ಪಸವೇ ಮಾಯವಾಗಿ ಬಿಟ್ಟಿದೆ. ಈಗ ಅದಿಲ್ಲದೆ ನಾಟ್ಕ ನಡೆಯೋ ಹಾಗಿಲ್ಲ. ನಾಟ್ಕ ನಿಂತ್ರೆ ನಮಗೆ ತುಂಬಾ ಅವಮಾನವಾಗುತ್ತೆ. ಏನಾದ್ರೂ ಮಾಡಿ ನೀವು ನಮ್ಮ ಮಾನ ಉಳಿಸಿಕೊಡಬೇಕು...."

ಮನೆಯಾಕೆ ಉತ್ತರರೂಪವಾಗಿ 'ಖೊಳ್' ಎಂದು ನಕ್ಕುಬಿಟ್ಟರು.

"ಅಯ್ಯೋ ಹುಡುಗಾ! ಇಷ್ಟು ಕೇಳೋಕೆ ಸಂಕೋಚ ಪಟ್ಕೋ ಬೇಕೇನೋ...." ಎಂದು ಅವರು, ತಮ್ಮ ಮಗಳ ಹತ್ತೆಂಟು ಕುಪ್ಪಸಗಳನ್ನು ತಂದು ಮುಂದೆ ಹಾಕಿದರು. ಶ್ರೀಕಾಂತನ್ ಕೈಗೆ ಸಿಕ್ಕಿದ್ದನ್ನು ಆರಿಸಿ ಕೊಂಡು, ಅವರಿಗೆ 'ಥ್ಯಾಂಕ್ಸ್' ಹೇಳಿ, ಒಂದೇ ಉಸುರಿನಲ್ಲಿ ಕಾಲೇಜಿಗೆ ಬಂದು ಬಿದ್ದರು. ಅಂತು ಅಂದು ಶ್ರೀಕಾಂತನ್ ಮೇಳದ ಮಾನ ಉಳಿಸಿ ದರು; ಜೊತೆಗೆ ತಮ್ಮ ಮಾನವನ್ನೂ ಉಳಿಸಿಕೊಂಡರು!

ಶ್ರೀಧರ್, ನೋಡಲು ಅಂತಹ ಪ್ರತಿಭಾಶಾಲಿ ವ್ಯಕ್ತಿಯಾಗಿ ಕಾಣ ದಿದ್ದರೂ, ಆತ ಒಳ್ಳೆಯ ನಟ. ನಾಟಕಕಾರ. ಯಾವ ನಾಟಕದ ಯಾವ ಪಾತ್ರ ಕೊಟ್ಟರೂ ಚೆನ್ನಾಗಿ ಅಭಿನಯಿಸಬಲ್ಲ ಚದುರ – ಚೋದ್ಯಪುರದ

ಚೋದಿಗರಾಯು ! ಒಂದು ಬಾರಿ ಹಠಮಾಡಿಕೊಂಡು ಒಂದೇ ರಾತ್ರಿಯಲ್ಲಿ ಇಡೀ ನಾಟಕವನ್ನು ಬಾಯಿಗೆ ಗಟ್ಟಿಮಾಡಿ, ಮರುದಿನ ಸಾಯಂಕಾಲ ಅದನ್ನು ಯಶಸ್ವಿಯಾಗಿ ಅಭಿನಯಿಸಿಬಿಟ್ಟರು.

ಶ್ರೀಧರನ್ ಹುಟ್ಟು ರಸಿಕ. ' ಉಫ್ ' ಎಂದು ಊದಿದರೆ ಹಾರಿ ಹೋಗಬಲ್ಲ, ಬಡಕು ಬಡಕಲಾದ ಆ ವ್ಯಕ್ತಿ – ನಗೆಯ ಬುಗ್ಗೆ ಎಂದರೂ ಸರಿ. ಅವರ ಕನಸುಗಳೆಲ್ಲಾ ವಾಸ್ತವ ಜಗತ್ತಿನ ಆಗುಹೋಗುಗಳು.

ಇದ್ದಷ್ಟು ದಿನ ನೆಮ್ಮದಿಯಾಗಿ ಬದುಕಬೇಕು. ಹತ್ತು ಜನಕ್ಕೆ ಉಪಯೋಗವಾಗುವಂತಹ ಕೆಲಸಗಳನ್ನು ಮಾಡಿ, ಅವರಿಂದ ' ಪುಣ್ಯಾತ್ಮ ' ಎನಿಸಿಕೊಂಡರೆ ಅದೇ ತಮ್ಮ ಜೀವನ ಸಾಫಲ್ಯ ಎಂದು ತಿಳಿದವರು – ಅವರು. ಅವರ ಜೀವನದೃಷ್ಟಿ ಅವರ ಮಾತಿನಲ್ಲೇ ಸಂಗ್ರಹಿಸುವುದಾದರೆ, " ನನ್ನದು ತೃಪ್ತಿ ಜೀವನ. ನನ್ನ ಪ್ರಪಂಚದಲ್ಲಿ ನಾನಿದ್ದರೂ, ಹೊರಗಿನ ಪ್ರಪಂಚದಿಂದ ದೂರವಿರುವುದಿಲ್ಲ. ನನ್ನಿಂದಾಗುವ ಸೇವೆಯನ್ನು ಜಗಕ್ಕೆ ಸಲ್ಲಿಸುತ್ತಾ ನನ್ನ ಜೀವನವನ್ನು ಸಾರ್ಥಕಗೊಳಿಸುತ್ತೇನೆ........ನಾವು ಗಂಡ – ಹೆಂಡಿರು ಸಂಸಾರವೆನ್ನುವ ವನದಲ್ಲಿ ನಳನಳಿಸುವ ಎರಡು ಜೋಡಿ ಗುಲಾಬಿಯಿದ್ದಂತೆ, ಸುತ್ತಲೂ ಕಂಪನ್ನು ಬೀರುತ್ತಾ ಇರಬೇಕೆನ್ನುವುದೇ ನಮ್ಮ ಆಸೆ !............ ಸಂಸಾರವೇ ನಮಗೆ ದೇವಾಲಯ ; ತಂದೆತಾಯಿಗಳೇ ಅಲ್ಲಿನ ದೇವರುಗಳು. ಅವರ ಸೇವೆಯೇ ಪೂಜಾವಿಧಿ ; ಮಕ್ಕಳನ್ನು ಸಾಕಿ ಸಲಹಿ ಯೋಗ್ಯರನ್ನಾಗಿ ಮಾಡುವುದೇ ತಪಸ್ಸು........! "

ಈ ಮೂವರು ಗೆಳೆಯರ ಹಾಡು ಒಂದಾದರೆ, ಅನಂತ್ ಅವರ ಹಾಡೇ ಬೇರೆ.

ಅನಂತ್ ನನ್ನ ಬಾಲ್ಯ ಗೆಳೆಯರು. ನಾನು ಬೆಂಗಳೂರಿನಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ನನ್ನ ಅವರ ಪರಿಚಯ ಮೊದಲಾಯಿತು. ಆಗ ಅವರು ಇಂಟರ್‌ಮಿಡಿಯೆಟ್ ಓದುತ್ತಿದ್ದರು. ಆದರೂ ಆಟಪಾಟಗಳಲ್ಲಿ ಅವರು ನಮ್ಮೊಂದಿಗೆ ಬೆರೆಯುತ್ತಿದ್ದರು. ಅನಂತ್ ಅವರನ್ನು ಕಂಡರೆ ಆಗ ನಮಗೆ ಅಸೂಯೆ. ನೋಡಲು ನಮಗಿಂತ ಕುಳ್ಳಾಗಿದ್ದರೂ, ನಮಗಿಂತ ದೊಡ್ಡ ತರಗತಿಯಲ್ಲಿದ್ದಾರೆಂದು ; ನಮಗಿಂತ ಹೆಚ್ಚು ಬುದ್ಧಿವಂತರೆಂದು ! ಅನಂತ್ ಹೆಚ್ಚು ಕಾಲ ಬೆಂಗಳೂರಿನಲ್ಲಿರಲಿಲ್ಲ.

ಅಂದು ಮೊದಲಾದ ನಮ್ಮ ಸ್ನೇಹ ಒಂದು ನಿಶ್ಚಯರೂಪ ಪಡೆದದ್ದು, ಅನಂತ್ ಅವರು ಇಂಟರ್ ಕಾಲೇಜಿಗೆ ಉಪಾಧ್ಯಾಯರಾಗಿ ಬಂದಾಗ. ಆಗ ನಮ್ಮ ಸ್ನೇಹ ಹೊಸ ನೀರನ್ನು ಉಂಡು ಬೆಳೆದು ಹೆಮ್ಮರವಾಯಿತು.

ಅನಂತ್ ಬಾಳಿನಲ್ಲಿ ತುಂಬಾ ನೊಂದಜೀವಿ. ಅವರಿಗೆ ಯೌವನದ ಮೊದಲನೆಯ ಹಂತದಲ್ಲಿಯೇ ಬೀಳಬಾರದ ಪೆಟ್ಟು ಬಿದ್ದು, ಅವರ ಹೊಂಗನಸನ್ನು ಮಣ್ಣುಗೂಡಿಸಿತ್ತು. ಅವರು ಪ್ರೀತಿಸಿದ ಹುಡುಗಿ ತಾರುಣ್ಯದಲ್ಲೇ ತೀರಿಕೊಂಡಿದ್ದಳು. ಆಕೆಯ ನೆನಪಿನಲ್ಲಿ ಅನಂತ್ ಅವರ ಬಾಳು ಬೇಯುತ್ತಿದೆ; ಬಿಸುಸುಯ್ಯುತ್ತಿದೆ........

ಅನಂತ್ ವಿಶ್ವವಿದ್ಯಾನಿಲಯದಿಂದ ಉತ್ಸಾಹಿ ತರುಣರಾಗಿ ಹೊರಬಂದಾಗ ಅವರ ಕ್ಷಿತಿಜದಲ್ಲಿ ಕಾಣಿಸಿಕೊಂಡ ಒಂದು ಅಪೂರ್ವ ತಾರೆ 'ಉಷೆ'. ಬೆಂಗಳೂರಿನಲ್ಲಿ ಇದ್ದಷ್ಟು ದಿನ ಅವರ ಪಾಲಿನ ಸುಖದ ದಿನಗಳು. ಉಷೆ ಅವರ ಬಾಳಿನ ಬೆಳಕಾಗಿ ಬಂದಳು. ನೂರು ಬಗೆಯ ಮಧುರ ಸ್ವಪ್ನಗಳನ್ನು ಜತೆಗೆ ತಂದಳು. ಆದರೆ ಮುಂದೊಂದುದಿನ ಕನಸೊಡೆಯಿತು.

'ಹೋದಳು ಉಷೆ – ಬಂತು ನಿಷೆ!'

ಜೀವನದ ಹಗಲಿನಲಿ
ಕನಸು ಸುಳಿವಂದದಲಿ,
ಆಕೆ ಬಂದಳು–ಮುಂದೆ;
ನಡುಹಗಲು ಬರುತಿರಲು
ಅಳಿವ ನೆರಳಿನೊಲು
ಹಾರಿಹೋದಳು ಹಿಂದೆ!

ಉಷೆಯ ಆಗಮನ ಮತ್ತು ನಿರ್ಗಮನ ಅವರ ಜೀವನದಲ್ಲಿ ಮರೆಯಲಾಗದ ಘಟನೆಗಳು. ಉಷೆ ಬಂದು ನಕ್ಕಾಗ ಅವರ ಕಾವ್ಯದ ಬಳ್ಳಿ ಚಿಗುರಿತು. ತುಂಬುಫಲ ಕೊಡುವಂತಾಯಿತು. ಆದರೆ ಅವನ್ನು ಆಘ್ರಾಣಿಸಲು ಉಷೆಯೇ ಇರಲಿಲ್ಲ!

'ನೀ ಬೆಳಸಿ ಬಾಳಿಟ್ಟ ನನ್ನ ಕಾವ್ಯದ ಬಳ್ಳಿ
ಹೂ ಬಿಡುವ ಮುನ್ನವೇ ನೀ ಬಾಡಿಹೋದೆ!'

ಎಂದು ಅನಂತ್ ಕೊರಗುವಂತಾಯಿತು. ಉಷೆ ಇಲ್ಲದಮೇಲೆ ಅವರಿಗೆ

ಜಗತ್ತು ನಿಶೆಯಿಂದ ತುಂಬಿಕೊಂಡಿತು. ಈಗ ಅವರಿಗೆ ಜವ್ವನ ಋತು ಬರುತ್ತಿದೆ.

ಆದರೆ

" ಉಷೆಯು ಬಾರದೆ ಹಾಡಲೇತಕೆ,

ಎನುತ ವೀಣೆಯು ಮಲಗಿದೆ."

ಉಷೆಯ ಸಾವು ಬಾಳಿನ ಒಂದು ದುರಂತ. ಅದು ಅನಂತ್ ಅವರ ಕನಸಿನ ಗೋಪುರಕ್ಕೆ ಬಂದೆರಗಿದ ಸಿಡಿಲು. ಉಷೆ ಎಲ್ಲ ವಿಷಯಗಳಲ್ಲಿ ಅವರಿಗೆ ತಕ್ಕ ಹುಡುಗಿ. ಆತನನ್ನು ಆಕೆ ಮನಸಾರೆ ಪ್ರೀತಿಸುತ್ತಿದ್ದಳು. ಆಕೆಯಲ್ಲಿ ಅನಂತ್ ತಮ್ಮ ಜೀವನದ ಜೊತೆಗಾತಿಯನ್ನು ಕಂಡು ಕೊಂಡಿದ್ದರು. ಅವರ ಪ್ರಣಯಜೀವನ ಹೀಗೆಯೇ ಸಾಗಿತ್ತು. ಆದರೆ ಇದು ವಿಧಿಯ ಮನಸ್ಸಿಗೆ ಬರದೆ– ಉಷೆಯನ್ನು ತನ್ನೆಡೆಗೆ ಬರಮಾಡಿಕೊಂಡ. ಉಷೆ ಜ್ವರವೆಂದು ಹಾಸಿಗೆ ಹಿಡಿದವಳು, ಕೆಲವೇ ದಿನಗಳಲ್ಲಿ ಮೃತ್ಯುವಿನ ಬಸಿರಿಗೆ ನುಗ್ಗಿದಳು – ತಾಯಮಡಲಿಗೆ ನುಸುಳುವ ಕಂದನಂತೆ! ಇದಾದ ಕೆಲವೇ ತಿಂಗಳಲ್ಲಿ ಆಕೆಯ ತಂಗಿ ಅಕ್ಕನ ದಾರಿಯಲ್ಲೇ ನಡೆದಳು. ಆ ದಂಪತಿಗಳು ಸಾವು ತಂದ ಊರನ್ನು ಬಿಟ್ಟು ದೂರದ ಊರಿಗೆ ಹೊರಟು ಹೋದರು.

ಈ ಎಲ್ಲಾ ಘಟನೆ ನಡೆದು ಮೂರು ನಾಲ್ಕು ವರ್ಷಗಳಾದರೂ, ಅನಂತ್ ಅವರಿಗೆ ಆ ಗಾಯವಿನ್ನೂ ಮಾಗಿಲ್ಲ ಒಮ್ಮೆ ಅವರು ನನಗೆ ಬೇಸರ ಗೊಂಡು ಪತ್ರಬರೆದಾಗ ನಾನು ಹೀಗೆ ಅವರಿಗೆ ಮಾರೋಲೆ ಬರೆದೆ.

" ನಿಮ್ಮದು ದೈವಿಕ ಪ್ರೇಮ ಅನಂತ್. ದೇಶಕಾಲ ಲಂಗಾತೀತವಾದ ಪ್ರೇಮ ಅದು. ಉಷೆ ನಮ್ಮ ಭಾಗಕ್ಕೆ ಮಣ್ಣಿನಲ್ಲಿ ಮಣ್ಣಾಗಿದ್ದರೂ, ನಿಮ್ಮ ಕಲ್ಪನಾ ವಿಲಾಸದಲ್ಲಿ ಆಕೆ ಇನ್ನೂ ಜೀವಂತೆ. ಆಕೆಯ ನೆನಪು ಮಾತ್ರದಿಂದ ನೀವು ಆಕೆಯ ಸಾನ್ನಿಧ್ಯ ಸುಖಪಡೆಯುತ್ತೀರಿ. ಹೀಗಿರುವಲ್ಲಿ ಹಳೆಯ ಗಾಯ ಕೆದಕಿದಂತಾಗಿದೆ ಎಂದು ನೀವು ಬರೆಯುವುದು ಸಹಜವೇ ...."

ಒಮ್ಮೆ ಅವರಿಗೆ ನಾನೆಂದೆ

" ಅನಂತ್, ಯಾಕೆ ಕಳೆದುಹೋದುದಕ್ಕಾಗಿ ಕೊರಗಿ ಕೂಡಬೇಕು. ಉಷೆಯ ನೆನಪನ್ನು ಮರೆಸಬಲ್ಲ ಹುಡುಗಿಯನ್ನು ವರಿಸಿ ಸುಖವಾಗಿರಬಾರದೆ?"

"ಅದು ಎಲ್ಲಿ ಸಾಧ್ಯ ಮೂರ್ತಿ! ಅದು ಹೇಗೆ ಸಾಧ್ಯ!! ನಾನು ಮನಸಾರೆ ಪ್ರೀತಿಸಿದ ಆ ಉಷೆಯಂಥ ಹೆಣ್ಣು ನನಗೆ ಮತ್ತೆ ದೊರೆತೀತೆ?" ಎಂದರು ಅನಂತ್.

"ಯಾಕೆ ದೊರೆಯಬಾರದು?"

"ನಿಮಗೆ ಹುಚ್ಚು ಮೂರ್ತಿ – ಹುಚ್ಚು! ದೊರೆಯುವುದೆನ್ನುವ ಭ್ರಾಂತಿ ಅಷ್ಟೆ. ಒಂದು ವೇಳೆ ಉಷೆಯನ್ನೇ ಹೋಲುವ ಹುಡುಗಿ ಸಿಕ್ಕರೂ, ಆಕೆ ಉಷೆಯಂತೆ ನನ್ನನ್ನು ಮೆಚ್ಚಿ ಕೈಹಿಡಿಯಬೇಕಲ್ಲ!" ಎಂದರು ಸಂಶಯದ ಧ್ವನಿಯಲ್ಲಿ.

"ಯಾಕೆ ಮೆಚ್ಚಲಾರರು. ನಿಮಗೇನು ಕಡಿಮೆಯಾಗಿದೆ. ವಿದ್ಯೆ ಇದೆ, ರೂಪವಿದೆ, ಯೌವ್ವನವಿದೆ, ಕೀರ್ತಿ ಇದೆ, ಯೋಗ್ಯಚಾಕರಿ ಇದೆ. ತಂದೆ – ತಾಯಿ, ಬಂಧುಬಳಗವಿದ್ದಾರೆ ...."

"ಹೂಂ, ಹೌದು. ಎಲ್ಲವೂ ಇದೆ – ಯಾವುದೂ ಇಲ್ಲ – ನನ್ನ ಪಾಲಿಗೆ. ನಮ್ಮ ಆಸೆಗಳನ್ನು ತನ್ನ ಕಬ್ಬಿಣದ ಕಾಲಿನಿಂದ ಮೆಟ್ಟಿ ತುಳಿಯಲು ಬೇರೊಂದು ಶಕ್ತಿ ಕುಳಿತಿರುವಾಗ ಯಾರಿದ್ದರೇನು? .... ಏನಿದ್ದರೇನು?" ಎಂದು ನಿಟ್ಟುಸಿರು ಬಿಟ್ಟರು ಅನಂತ್.

ಅನಂತ್, ಅವರ ಮಾತು ನನ್ನ ವಿಷಯದಲ್ಲಿಯೂ ಪೂರ್ಣಸತ್ಯ. ನನಗೂ ಬೇಕಾದುದೆಲ್ಲಾ ಇದೆ. ತಂದೆ ತಾಯಿ, ಬಂಧುಬಳಗವಿದ್ದಾರೆ. ಎಲ್ಲ ಇದ್ದೂ ನಾನು ಪರದೇಶಿ. ನನಗೆ ಮಾತ್ರ ಸುಖವಿಲ್ಲ. ಹೆತ್ತ ತಂದೆಯೇ, ಸಾಕಿದ ಅಕ್ಕನೇ ನನ್ನ ಸುಖಕ್ಕೆ ಕುಠಾರವಾಗಿದ್ದಾರೆ. ನನ್ನ ಆಸೆ ಅಭೀಷ್ಟಗಳು ಯಾರಿಗೂ ಬೇಡ. ತಮ್ಮ ಆಸೆಗೆ ನಾನು ಬಲಿಯಾದರೆ ಸಾಕು........ಎಲ್ಲಾ ಆ ಕಾಣದ ಶಕ್ತಿಯ ಕೈವಾಡ!

ಗೆಳೆಯರೆಲ್ಲರಿಗೂ ನನ್ನ ಕರುಣ ಕಥೆಯಲ್ಲಿ ತುಂಬ ಕಳಕಳಿ. ಅಕ್ಕನ ಮಗಳ ಪಾಣಿಗ್ರಹಣವೆಂಬ ಉರುಳಿಗೆ ತಲೆಕೊಟ್ಟಿದ್ದ ನನ್ನಲ್ಲಿ ತುಂಬಾ ಸಹಾನುಭೂತಿ. ನಾನು ಗೆಳೆಯರೊಡನೆ ಇದ್ದಾಗ ನನ್ನ ಕೊರಗನ್ನು ಮರೆಯುತ್ತಿದ್ದೆ. ಅವರಿಂದ ಬೇರ್ಪಟ್ಟಾಗ ಚಿಂತಾಮೂರ್ತಿಯಾಗುತ್ತಿದ್ದೆ. ಬಂಧನದ ಆಚೆಯ ಕನಸುಗಳು ನನ್ನನ್ನು ಕೈಬೀಸಿ ಕರೆಯುವುವು. ಆದರೆ ಬಂಧನವನ್ನು ಹರಿದು ಮುನ್ನಡೆಯುವ ಮಾರ್ಗ ಮಾತ್ರ ಕಾಣದು........ಒಮ್ಮೊಮ್ಮೆ ಅಂದು

ಕೊಳ್ಳುವೆ....ತಂದೆತಾಯಿಯರ ಬಲವಂತಕ್ಕೆ ಮನಸ್ಸಿಲ್ಲದ ಹುಡುಗಿಯನ್ನು ಮದುವೆಯಾಗಿ, ಮುಂದೆ ಅವಳ ಎಳೆಯ ಬದುಕನ್ನು ಹಾಳುಮಾಡುವುದಕ್ಕಿಂತ, ಎಲ್ಲರನ್ನೂ ತೊರೆದು, ಮನ ಬಂದತ್ತ ಯಾಕೆ ಹೊರಟುಬಿಡಬಾರದು?....ಆದರೆ ಈ ಪ್ರಶ್ನೆಯ ಬೀಜದಲ್ಲೇ ಸಿಕ್ಕು....ಹೊರಡುವುದು ಸರಿ. ಆದರೆ ಎಲ್ಲಿಗೆ?....ನನ್ನ ಅನ್ನ, ಆಸರೆ ಬಗೆ ಎಂತು? ಈ ವಿಷಯಗಳು ತಲೆಯಲ್ಲಿ ಹೊಕ್ಕೊಡನೆಯೇ ನನ್ನ ಮನೋನಿಶ್ಚಯ ಬುಡ ಮೇಲಾಗುವುದು.

ನನಗೆ ಕೆಲವು ದಿನ ಯಾರಾದರೂ ಆಶ್ರಯ ಕೊಡಬಲ್ಲವರಾದರೆ?........

ನನಗೆ ದೈಹಿಕವಾದ ಆಸರೆಯಷ್ಟೇ, ಮಾನಸಿಕವಾದ ಆಸರೆ ಬೇಕಿತ್ತು. ನಿಂತಲ್ಲಿ ನಿಲ್ಲದೆ, ಕೂತಲ್ಲಿ ಕೂಡದೆ, ಮನಸ್ಸು ಹತ್ತು ಕಡೆ ಹರಿದು ಹಂಚಿತ್ತು. ಅದಕ್ಕೆ ಯಾರ ಹೃದಯದಲ್ಲಾದರೂ ಬಲವಾದ ನೆಲೆ ಬೇಕಿತ್ತು; ಯಾವುದಾದರೊಂದು ವ್ಯಕ್ತಿಯ ಹೃದಯದಲ್ಲಿ ನೆಲೆಸಲು ನೋಡುತ್ತಿತ್ತು. ಅಂತಹ ವ್ಯಕ್ತಿಯೊಂದು ನನ್ನ ಬಾಳಿನ ಮೊಬ್ಬು ಕತ್ತಲೆಯಲ್ಲಿ ತೂರಿ ಬಂದ ತಾರೆಯಂತೆ ಕಂಗೊಳಿಸಿತು. ಆ ತಾರೆಯ ಧೃವತೇಜ ಕಣ್ಣು ಕುಕ್ಕಿತು; ಮನಸ್ಸನ್ನು ಮುಕ್ಕಿತು. ನಾನು ಅದರ ಸೆಳೆತಕ್ಕೆ ಸಿಕ್ಕಿಬಿಟ್ಟೆ!



# ಪ್ರೀತಿಯ ಮಾಯಾಜಾಲ

ಆಕೆ ಹೇಳಿಕೊಳ್ಳುವಷ್ಟು ಸುಂದರಿಯಲ್ಲ. ಆದರೂ ಆಗಿನ ದಿನಗಳಲ್ಲಿ ನನ್ನ ಕಣ್ಣಿಗೆ ಆಕೆ ತ್ರಿಪುರಸುಂದರಿ. ಕಾಲೇಜಿಗೆ ಬರುತ್ತಿದ್ದ ನೂರು ಮಂದಿ ಹೆಣ್ಣುಮಕ್ಕಳ ಪೈಕಿ, ಆಕೆ ಮಾತ್ರ ನನ್ನ ಮನಸ್ಸನ್ನು ಅಪಹರಿಸಿದ್ದಳು. ಆಕೆಯು ತರಗತಿಗೆ ಬಂದೊಡನೆಯೇ ನನ್ನ ಹೃದಯ ಡವಡವನೆ ಹೊಡೆದುಕೊಳ್ಳುವುದು. ಸಮೀಪದಲ್ಲಿ ಸಾರಿಹೋದರೆ ಅದು ಕಂಪಿಸುವುದು. ಆಕೆಯು ಒಂದು ಬಾರಿ ತನ್ನ ದೃಷ್ಟಿಯ ಮಿಂಚನ್ನು ಹಾಗೆ ಎಸೆದಳೆಂದರೆ ಅದರ ರಭಸಕ್ಕೆ ಹೃದಯ ಅಲ್ಲೋಲ ಕಲ್ಲೋಲವಾಗುವುದು. ಆಕೆಯನ್ನು ನೋಡಿದಾಗಲೆಲ್ಲಾ ಮನಸ್ಸಿಗೆ ಎಂತಹದೋ ಹಬ್ಬ – ನನ್ನ ಭಾವನೆಗಳನ್ನು ಹೀಗೆಂದು ಹೇಳಲು ಬಾರದು. ನಾನು ದಿನವಹಿ ಆಕೆಯನ್ನು ಎರಡುಬಾರಿ ನಮ್ಮ ತರಗತಿಯಲ್ಲಿ ಕಾಣುತ್ತಿದ್ದೆ. ಆದರೂ ಬಿಚ್ಚುಗಣ್ಣಿನಿಂದ ಆಕೆಯನ್ನು ನೋಡಿದರೆ ಸ್ನೇಹಿತರು ಏನು ತಿಳಿದುಕೊಳ್ಳುತ್ತಾರೋ ಎನ್ನುವ ಹೆದರಿಕೆ. ಸಾಮಾನ್ಯವಾಗಿ ಹೆಂಗಸರು ಎದುರಿಗೆ ಸುಳಿದರೆ ಕತ್ತೆತ್ತಿ ನೋಡದ 'ಮರ್ಯಾದೆ ರಾಮಣ್ಣ'ನೆಂದು ಗೆಳೆಯರು ನನ್ನನ್ನು ತಿಳಿದಿದ್ದರು. ಗೆಳೆಯರಲ್ಲಿ ಹೆಂಗಸರ, ಕಾಲೇಜು ಹುಡುಗಿಯರ ಮಾತಾಗುವಾಗಲೆಲ್ಲಾ ನಾನು ಅವರನ್ನು ಮೂದಲಿಸುತ್ತಿದ್ದೆ. ಕಠೋರವಾಗಿ ಟೀಕಿಸಿ, ಅವು ಅಸಭ್ಯತನದ ವಿಚಾರಗಳೆಂದು ಕಡೆಗೆಣಿಸಿ ಮಾತಾಡಿಬಿಡುತ್ತಿದ್ದೆ. ಅವರು ನನ್ನಮೇಲಿದ್ದ ಗೌರವದಿಂದ ನನಗೆ ಹೆದರುತ್ತಿದ್ದರು. ಅವರು ಕಾಲೇಜು ಕುಮಾರಿಯರ ವಿಷಯ ಮಾತನಾಡುವಾಗಲೆಲ್ಲಾ ನನ್ನನ್ನು ಗುಂಪಿನಿಂದ ಹೊರಗೆ ಹಾಕಿ ಮಾತನಾಡಿಕೊಳ್ಳುತ್ತಿದ್ದರು. ಹೀಗಿದ್ದ ನನ್ನಲ್ಲಿ ಕುತೂಹಲ ಕೆರಳಿಸಿದ ವ್ಯಕ್ತಿ 'ಆಕೆ' ಎಂದ ಮೇಲೆ, ಆಕೆಯಲ್ಲಿ ಯಾರಲ್ಲೂ ಕಾಣದ ಯಾವುದೋ ಒಂದು ವಿಶೇಷ ಗುಣವಿರಬೇಕು! ಹೂಂ, ಹೌದು. ಆಕೆ ಕಾಲೇಜಿನಲ್ಲಿ ಕಲಿಯುತ್ತಿದ್ದ ಎಲ್ಲ ಹುಡುಗಿಯರಿಗಿಂತಲೂ ಭಿನ್ನವಾಗಿದ್ದಳು.

ಆಕೆಯು ಸಾಮಾನ್ಯವಾಗಿ ಕಾಲೇಜಿನ ಇತರ ಹೆಂಗಸರೊಡನೆ ಬೆರೆ

ಯುತ್ತಿರಲಿಲ್ಲ. ತನ್ನ ಸಹಪಾಠಿಗಳಲ್ಲೂ ಹೆಚ್ಚಿನ ಬಳಕೆ ಇರಲಿಲ್ಲ. ತಾನಾಯಿತು, ತನ್ನ ಗೆಳತಿ – ಆಕೆ ಚತುರಾಕ್ಷಿ – ಯಾಯಿತು. ಇಬ್ಬರೂ ಬೇರೆಯಾಗಿಯೇ ಕುಳಿತು ಹರಟಿಕೊಳ್ಳುತ್ತಾರೆ, ಇಲ್ಲಾ ಯಾವುದಾದರೂ ಪುಸ್ತಕ ಓದಿಕೊಳ್ಳುತ್ತಾರೆ. ಆಕೆ ತನ್ನ ವಿರಾಮ ಕಾಲದಲ್ಲಿ ಇತರ ವಿದ್ಯಾರ್ಥಿನಿಯರಂತೆ ' ಕಾರಿಡಾರಿ 'ನಲ್ಲಿ ಅತ್ತಿತ್ತ ಗಸ್ತು ತಿರುಗುತ್ತಾ, ಇತರ ತರಗತಿಯ ವಿದ್ಯಾರ್ಥಿಗಳ ಗಮನ ಸೆಳೆಯುತ್ತಿರಲಿಲ್ಲ. ಕಾಲೇಜಿನಲ್ಲಿ ಅಂತಹ ಕೆಲಸಕ್ಕೆ ಕೈಹಚ್ಚಿ ಕುಳಿತ ತಂಡ ಒಂದಿತ್ತು. ಅವರು ಬಿಂಕದ ಸಿಂಗಾರಿಗಳಾಗಿ, ಬಣ್ಣಗಳಲ್ಲಿ ಮುಳುಗಿ ಎದ್ದು, ಕಂಕಣದ ಕಿಂಕಿಣಿ ನಾದ ಹೊರಡಿಸುತ್ತಾ ಕೆಲಸವಿಲ್ಲದೆ ಕಾಲೇಜಿನಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಅಲೆಯುವರು. ಒಳಗೆ ಪಾಠಗಳನ್ನು ಕೇಳುತ್ತಾ ಕುಳಿತ ವಿದ್ಯಾರ್ಥಿಗಳು ' ಘಲ್ ' ಎಂದು ಶಬ್ದವಾದರೆ ಸಾಕು, ಕಣ್ಮನಸ್ಸು ಕಿಟಕಿಯ ಕಡೆ ಹರಿಸುವರು. ಮನಸ್ಸಿಟ್ಟು ಕೇಳುತ್ತಿದ್ದ ಪಾಠ ಗಾಳಿಗೆ ತೂರಿಹೋಗುವುದು. ಉಪಾಧ್ಯಾಯರೂ ಇದರಿಂದ ಹೊರತಾಗಿಲ್ಲ. ಒಮ್ಮೆ ಉಪಾಧ್ಯಾಯರೊಬ್ಬರಿಗೆ ಬುದ್ಧಿಗಲಿಸಲು ತುಂಟ ಹುಡುಗರು ಅವರ ಬೆನ್ನಿನ ಹಿಂದೆ ಬೀಗದ ಕೈ ಕುಚ್ಚಿನ ಶಬ್ದಮಾಡಿ, ಹತ್ತು ಬಾರಿ ಹಿಂದಕ್ಕೆ ನೋಡುವಂತೆ ಮಾಡಿ ನಗೆಗೀಡು ಮಾಡಿದ್ದರು.

ಆಕೆ ಇಂತಹ ಬಣ್ಣಗಾತಿಯರ ಗುಂಪಿಗೆ ಸೇರಿರಲಿಲ್ಲ. ತನಗೆ ದೀರ್ಘ ವಿರಾಮ ದೊರೆತರೆ ತನ್ನ ಮನೆಗೆ ನಡೆದುಬಿಡುವಳು. (ಮತ್ತೆ ಬರುವಾಗ ಉಡುಪು ಬದಲಾಯಿಸಿಕೊಂಡು ಬರುತ್ತಿದ್ದಳು.) ಆಕೆ ಹೊಸ ಸೀರೆಯುಟ್ಟು, ಹೆರಳುಹಾಕಿಕೊಳ್ಳದೆ, ಮುಂಗುರುಳನ್ನು ಗಾಳಿಗೆ ಹಾರಲು ಬಿಟ್ಟು ಬಂದಳೆಂದರೆ ನನಗೆ ಒಂದು ವಿಧವಾದ ಪುಳಕ ಉಂಟಾಗುವುದು. ಆಕೆ ತಲೆಯನ್ನು ಒಂದು ಪಕ್ಕಕ್ಕೆ ತಿರುವಿದಾಗ ನೋಡಬೇಕು – ಆಕೆಯ ನೀಳವಾದ ಕೃಷ್ಣವೇಣಿಯ ನರ್ತನವನ್ನು ! ಜಡೆಯ ಕೊನೆ, ಚಾಟಿಯಂತೆ ಆಕೆಯ ಹೆಗಲಿಗೆ ಚಟಾರನೆ ಬಡಿದು ಹಿಂದಕ್ಕೆ ಬರುವುದು. ಆ ಪೆಟ್ಟಿಗೆ ನನ್ನ ಹೃದಯದ ತಂತಿ ಮಿಾಟಿದಂತಾಗಿ ಅದರಿಂದ ಸಪ್ತಸ್ವರದ ಆನಂದ ಲಹರಿ ಹೊರಹೊಮ್ಮುವುದು !

ಆಕೆ ಕಾಲೇಜಿನಲ್ಲಿ ನಡೆಯುವ ಒಂದು ಸಮಾರಂಭ, ಸತ್ಕಾರಕೂಟಗಳಿಗೆ ಬಂದುದನ್ನು ನಾನು ಈ ತನಕ ಕಂಡಿಲ್ಲ. ಕಾಲೇಜಿನಲ್ಲಿದ್ದ ಹತ್ತಾರು ಸಂಸ್ಥೆಗಳಲ್ಲಿ ಒಂದಕ್ಕೂ ಆಕೆ ಸದಸ್ಯಳಲ್ಲ. ಆಕೆಯು ಎಲೆಮರೆಯ ಮೊಗ್ಗಾಗಿ,

ನನ್ನಂಥವನ ಮೇಲೆ ತನ್ನ ಕಂಪನ್ನು ಚೆಲ್ಲುತ್ತಾ ಕಂಡೂ ಕಾಣದಂತೆ ಇರುತ್ತಿದ್ದಳು.

ನನಗೆ ಆಕೆಯ ಪ್ರತಿಯೊಂದು ನಡವಳಿಕೆಯಲ್ಲೂ ಒಂದು ಬಗೆಯ ಅಭಿಮಾನವಿತ್ತು.

ಆಕೆ ತರಗತಿಯಲ್ಲಿ ಎಲ್ಲರಿಗಿಂತ ಮುಂಚೆ ಬಂದು ಕುಳಿತುಕೊಳ್ಳುವಳು. ಎಲ್ಲರಿಗಿಂತ ಮುಂಚೆ ಹೊರಡುವಳು. ಉಳಿದ ಎಲ್ಲಾ ಹುಡುಗಿಯರು ಬಂದರೆ ಹೇಗೋ, ಹೋದರೆ ಹೇಗೋ ಎಂದು ಶಂಕಿಸುತ್ತಿರುವಾಗ ಆಕೆ, ಅವರೆಲ್ಲರಿಗೆ ಮುಂದಾಳಾಗಿ ಮಾರ್ಗದರ್ಶಕಳಾಗುವಳು. ಎಷ್ಟೋ ಬಾರಿ ಇತರ ಹುಡುಗಿಯರು ಉಪಾಧ್ಯಾಯರ ಪ್ರಶ್ನೆಗಳಿಗೆ ಉತ್ತರಕೊಡಲು ಸಂಕೋಚಪಟ್ಟುಕೊಂಡು ಮೌನತಾಳಿದರೆ, ಆಕೆ ದಿಟ್ಟತನದಲ್ಲಿ ಉತ್ತರ ಕೊಟ್ಟುದೂ ಉಂಟು. ಹೀಗೆಂದ ಮಾತ್ರಕ್ಕೆ ಆಕೆ 'ಗಂಡುಬೀರಿ' ಎನಿಸಿರಲಿಲ್ಲ. ಆ ಜಾತಿಗೆ ಆಕೆ ಸೇರುವವಳಲ್ಲ. ಕಾಲೇಜಿನ ವಿದ್ಯಾರ್ಥಿಗಳ ಬಾಯಲ್ಲಿ ಒಂದಲ್ಲಾ ಒಂದು ಕಾರಣದಿಂದ ಪ್ರಸಿದ್ಧಿಗೆ ಬಂದಿದ್ದ ಹೆಣ್ಣುಗಳ ಸಾಲಿನಲ್ಲಿ ಆಕೆಗೆ ಸ್ಥಾನವಿಲ್ಲ. ಕಾಲೇಜಿನ 'ಅರಿಷಡ್ವರ್ಗ' ಗಳಲ್ಲಾಗಲೀ, 'ಸಪ್ತ ಮಹಾಪಾತಕ'ಗಳಲ್ಲಾಗಲೀ, ಅಥವಾ 'ಆಧುನಿಕ ಪಂಚಮಹಾಕನ್ಯೆ'ಯರ ಪಟ್ಟಿಯಲ್ಲಾಗಲೀ, ಆಕೆಯ – ಹೆಸರು ಸೇರಿರಲಿಲ್ಲ. ಆಕೆ ಪ್ರಸಿದ್ಧಿಗೆ ಬಂದ ಲಲನೆಯೇ ಅಲ್ಲ.

ಎಷ್ಟೋ ವೇಳೆ ಆಕೆ ಕಾಲೇಜಿನ ಬಳಿಯ ಲೈಬ್ರರಿಗೆ ಹೋಗಲು 'ಕಾರಿಡಾರಿ' ನಲ್ಲಿ ತುಂಬಾ ಗದ್ದಲವಿರುವುದನ್ನು ಕಂಡು, ಕಾಲೇಜನ್ನು ಪ್ರದಕ್ಷಿಣೆ ಮಾಡಿಕೊಂಡು ಹೋಗುವುದನ್ನು ಕಂಡಿದ್ದೇನೆ. ಕೆಲವು ಮಂದಿ ಹೆಂಗಸರಿಗೆ ಅಂತಹ ಗದ್ದಲದ ದಾರಿಯೇ ಬೇಕು ಸಂಚಾರಕ್ಕೆ. ಒಬ್ಬರನ್ನು ಒಬ್ಬರು ನೂಕಿಕೊಂಡು ಹೋಗುವುದರಲ್ಲೇ ಅವರಿಗೆ ತುಂಬಾ ಆನಂದ. ಅನೇಕ ಬಾರಿ ಒಬ್ಬರಿಗೊಬ್ಬರು ಡಿಕ್ಕಿಹೊಡೆದುದೂ ಉಂಟು. ಅವರಿಗೆ ಇವೆಲ್ಲಾ ಒಂದು ವಿನೋದ! ಆಕೆಯು ಮಾತ್ರ ಇವೆಲ್ಲದಕ್ಕೂ ಹೊರಗು. ಆಕೆಯ ಈ ಬಗೆಯ ವರ್ತನೆ ನನ್ನಲ್ಲಿ ಹೆಮ್ಮೆಯನ್ನುಂಟುಮಾಡಿತ್ತು. ಆಕೆ ತುಂಬಾ ಮಾನವಂತರ ಮನೆಯವಳು, ಹದ್ದಿನಲ್ಲಿ ಬೆಳೆದ ಹುಡುಗಿ ಎಂದುಕೊಳ್ಳುತ್ತಿದ್ದೆ.

ಆಕೆಯ ಸಾಹಿತ್ಯಾಭಿರುಚಿ ನನ್ನಲ್ಲಿ ಇನ್ನೂ ಹೆಚ್ಚಿನ ಗೌರವಕ್ಕೆ ಕಾರಣವಾಯಿತು. ಕಾಲೇಜು ಲೈಬ್ರರಿಯಲ್ಲೂ ಆಕೆಯೇ, ಯೂನಿಯನ್ ಲೈಬ್ರ್ರಿ

ಯಲ್ಲೂ ಆಕೆಯೇ, ಯೂನಿವರ್ಸಿಟಿ ಲೈಬ್ರರಿಯಲ್ಲಿಯೂ ಆಕೆಯೇ. ನಾನು ಎಲ್ಲಿ ಹೋದರೆ ಅಲ್ಲಿ ಆಕೆ, ಆಕೆಯ ಗೆಳತಿ ಕಾಣಿಸಿಕೊಳ್ಳುವರು. ಹೊಸ ಪುಸ್ತಕಗಳನ್ನು ಕೊಂಡೊಯ್ಯುವುದು, ಓದಿ ತಂದುಕೊಡುವುದು. ಅವರಿಬ್ಬರೂ ಲೈಬ್ರರಿಗಳನ್ನು ಗುತ್ತಿಗೆ ಮಾಡಿಕೊಂಡಿದ್ದಂತೆ, ಜ್ಞಾನ ಭಂಡಾರವನ್ನೆಲ್ಲಾ ಸೂರೆಗೊಳ್ಳುವ ಹಠ ತೊಟ್ಟಿದ್ದಂತೆ ನನಗೆ ತೋರುತ್ತಿದ್ದರು !

ಇಂತಹ ಅಪೂರ್ವ ರೀತಿಯ ಹೆಣ್ಣಿಗೆ ನಾನು ಮಾರುಹೋದುದರಲ್ಲಿ ಅಚ್ಚರಿ ಏನು ? ಮೊದಲ ದಿನಗಳಲ್ಲಿ ನನ್ನ ಮನಸ್ಸು ಆಕೆಯನ್ನು ನೋಡಿ ಮೆಚ್ಚಿಕೊಂಡಿತ್ತು. ಆದರೆ ಆಕೆಯ ಸುತ್ತಾ ಹೊಂಗನಸಿನ ಸುಂದರ ದುಕೂಲವನ್ನು ನೇಯಲು ತೊಡಗಿರಲಿಲ್ಲ. ಆಗಿನ್ನೂ ನನ್ನ ಬಾಳಿನ ಪೂರ್ಣತೆಗೆ ಆಕೆಯು ಅನಿವಾರ್ಯವೆಂದೆನಿಸಿರಲಿಲ್ಲ. ಆಕೆಯು ನನ್ನ ಬಾಳಿನ ನೌಕೆಗೆ ನಾವಿಕಳಾಗಿ ಬಾರದ ಹೊರತು, ಜೀವನ ನೌಕೆಯ ಪ್ರಯಾಣ ಸಾಗದೆಂದು ತಿಳಿದಿರಲಿಲ್ಲ. ಆಗ ಆಕೆ, ನನ್ನ ಭಾಗಕ್ಕೆ ಮಿಂಚುವ ಚಂಚಲಿಸುವ ಒಂದು ತಾರೆ ! ಬೆಳಗಿನ ಬೈಗಿನಲ್ಲಿ, ಬೆಳ್ಳಿಯೊಂದಿಗೆ ಬೆಳಗುತ್ತಾ ನಿಂತ ಹೊಸದೊಂದು ತಾರಿಕೆ ! ಅದನ್ನು ನೋಡಿದಷ್ಟೂ ಮತ್ತೆ ನೋಡಬೇಕೆನ್ನುವ ಲವಲವಿಕೆ. ಆದರೆ ತಾರಾಮಂಡಲಕ್ಕೆ ನೆಗೆದು, ಅದನ್ನು ಅಲ್ಲಿಂದ ಕಿತ್ತುತಂದು ನನ್ನ ಹೃದಯದಲ್ಲಿ ಇಟ್ಟುಕೊಳ್ಳಬೇಕೆಂಬ ಯಾವ ಹವ್ಯಾಸವೂ ಇರಲಿಲ್ಲ. ಆಕೆಯ ತಂಪಾದ ಕಣ್ಬೆಳಕಿನಿಂದ ಹೃದಯದ ಉರಿ ಆರಿದರೆ ಸಾಕಿತ್ತು !

ದಿನಗಳು ವಾರಗಳಾಗಿ ತಿಂಗಳುಗಳಾಗಿ, ವರ್ಷಗಳಾಗಿ ಕಳೆದಂತೆಲ್ಲಾ ಆಕೆಯ ಬಗ್ಗೆ ನನಗಿದ್ದ ಭಾವನೆಗಳು ಹೊಸ ಹೊಸ ರೂಪವನ್ನು ಪಡೆದವು. ಕಾಲದ ಕ್ರಾಂತಿಯೊಂದಿಗೆ ವಿಚಾರ ಕ್ರಾಂತಿಯೂ ಸಾಗಿತ್ತು. ಮೊದಲ ದಿನಗಳಲ್ಲಿ ಸುಂದರ ತರುಣಿಯಾಗಿದ್ದವಳು, ಈಗ ನನಗೆ ನನ್ನ ಸ್ವಪ್ನಸುಂದರಿ ತಾರಿಣಿಯ ಕೆಲವು ನೆನಪನ್ನು ಕೊಡಹತ್ತಿದಳು. ಆಕೆಯ ತುಂಬುಗಣ್ಣುಗಳು, ಆ ಮುಗ್ಧ ಮಂದಹಾಸ, ಆ ನಿರುದ್ವಿಗ್ನ ಎಳಸಾದ ಮುಖಮುದ್ರೆ, ಎಲ್ಲವೂ ತಾರಿಣಿಯದೇ ಆಗಿತ್ತು! ನಾನು ತಾರಿಣಿಯ ಪ್ರತಿಬಿಂಬದ ಕೆಲವಂಶವನ್ನು ಆಕೆಯಲ್ಲಿ ಕಂಡಾಗಲೆಲ್ಲಾ ನನ್ನಲ್ಲಿ ಹುದುಗಿದ್ದ ಕಾದಲನ ಹೃದಯ ಜಾಗೃತಗೊಳ್ಳುವುದು. ತಾರಿಣಿಯ ದೈವಿಕ ಕಳೆ ಆಕೆಯಲ್ಲಿ ಕಂಡಂತೆಲ್ಲಾ

ಆಕೆಯೂ ತಾರಿಣಿಯಂತೆಯೇ, ನನ್ನ ಸಮೀಪವರ್ತಿನಿಯಾಗಿ ತೋರುವಳು. ಆಕೆಯನ್ನು ಕಾಣದಿದ್ದರೆ ನನಗೆ ದಿನಕಳೆಯಲು ದುಸ್ಸಾಧ್ಯವೆನಿಸುವುದು. ಆಕೆಯ ಜತೆಯಲ್ಲಿದ್ದರೆ ಸಾಕು; ಆಕೆಯ ಸುಖ ಸ್ಪರ್ಶಬೇಡ, ಮಧುರ ವಚನಗಳು ಬೇಡ, ಆಕೆಯ ದೂರದ ಸಾನ್ನಿಧ್ಯ ಸುಖಸಾಕಿತ್ತು–ನನ್ನ ಎಲ್ಲಾ ಯೋಚನೆಗಳನ್ನು ಮರೆಯಿಸಲು.

ತಾರಿಣಿ ನನ್ನ 'ವಿಜಯ ಯಾತ್ರೆ'ಯ ನಾಯಕಿ. ಮದರಾಸಿನಲ್ಲಿ ನಡೆದ ಇಪ್ಪತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಹಿನ್ನೆಲೆಯಲ್ಲಿ ರಚಿಸಿದ ಒಂದು ಕಾದಂಬರಿ – ವಿಜಯ ಯಾತ್ರೆ. ಮದರಾಸಿನಲ್ಲಿ ನನಗಾದ ನೂರು ಅನುಭವಗಳಲ್ಲಿ ತಾರಿಣಿಯ ಕಲ್ಪನೆಯೂ ಒಂದು. ಆಕೆಯನ್ನು ಯಾವುದೋ ಸಮಾರಂಭ ಒಂದರಲ್ಲಿ ಒಮ್ಮೆ ಕೆಲವು ಕ್ಷಣ ಕಂಡೆ. ಆದರೆ ಆ ಅತ್ಯಲ್ಪ ಕಾಲದಲ್ಲಾದ ಅನುಭವ ಆಜೀವ ಪರ್ಯಂತ ಮರೆಯಲಾಗದ ಅನುಭವವಾಯಿತು. ಅವಳು ಮಿಂಚಿಹೋದ ಮಿಂಚಿನ ಬಳ್ಳಿಯಾದರೂ ನನ್ನ ಮನಸ್ಸಿನ ಮೇಲೆ ಚಿರನೂತನವೂ, ಸ್ಪಷ್ಟವೂ ಆದ ಒಂದು ವಿಲಕ್ಷಣ ಪ್ರಭಾವ ಮುದ್ರೆಯನ್ನು ಒತ್ತಿಬಿಟ್ಟಳು. ಆ ಕ್ಷಣಭಂಗುರವಾದ ಅನುಭವದ ಹಸುರು ಎಂದಿಗೂ ಮಾಸದಿರಲೆಂದು ಆಕೆಗಾಗಿ ನಾನು ಕಥೆಕಟ್ಟಿದೆ, ಕಾದಂಬರಿ ಬರೆದೆ. ಅವುಗಳಲ್ಲಿ ಆಕೆಯನ್ನು ಸಾಂರಾಜ್ಞಿಯನ್ನಾಗಿ ಮಾಡಿ ಮೆರೆಸಿದೆ. ಆ ಗ್ರಂಥ ಅವಳ ಬಗ್ಗೆ ನನಗಿದ್ದ ಭಾವನೆಗಳನ್ನು ಬಟ್ಟೆ ಇಳಿಸಿದ ಕಲಾಕೃತಿ. ನನ್ನ ಚಿತ್ತಭಿತ್ತಿಯಮೇಲೆ, ಕಲ್ಪನೆಯ ಮಾಯಾಕುಂಚದಿಂದ ಬರೆದ ಅವಳ ವಿವಿಧ ಭಂಗಿಯ ಚಿತ್ರಗಳನ್ನು ನಾನು ಕಾದಂಬರಿಯಲ್ಲಿ ಮೂರ್ತಿಮಂತಾಗಿ ಕಾಣಿಸಿದೆ. ಅವಳೊಂದಿಗೆ ಕಲ್ಪನಾವಿಲಾಸದ ಬೆನ್ನನ್ನೇರಿ ಸ್ವರ್ಗ, ಮರ್ತ್ಯ, ಪಾತಾಳಗಳನ್ನು ಸುತ್ತಿಬಂದೆ!

ವಿಜಯ ಯಾತ್ರೆ – ಕನಸಿನ ಲೋಕದಲ್ಲಿ ನಾನು ನಡೆಸಿದ ದಿಗ್ವಿಜಯದ ಕಥೆ. ಅದು ತಾರಿಣಿಯ ಕರುಣ ಕಥೆಯಲ್ಲಿ ಆರಂಭವಾಗಿ ಅವಳ ವಿವಾಹದಲ್ಲಿ ಮುಕ್ತಾಯವಾಗಿದೆ. ಈ ಕಥೆಯ ಸುತ್ತಾ ಸಮ್ಮೇಳನದ ವಿವಿಧ ಚಟುವಟಿಕೆಗಳು, ಅಣ್ಣತಂಗಿಯರ ಮದರಾಸಿನ ಅನುಭವ – ಇವುಗಳು ಹಿನ್ನೆಲೆಯಾಗಿ ಬಂದಿವೆ.

ಮದರಾಸಿನಲ್ಲಿ ಒಮ್ಮೆ ಕಂಡು ಮಾಯವಾದ ತಾರಿಣಿ ಈಗ 'ಆಕೆ'

ಯಲ್ಲಿ ವೈದೋರಿದಾಗ, ಸಹಜವಾಗಿಯೇ ನನ್ನ ಗಮನ ಅತ್ತ ಹರಿಯಿತು; ಅದು ರೂಪಾರಾಧನೆಯಿಂದ ಆರಂಭವಾಗಿ, ಕ್ರಮೇಣ ಪ್ರೇಮದೀಕ್ಷೆಯಲ್ಲಿ ಪರ್ಯವಸಾನ ಹೊಂದುವುದೆಂದು ಯಾರೆಣಿಸಿದ್ದರು? ಆಗಿನ ನನ್ನ ಮನಸ್ಸು ಅಕ್ಕನ ಮಗಳ ಮದುವೆಯ ಮಾತಿನಿಂದ ರೋಸಿಹೋಗಿ, ಯಾವ ಸಾಹಸ ಕೃತ್ಯಕ್ಕೂ ಕೈಹಾಕಲು ಸಿದ್ಧವಿತ್ತು. ಅಕ್ಕನ ಮಗಳ ಭೂತ ನನ್ನನ್ನು ಆಕೆಯಲ್ಲಿ ಆಸರೆ ಹೊಂದುವಂತೆ ಮಾಡಿತ್ತು. ಆಗಿನ ನನ್ನ ಚಿಂತೆಯೆಂದರೆ ತಾರಿಣಿಯ ನೆನಪನ್ನು ಹುಟ್ಟಿಸುವಂತಹ ಹೆಣ್ಣನ್ನು ಬಿಟ್ಟು, ನನ್ನ ಭಾಗಕ್ಕೆ ಹೃದಯ ಶೂನ್ಯ ವಿಗ್ರಹದಂತೆ ಇರುವ ಅಕ್ಕನ ಮಗಳನ್ನು ಮದುವೆಯಾಗ ಬೇಕೇ? – ಎಂಬುದೇ ಆಗಿತ್ತು.

ಆಗ ನನಗೆ ಆಕೆಯ ಹೆಸರನ್ನುಳಿದು, ಆಕೆಯ ಬಗ್ಗೆ ಮತ್ತಾವ ಸಂಗತಿಗಳೂ ತಿಳಿದಿರಲಿಲ್ಲ. ಆಕೆಯ ಜಾತಿ, ತಂದೆ–ತಾಯಿ, ಮನೆತನ, ವಾಸ ಇವುಗಳೊಂದೂ ನನಗೆ ತಿಳಿದಿರಲಿಲ್ಲ. ಆದರೂ, ಆಕೆಗೆ ನನ್ನ ಹೃದಯವನ್ನು ಸಮರ್ಪಿಸಿಬಿಟ್ಟಿದ್ದೆ. ಆಕೆ, ನನ್ನ ಅಕ್ಕನ ಮಗಳು ಹತ್ತಾರು ವರ್ಷಗಳಿಂದಲೂ ಮಾಡದಿದ್ದ ಯಾವುದೋ ಭಾವ ಪ್ರೇರಣೆಯನ್ನು ನನ್ನಲ್ಲಿ ಉಂಟುಮಾಡಿದ್ದಳು. ನನ್ನ ಈ ನಡತೆ – ಗುರುತು ಪರಿಚಯವಿಲ್ಲದ ಯಾವಳೋ ಹುಡುಗಿಯ ಬಾಹ್ಯಾಡಂಬರಗಳಿಗೆ ಬೆರಗಾಗಿ ಹೃದಯವನ್ನು ಅರ್ಪಿಸಿ ಬಿಟ್ಟಿರುವ ಸಂಗತಿ – ನನಗೇ ಎಷ್ಟೋ ಅಚ್ಚರಿಯನ್ನುಂಟುಮಾಡಿತ್ತು. ಅಕ್ಕನ ಮಗಳೇಕೆ ನನ್ನನ್ನು ಈ ಬಗೆಯಾಗಿ ಪ್ರೇರೇಪಿಸಲಿಲ್ಲ? ಎಂದು ನನಗೆ ನಾನೇ ಪ್ರಶ್ನಿಸಿಕೊಂಡು ಉತ್ತರ ಸಿಗದೆ ಸುಮ್ಮನಾಗುತ್ತಿದ್ದೆ. ನಾನೇನೋ ಆಕೆಯನ್ನು ಭೇಟಿಮಾಡದೆ, ಆಕೆಯ ಅಭಿಪ್ರಾಯವನ್ನು ತಿಳಿಯದೆ, ಆಕೆಯನ್ನು ನನ್ನ ಮನದನಿಯಳನ್ನಾಗಿ ಮಾಡಿಕೊಂಡಿದ್ದೆ. ಆದರೆ, ನನ್ನ ಈ ಬಗೆಯ ವರ್ತನೆಗೆ ಆಕೆಯ ಅನುಮತಿಯುಂಟೆ? ಈ ಪ್ರಶ್ನೆಗೆ ನನ್ನಲ್ಲಿ ಉತ್ತರವಿರಲಿಲ್ಲ. 'ಎಂಥಹ ಹುಚ್ಚು ರೀತಿ ನನ್ನದು' ಎಂದು ನನಗೆ ಅನಿಸದೆ ಇರಲಿಲ್ಲ. ಆದರೆ, ಆಕೆಯ ಪ್ರಭಾವದ ವಲಯದಿಂದ ಹೊರಬರಲು ನಾನು ಅಸಮರ್ಥನಾಗಿದ್ದೆ.

ಕಾಲಕಳೆದಂತೆಲ್ಲಾ ನನ್ನ ಭಾವನೆಗಳು ದ್ರವೀಭೂತವಾಗಿದ್ದುದು, ಘನೀಭೂತವಾಗತೊಡಗಿದವು. ಈಗ ಹೆಂಗಸರ ಬಗ್ಗೆ ನನ್ನ ಮೊದಲಿನ ಭಾವನೆಗಳು ಬದಲಾದುದನ್ನು ಕಂಡುಕೊಂಡೆ. ನನಗೆ ಹೆಣ್ಣು ಶೂಲೆಯಾಗುವ

ಬದಲು ಮೋಹದ ಮುದ್ದಾಗಿ ತೋರಿದಳು ಈಗ. ಅಕ್ಕನ ಮಗಳು ಪರೋಕ್ಷ ವಾಗಿ ನನ್ನ ಮನಸ್ಸಿನಲ್ಲಿ ಹಿಂಡಿದ್ದ ವಿಷವನ್ನೆಲ್ಲಾ 'ಆಕೆ' ತೊಡೆದು ಹಾಕಿ, ಹೆಣ್ಣು ಪವಿತ್ರಳೂ, ಪೂಜನೀಯಳೂ, ಸ್ಫೂರ್ತಿದಾಯಕಳೂ, ಗಂಡಿನ ಬೆಳಕಾಗಿ, ಪರಿಪೂರ್ಣತೆಯ ಕನಸನ್ನು ನನಸುಮಾಡಬಲ್ಲ ಮಾಂತ್ರಿಕಳೂ ಇರುವಳೆಂದು ತೋರಿಸಿಕೊಟ್ಟಳು. ಹೆಣ್ಣು ಅವನ ಸುಖದಲ್ಲಿ ಹಿಗ್ಗಬಲ್ಲ, ದುಃಖ ದಲ್ಲಿ ಕುಗ್ಗಬಲ್ಲ ಗಂಡಿನಂತೆಯೇ ಉಸಿರಾಡುವ ಜೀವ, ಎನ್ನುವ ಭಾವ ಬೆಳೆಯು ವಂತೆ ಮಾಡಿದಳು. ಇಷ್ಟೆಲ್ಲಾ ಆದರೂ ಆಕೆಯ ಇತಿಹಾಸ ನನಗೆ ಏನೂ ಗೊತ್ತಿರಲಿಲ್ಲ. ಅದನ್ನು ತಿಳಿದುಕೊಳ್ಳುವ ಆಸಕ್ತಿ ಇದ್ದರೂ, ಅದನ್ನು ತೋರ ಗೊಡುವ ಧೈರ್ಯವಿಲ್ಲ. ಆಗಾಗ್ಗೆ ಗೆಳೆಯರೊಂದಿಗೆ 'ಕಾಲೇಜಿನಲ್ಲಿ ಇಂತಹ ವ್ಯಕ್ತಿಯೊಂದು ನನ್ನಮನಸ್ಸಿನ ಮೇಲೆ ತುಂಬಾ ಪರಿಣಾಮಕಾರಿಯಾಗಿದ್ದಾಳೆ' ಎಂದು ಹೇಳುತ್ತಿದ್ದೆ. ಆದರೆ ಗೆಳೆಯರು ನನ್ನ ಮಾತನ್ನು ಅಷ್ಟಾಗಿ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅವರು ಕಾಲೇಜಿನಲ್ಲಿ ಒಬ್ಬೊಬ್ಬ ಹುಡುಗಿಯನ್ನು ಮೆಚ್ಚುವಂತೆ ನಾನೂ ಒಂದು ಹುಡುಗಿಯನ್ನು ಹೊಗಳುವೆನೆಂದುಕೊಂಡು ಸುಮ್ಮನಿರುತ್ತಿದ್ದರು. ಆದರೆ ಸ್ನೇಹಿತರಿಗೆ ನನ್ನ ಮನಸ್ಸಿನಲ್ಲಿ ನಡೆಯುವ ತಾಕ ಲಾಟ ತಿಳಿಯದು. ಅದರ ಲವಲೇಶ ಅವರಿಗೆ ತಿಳಿಸಿರಲಿಲ್ಲ. ಎಲ್ಲವನ್ನೂ ಮನಸ್ಸಿನ ಕಗ್ಗತ್ತಲೆಯ ಗುಹೆಯಲ್ಲಿ ಸಮಾಧಿಮಾಡಲು ಪ್ರಯತ್ನಿಸುತ್ತಿದ್ದೆ. ಆದರೆ ಅದು ಗಾಳಿ ತುಂಬಿದ ಚಂಡಿನಂತೆ ಒಂದು ಕಡೆಗೆ ಅದುಮಿದರೆ ಮತ್ತೊಂದು ಕಡೆಯಿಂದ ಮೇಲೆದ್ದು ಬರುತ್ತಿತ್ತು. ಇಂತಹ ಒಂದು ತುಮುಲ ಯುದ್ಧ ನಡೆಯುತ್ತಿರುವಾಗ ನಾನು 'ಕ್ರಿಸ್‌ಮಸ್' ರಜಕ್ಕಾಗಿ ಹಳ್ಳಿಗೆ ಹೋಗಬೇಕಾಗಿ ಬಂತು.

ಹಳ್ಳಿಗೆ ಹೋಗುವ ಮುನ್ನ, ಕಾಲೇಜಿನಲ್ಲಿ ನನ್ನ ಭಾವನೆಗಳನ್ನು 'ಆಕೆ'ಯ ಗಮನಕ್ಕೆ ಬರುವಂತೆ ಮಾಡಿದ ಘಟನೆಯೊಂದು ನಡೆಯಿತು.

ಹಿಂದೊಮ್ಮೆ ನನ್ನ ಭೀರುತನ, ಅಂಜುಗುಳಿತನ, ಹೆಂಗಸರೆಂದರೆ ಹಾರಿ ದೂರ ಸರಿದು ನಿಲ್ಲುವ ನಾಚಿಕೆ – ಇವುಗಳನ್ನು ಆಕೆಯ ಮುಂದೆ ಪ್ರದರ್ಶಿಸಿದ್ದೆ. ಒಂದು ಬಾರಿ ಯೂನಿಯನ್ ಲೈಬ್ರರಿಯಲ್ಲಿ ನಾನು ಯಾವುದೋ ಪುಸ್ತಕವನ್ನು ಹುಡುಕುತ್ತಿದ್ದೆ. ಅದೇ ಹೊತ್ತಿನಲ್ಲಿ ಆ ಅಶ್ವಿನಿಕುಮಾರಿಯುರು ಅಲ್ಲಿಗೆ ಬಂದು ಬಿಟ್ಟರು. ಅಲ್ಲಿ ನಾವಿಷ್ಟೇ ಜನವಲ್ಲದೆ – ಕ್ಲಾರ್ಕು ಬಿಟ್ಟು – ಬೇರೆ ಯಾರೂ

ಇರಲಿಲ್ಲ. ನಾನು ಪುಸ್ತಕ ಹುಡುಕುವ ಸಂಭ್ರಮದಲ್ಲಿ ಅವರು ಬಂದುದನ್ನು ನೋಡಲಿಲ್ಲ. ಅವರು ಬಂದಮೇಲೆ ಹೆಚ್ಚುಹೊತ್ತು ಪುಸ್ತಕ ಹುಡುಕುತ್ತಾ ನಿಂತರೆ ಅವರು ತಪ್ಪು ತಿಳಿಯುವರೆಂದು, ಮನಸ್ಸಿಗೆ ತೋಚಿದ ಪುಸ್ತಕ ಒಂದರ ಹೆಸರನ್ನು ಬರೆದು 'ಓಚರ್' ಅನ್ನು ಓಚರ್ ಸ್ಟಾಂಡಿಗೆ ಸಿಕ್ಕಿಸಲು ನೋಡಿದೆ. ಅವರು ಅದರ ಬಳಿಯಲ್ಲೇ ಬಾಗಿನಿಂತು 'ಲೆಡ್ಜರಿ' ನಲ್ಲಿ ಬರೆಯಿಸುತ್ತಿದ್ದರು. ಅವರ ಸೆರಗಿಗೂ ಸ್ಟಾಂಡಿಗೂ ನಾಲ್ಕೈದು ಅಂಗುಲಗಳು ಕೂಡ ಅಂತರವಿಲ್ಲ – ಏನು ಮಾಡುವುದು ? ಆದರೂ 'ಓಚರ'ನ್ನು ಅದಕ್ಕೆ ಸಿಕ್ಕಿಸಲು ಪ್ರಯತ್ನಪಟ್ಟೆ. ನನ್ನ ಆತುರಕ್ಕೆ ಆ ಕೆಲಸ ನನ್ನಿಂದಾಗದೇ ಹೋಯಿತು. ಕ್ಷಣಮಾತ್ರದಲ್ಲಿ ಮಾಡಬಹುದಾದ ಕೆಲಸಕ್ಕೆ ನಾನು ನಿಮಿಷಗಟ್ಟಲೆ ತೆಗೆದುಕೊಂಡರೂ ಸಾಧ್ಯವಾಗಲಿಲ್ಲ. ಹೇಗೆ ಸಾಧ್ಯವಾದೀತು ! – ಅವರು ಅಷ್ಟು ಸಮೀಪದಲ್ಲಿ ನಿಂತಮೇಲೆ? ನನ್ನ ಮನಸ್ಸು, ಕೈ ನನ್ನ ಸ್ವಾಧೀನದಲ್ಲಿರಲಿಲ್ಲ. ಹೃದಯದ ರಕ್ತಚಲನೆ ತಟಕ್ಕನೆ ನಿಂತಂತಾಗಿ ಮುಖ ಬೆವರಿಟ್ಟಿತು. ಕೈ ಥರಥರನೆ ನಡುಗತೊಡಗಿತು. ನನ್ನ ಅವಸ್ಥೆಯನ್ನು ನೋಡಲಾರದೆ ಆ ತರಳೆಯರು ಕೊಂಚ ದೂರ ಸರಿದು ನಿಂತರು. ಆಗ ಬದುಕಿದೆಯಾ ಬಡಜೀವ ಎಂದು ಓಚರ್ ಸ್ಟಾಂಡಿಗೆ – ಓಚರ್ ಹಾಕಿ ಅಲ್ಲಿಂದ ಕಂಬಿಕಿತ್ತೆ. ಆದರೆ ನನ್ನ ನಿರ್ಗಮನದ ಬೆನ್ನುಹಿಂದೆ ಅವರು ಗುಸುಗುಸನೆ ನಕ್ಕಿದುದನ್ನು ಕಿವಿ ಕೇಳದೆ ಇರಲಿಲ್ಲ. ಅವರು ನನ್ನನ್ನು ತುಂಬಾ ವಿಚಿತ್ರ ವ್ಯಕ್ತಿ ಎಂದುಕೊಂಡು ಹಾಸ್ಯಮಾಡಿರಬೇಕು !

ಆದರೆ ನಾನು ಹಳ್ಳಿಗೆ ಬರುವ ಮುನ್ನ ನಡೆದ ಘಟನೆ ಬೇರೊಂದು ಬಗೆಯದು. ಸಾಮಾನ್ಯವಾಗಿ ಚರಿತ್ರೆಯ ತರಗತಿಯಲ್ಲಿ ನಾನು, ಶ್ರೀಧರ್ –ನಮ್ಮಂತೆ ಯಾವುದನ್ನೂ ಬದೆದುಕೊಳ್ಳದ ಮತ್ತಿತರ ಸೋಮಾರಿ ವಿದ್ಯಾರ್ಥಿಗಳು – ಕಡೆಯ ಬೆಂಚಿನಲ್ಲಿ ಕುಳಿತುಕೊಳ್ಳುತ್ತಿದ್ದೆವು. ಹೆಂಗಸರು – ಆರು ಮಂದಿ – ಮುಂದಿನ ಸಾಲಿನಲ್ಲಿ ಕುಳಿತುಕೊಳ್ಳುತ್ತಿದ್ದರು. ವರ್ಷದ ಆರಂಭದಿಂದಲೂ ಹೀಗೆಯೇ ನಡೆದುಬಂದಿತ್ತು. ಒಂದು ದಿನ ಬೇರೆ ತರಗತಿಯ ಹುಡುಗರು ಹೆಂಗಸರು ಕುಳಿತುಕೊಳ್ಳುತ್ತಿದ್ದ ಬೆಂಚುಗಳನ್ನು ಹುಡುಗರಿಗೆ ಅಭಿಮುಖವಾಗಿ ಹಾಕಿಬಿಟ್ಟಿದ್ದರು. ಅಂದು ಹುಡುಗಿಯರು ಬಂದವರೇ ತಮ್ಮ ಜಾಗಗಳು ಬದಲಾಗಿರುವುದನ್ನು ನೋಡಿ, ಬೇರೇನೂ ಮಾಡಲು

ತೋಚದೆ, ಹುಡುಗರಕಡೆ ಮುಖಮಾಡಿ ಕುಳಿತುಕೊಂಡರು. ಅಂದೆಲ್ಲಾ ತರಗತಿಯ ತುಂಬಾ ಗದ್ದಲವೋ ಗದ್ದಲ! ಪಾಠ ಸಾಗಲೇ ಇಲ್ಲ. ತರಗತಿಯ ಸುಮಾರು ನೂರು ಕಣ್ಣುಗಳು ತಮ್ಮನ್ನೇ ದುರುಗುಟ್ಟಿಕೊಂಡು ನೋಡುತ್ತಾ ಹಾಸ್ಯ ಮಾಡುತ್ತಾ ಕುಳಿತರೆ, ಹುಡುಗಿಯರು ಹೇಗೆತಾನೆ ತಲೆಯೆತ್ತಿಕೊಂಡು ಕುಳಿತಾರು? ಎಲ್ಲರೂ ಹಸೆಗೆ ಕುಳಿತ ಮದವಣಿಗಿತ್ತಿಯರಂತೆ ಲಜ್ಜೆಯಿಂದ ತಲೆತಗ್ಗಿಸಿಕೊಂಡು ಕುಳಿತುಬಿಟ್ಟರು. ಎಂದಿಗೆ ತರಗತಿಯಿಂದ ಹೊರ ಬಿದ್ದೇವು ಎಂದೆನಿಸಿಬಿಟ್ಟಿತ್ತು ಅವರಿಗೆ.

ಮಾರನೆಯದಿನ, ಅದೇ ಹೊತ್ತಿಗೆ ಅದೇ ಕೋಣೆಯಲ್ಲಿ ಚರಿತ್ರೆಯ ತಗರತಿ. ಹುಡುಗಿಯರು ಹಿಂದಣದಿನದ ಅನುಭವದಿಂದ ಪಾಠಕಲಿತುಕೊಂಡು ಇಂದು ಎಲ್ಲರಿಗಿಂತ ಮುಂಚೆ – ಬೆಲ್ಲು ಹೊಡೆಯಲು ಐದು ನಿಮಿಷಗಳಿರು ವಾಗಲೇ – ಬಂದು ಹಿಂದಣ ಬೆಂಚುಗಳಲ್ಲಿ ಅರ್ಥಾತ್ ನಮ್ಮ ಗುತ್ತಿಗೆಯ ಜಾಗಗಳನ್ನು ಆಕ್ರಮಿಸಿಬಿಟ್ಟರು. ಇಂದಿನ ಅವರ ಬದಲಾವಣೆಗೆ 'ಆಕೆ'ಯೇ ಮುಂದಾಳು! ಆಕೆಯ ಮಂತ್ರಾಲೋಚನೆಯ ಫಲವೇ ಅದು. ನಾವು ಬಂದು ನೋಡುತ್ತೇವೆ! ನಮ್ಮ ಬೆಂಚುಗಳು ಬಣ್ಣದ ಸೀರೆಗಳಿಂದ ತುಂಬಿ ಹೋಗಿವೆ! ನಾವು ವಿಧಿಯಿಲ್ಲದೆ ಅವರನ್ನು ಮನಸ್ಸಿನಲ್ಲಿಯೇ ಬೈಯುತ್ತಾ(!) ಬೇರೆಡೆಯಲ್ಲಿ ಕುಳಿತುಕೊಂಡೆವು. ಈಗ ಅವರ ಸರದಿ. ನಮ್ಮನ್ನು ದುರು ಗುಟ್ಟಿಕೊಂಡು ನೋಡಿ ಮನಸ್ಸಿನಲ್ಲಿಯೇ ನಗುತ್ತಾ ಛಲ ಸಾಧಿಸಿಕೊಂಡು ದಕ್ಕಾಗಿ ಉಬ್ಬಿಹೋದರು.

ನಮಗೆ – ನನಗಲ್ಲ – ಆ ಸ್ಥಳಗಳನ್ನು ಬಿಟ್ಟು ಬೇರೆಡೆಯಲ್ಲಿ ಕುಳಿತರೆ ಹೊತ್ತುಹೋಗದು. ನಾವು ಉಪಾಧ್ಯಾಯರ ಯಾವ ಪ್ರವಚನವನ್ನೂ ಬರೆದು ಕೊಳ್ಳುತ್ತಿರಲಿಲ್ಲ. ಕೆಲವರು 'ಚುಕ್ಕೆ' ಆಟದಲ್ಲಿಯೂ, ಚಿತ್ರರಚನೆಯಲ್ಲಿಯೂ ಮಗ್ನರಾಗುತ್ತಿದ್ದರೆ, ಮತ್ತೆ ಕೆಲವರು ಹುಡುಗಿಯರ ಕಡೆ ನೋಡುತ್ತಾ ಅವರನ್ನು ರೇಗಿಸುತ್ತಾ ಇರುತ್ತಿದ್ದರು. ನಾನು ಸಾಮಾನ್ಯವಾಗಿ ನನ್ನಿಂದ ತರಗತಿಗೆ ಗದ್ದಲವಾಗಬಾರದೆಂದು ಆ ತರಗತಿಯಲ್ಲಿ ಯಾವುದಾದರೂ ಕಥೆಯ ಪುಸ್ತಕ ಓದಿಕೊಳ್ಳುತ್ತಿದ್ದೆ. ಕೆಲವುವೇಳೆ ನನ್ನಿಂದ ಸುಮಾರು ಹತ್ತು ಮಾರು ದೂರದಲ್ಲಿ ಕುಳಿತಿರುತ್ತಿದ್ದ 'ಆಕೆ'ಯೊಂದಿಗೆ ಕನಸಿನ ಲೋಕದಲ್ಲಿ ವಿಹರಿಸು ತ್ತಿದ್ದೆ. ಆಕೆಯಸಮೀಪದಲ್ಲಿಯೇ ಒಬ್ಬ ಬಜಾರಿ ಹುಡುಗಿ ಕುಳಿತಿರುತ್ತಿದ್ದಳು.

ಅವಳ ಚುರುಕು ತನ, ನೋಟದ ತೀಕ್ಷ್ಣತೆ – ರೂಪಗಳನ್ನು ಕಂಡು ನಾನು 'ವಿಜಯ ಯಾತ್ರೆ'ಯ ಸೋದರಿ ವಿಶಾಲಿಯ ನೆನಪುಮಾಡಿಕೊಳ್ಳುತ್ತಿದ್ದೆ. ಆಳೆತ್ತರವಿದ್ದ ಕಿಟಕಿಗಳಿಂದ, ಕಾಲೇಜು ಮುಂದಣ ಹೂದೋಟದಿಂದ ಬೀಸುವ ಸುಗಂಧಪೂರಿತ ಗಾಳಿಯು ಪಾಠದ ಬೇಸರವನ್ನು ಕಳೆಯುತ್ತಿತ್ತು. ಆಗ ಮನಸ್ಸಿಗೆ ಎಷ್ಟೋ ಸಂತೋಷವಾಗುವುದು. ಕೊಠಡಿಯ ಆವರಣವನ್ನು ಬಿಟ್ಟು ಮದರಾಸಿನ ಸಮುದ್ರದಂಡೆಯಲ್ಲಿ ತಾರಿಣಿ ವಿಶಾಲಿಯರೊಡನೆ ಕುಳಿತಂತೆ ಕನಸುಕಾಣುವೆ. ಆಗಿನ ನನ್ನ ಭಾವನೆಗಳಿವು: ತಾರಿಣಿ ವಿಶಾಲಿಯರು ತರಗತಿಯಲ್ಲಿ ಸಮೀಪದಲ್ಲಿ ಕುಳಿತು ಹರಟೆಕೊಳ್ಳುತ್ತಿದ್ದಾರೆ. ಆದರೆ ನಾನು–ವಿಶಾಲಿಯ ಅಣ್ಣನೆನಿಸಿಕೊಂಡಿದ್ದ ನಾನು – ಮಾತ್ರವೇ ಅವರಿಂದ ಬೇರ್ಪಡಿಸಲ್ಪಟ್ಟು, ಒಂಟಿಯಾಗಿ ಕುಳಿತು ಬೇಸರಗೊಂಡಿದ್ದೇನೆ. ಸಂತೈಸಲು ಅವರೊಬ್ಬರೂ ಮುಂದೆ ಬಾರರು! ಆದರೆ 'ಅಂತರ ಗಂಗೆ'ಯ ಬಸವಣ್ಣನ ಬಾಯಿಯಲ್ಲಿ ನಿಲ್ಲದೆ ಬರುವ ಜಲಧಾರೆಯಂತೆ ಒಂದೇ ಸಮನೆ ಒಟಗುಟ್ಟುತ್ತಿದ್ದ ಉಪಾಧ್ಯಾಯರ ಬರಡು ಭಾಷಣ, ಕರ್ಣರಂಧ್ರವನ್ನು ಭೇದಿಸಿದಾಗ ವಾಸ್ತವ ಪ್ರಪಂಚಕ್ಕೆ ಹಠಾತ್ತಾಗಿ ಬಂದು ಬೀಳುವೆ. ತಾರಿಣಿ, ವಿಶಾಲಿ, ಮದರಾಸಿನ ಬೀಚು, ಎಲ್ಲವೂ ಮಾಯವಾಗಿ ಚರಿತ್ರೆಯ ತರಗತಿಯಲ್ಲಿ 'ಬೋರೈಸಿ'ಕೊಳ್ಳುತ್ತಿದ್ದ ಸುಮಾರು ಐವತ್ತುಮಂದಿ ವಿದ್ಯಾರ್ಥಿಗಳು– ಗಂಡಸರು, ಹೆಂಗಸರು – ನನ್ನ ಕಣ್ಣಿಗೆ ಬೀಳುವರು.

ನನ್ನ ಸ್ನೇಹಿತರು ತಮ್ಮ ಮೊದಲಿನ ಸ್ಥಳಗಳನ್ನು ಕಾಯ್ದಿರಿಸಲು ಹಲವಾರು ಕಾರಣಗಳು: ಅವರು ಕುಳಿತುಕೊಳ್ಳುತ್ತಿದ್ದ 'ಡೆಸ್ಕು'ಗಳ ಮೇಲೆ ಬರೆದಿದ್ದ ಬರಹಗಳ ಸಂರಕ್ಷಣೆಯ ಭಾರವನ್ನು ಅವರು ಹೊತ್ತಿದ್ದರು. ಅರಿಷಡ್ವರ್ಗಗಳ ವಿವರ, ಅವುಗಳಿಗೆ ಸಿಕ್ಕಿಹೋಗುವ ಕಾಲೇಜು ಹುಡುಗಿಯರ ಹೆಸರು, ಕುಲಗೋತ್ರಗಳು, ಪಂಚಮಹಾಕನ್ಯೆಯರಚರಿತ್ರೆ ಎಲ್ಲಾ ಅಲ್ಲಿ ವಿಶದವಾಗಿ ಬರೆಯಲ್ಪಟ್ಟಿತ್ತು. ಕಾಲೇಜಿನ ವಿದ್ಯಾರ್ಥಿಗಳಲ್ಲಿ ಯಾರ ಪ್ರೇಯಸಿ ಯಾರು? ಯಾವ 'ಲೈಲೆ' ಗೆ ಯಾವ 'ಮಜ್ನು' ಗಂಟುಬಿದ್ದಿದ್ದಾನೆ.... ವಿರಹಗೀತೆಗಳು, ಎಲ್ಲವೂ ಬರೆದಿತ್ತು. ಈ ಬರಹಗಳಲ್ಲಿ ನಮೂದಿಸಿದ್ದ ಒಬ್ಬಿಬ್ಬ ಮಹಾಕನ್ಯೆಯರು ನಮ್ಮ ತರಗತಿಯಲ್ಲಿದ್ದರು. ಅವರು ಆ ಬರಹಗಳನ್ನೋದಿಕೊಂಡು, ಆ ಬೆಂಚಿನಲ್ಲಿ ಕುಳಿತುಕೊಳ್ಳುತ್ತಿದ್ದ ಎಲ್ಲರ ವಿಷಯದಲ್ಲಿ–

ನನ್ನನ್ನು ಸೇರಿಸಿಕೊಂಡು – ಪೋಲಿಗಳೆಂದು ತಪ್ಪುತಿಳಿದುಬಿಟ್ಟರೆ! ....ಅದರಲ್ಲಿಯೂ ಸೂಕ್ಷ್ಮಮತಿಯಾದ 'ಆಕೆ' ನನ್ನನ್ನು ಅಪಾರ್ಥಮಾಡಿಕೊಂಡುಬಿಟ್ಟರೆ! ....ಎನ್ನುವ ಹೆದರಿಕೆ ನನಗೆ. ಏನೇ ಆಗಲೀ ಆ ನಮ್ಮ ಮೊದಲಿನ ಸ್ಥಳಗಳನ್ನು ಮತ್ತೆ ಆಕ್ರಮಿಸಿಕೊಳ್ಳಲು ನಾವು ನಿಶ್ಚಯಿಸಿದೆವು.

ಆದಿನ ಹುಡುಗಿಯರು ಸ್ಥಳ ಕಾಯ್ದಿರಿಸಲು ಆತುರ ಆತುರವಾಗಿ ಮಹಡಿ ಇಳಿದು ಬಂದರು ಅವರನ್ನು ದೂರದಿಂದ ಕಂಡ ಸ್ನೇಹಿತರು ಅವರಿಗಿಂತ ಮುಂಚೆಹೋಗಿ ತಮ್ಮ ಜಾಗಗಳಲ್ಲಿ ಕುಳಿತುಬಿಟ್ಟರು. ಹುಡುಗಿಯರು ಬಂದವರು ಪೆಚ್ಚಾದರು! ಅವರು ಕುಳಿತುಕೊಳ್ಳಬೇಕೆಂದಿದ್ದ ಸ್ಥಳದಲ್ಲಿ ಹುಡುಗರು ಕುಳಿತುಬಿಟ್ಟದ್ದಾರೆ! ಅವರು ಬೇರೆ ನಿರ್ವಾಹವಿಲ್ಲದೆ ಮುಂದಿನ ಸೀಟುಗಳಲ್ಲಿ ಕುಳಿತುಕೊಳ್ಳಬೇಕಾಯಿತು. ಆದರೆ 'ಆಕೆ' ಧೀಮಂತೆ! ಹುಡುಗರು ಕುಳಿತಿದ್ದರೂ ನೇರವಾಗಿ ಹೋಗಿ ನಾವು ಕುಳಿತಿದ್ದ ಬೆಂಚಿನ ಪಕ್ಕದ, ಖಾಲಿ ಬೆಂಚಿನಲ್ಲಿ ಕುಳಿತುಬಿಟ್ಟಳು. ಆದರೆ ಕೆಲವು ಹುಡುಗಿಯರಿಗೆ ಅಷ್ಟು ಧೈರ್ಯ ಬರದೆ ಮುಂದಿನ ಸೀಟುಗಳಲ್ಲಿ ಕುಳಿತರು. ಈ ವೇಳೆಗೆ ಉಪಾಧ್ಯಾಯರೂ ಬಂದುಬಿಟ್ಟರು. ಬಂದವರೇ ಕಕ್ಕಾಬಿಕ್ಕಿಯಾಗಿ ಹಿಂಚಿ ಕುಳಿತಿದ್ದ ಹುಡುಗಿಯರನ್ನು ನೋಡಿ "ದಯವಿಟ್ಟು ಮುಂದುಗಡೆಯ ಬೆಂಚಿನಲ್ಲಿ ಕುಳಿತುಕೊಳ್ಳಿ. ಇಲ್ಲದಿದ್ದರೆ....ಗಮನ ಮತ್ತೆಲ್ಲೋ............" ಎಂದು ವಿನಯವಾಗಿ ಪ್ರಾರ್ಥಿಸಿಕೊಂಡರು. ಹಿಂದೆ ಕುಳಿತಿದ್ದ 'ಆಕೆ' ಕೂತಲ್ಲಿಂದ ಕದಲಲಿಲ್ಲ. ಹುಡುಗರು ನಗಲಾರಂಭಿಸಿದರು.

ಉಪಾಧ್ಯಾಯರು ಮತ್ತೆ 'ದಯವಿಟ್ಟು........' ಎಂದು ರಾಗ ತೆಗೆದರು. ನಾನು ಆವೇಶಗೊಂಡವನಂತೆ ಎದ್ದು ನಿಂತು ಹೇಳಿ ಬಿಟ್ಟೆ. "ಅವರ ಸ್ವಾತಂತ್ರ್ಯ ಕಸಿಯಬೇಡಿ ಸಾರ್....ಅವರು ಮನ ಬಂದೆಡೆ ಕುಳಿತುಕೊಳ್ಳಲಿ...."

ಹುಡುಗರೂ, ಹುಡುಗಿಯರೂ ಎಲ್ಲರೂ ಅವಾಕ್ಕಾಗಿ ನನ್ನಕಡೆ ನೋಡಿದರು – ನನ್ನ ಮಾತುಕೇಳಿ.

"ತರಗತಿಗೆ ತೊಂದರೆಯಾಗುತ್ತದೆ. ನೀವು ದಯವಿಟ್ಟು ಸುಮ್ಮನಿರಿ" ಎಂದು ನನ್ನ ಕಡೆ ನೋಡಿ ಉಪಾಧ್ಯಾಯರು ನುಡಿದು ಮತ್ತೆ "ದಯವಿಟ್ಟು ........" ರಾಗ ತೆಗೆದರು.

ಆದರೂ 'ಆಕೆ' ಕೂತಲ್ಲಿಂದ ಕದಲಲೇ ಇಲ್ಲ. ಐದು ನಿಮಿಷಗಳ ಕಾಲ ಇಡೀ ತರಗತಿ ಸ್ತಬ್ಧವಾಯಿತು. ಎಲ್ಲರ ದೃಷ್ಟಿಯೂ ಆಕೆಯ ಕಡೆಗೆ ಕೇಂದ್ರೀಕೃತವಾಯಿತು. ಕಡೆಗೆ ತನ್ನಿಂದ ಏಕೆ ಪಾಠಕ್ಕೆ ತೊಂದರೆ ಎಂದು 'ಆಕೆ' ಮುಖವನ್ನು ಗಂಟಿಕ್ಕಿಕೊಂಡು, ಮುಂದಿನ ಬೆಂಚಿಗೆ ಹೋಗಿ ಗೋಡೆಗೆ ಮುಖ ತಿರುವಿಕೊಂಡು ಕುಳಿತುಬಿಟ್ಟಳು. ಇಳಿಸಿದ ತಲೆ ಎತ್ತಲಿಲ್ಲ. ಆಕೆಯ ಸ್ವಾಭಿಮಾನ ಕೆಣಕಿದಂತಾಗಿತ್ತು.

ಆದರೆ ಸೀಟನಯುದ್ಧ ಅಲ್ಲಿಗೇ ನಿಲ್ಲಲಿಲ್ಲ. ಮುಂದಿನ ಸಾರ್ತಿ ಹುಡುಗಿಯರೆಲ್ಲಾ ಮುಂಚೆ ಬಂದು ನಮ್ಮ ಸ್ಥಳಗಳನ್ನು ಆಕ್ರಮಿಸಿಕೊಂಡುಬಿಟ್ಟರು. ತಮ್ಮ ಮಾತನ್ನು ಮೀರಿ ಕುಳಿತ ಹುಡುಗಿಯರನ್ನು ಕಂಡು ಉಪಾಧ್ಯಾಯರಿಗೆ ಅಸಮಾಧಾನವಾಗದೆ ಇರಲಿಲ್ಲ. ಆದರೆ ಹುಡುಗಿಯರೆಲ್ಲಾ ಒಂದೆಡೆಯಿದ್ದುದರಿಂದ ಏನೂ ಅನ್ನುವಂತಿಲ್ಲ. ಇನ್ನೊಮ್ಮೆ ಚರಿತ್ರೆಯ ತರಗತಿ ಬಂದಾಗ ಶ್ರೀಧರ್ ಹೋಗಿ ಆ ಸ್ಥಳವನ್ನು ಕಾಯ್ದಿರಿಸಿಬಿಟ್ಟರು. ಅವರ ಹಿಂದೆ ನಾನು. ಆ ಬೆಂಚಿಗೆಲ್ಲಾ ನಾವು ಇಬ್ಬರೇ. ನಾವು ಕುಳಿತುಕೊಳ್ಳುತ್ತಿದ್ದಾಗ ಹೆಂಗಸರೂ ಬಂದರು. ಬೇಕೆಂದು ಕೀಟಲೆ ತೆಗೆಯಲು ನಾವು ಕುಳಿತಿದ್ದ ಕಡೆಗೆ ಬಂದು ನಮ್ಮ ಪಕ್ಕದಬೆಂಚಿನಲ್ಲಿ ಕುಳಿತುಕೊಂಡರು. ಈಗಲೂ 'ಆಕೆ'ಯೇ ಮುಂದಾಳು. ಈಗ 'ಆಕೆ'ಯ ಮುಖದಲ್ಲಿ ಸಿಟ್ಟಿಗಿಂತಲೂ ಒಂದು ಬಗೆಯ ತುಂಟನಗೆ. ಇಷ್ಟು ಹೊತ್ತಿಗೆ ಸರಿಯಾಗಿ ಹೊರಗಡೆ ನಿಂತಿದ್ದ ನನ್ನ ಪರಿಚಯದವನೊಬ್ಬ ನನ್ನನ್ನು ಕುಹಕದ ಮಾತಿನಿಂದ ರೇಗಿಸಿದ. ಹುಡುಗಿಯರಿಗಾಗಿ ನಾನಲ್ಲಿರುವೆನೆಂದು ಟೀಕಿಸಿದ. ನನ್ನ ಆಗಿನ ಮನಸ್ಸಿಗೆ ಅವನ ಮಾತು ಮುಳ್ಳಾಯಿತು. ತುಂಬಾ ಬೇಸರವಾಯಿತು. ನನಗೆ ಆಕೆಯ ಸಮೀಪದಲ್ಲಿ ಕುಳಿತಿರಲು ಆಗದೆ ತಟಕ್ಕನೆ ತರಗತಿಯಿಂದ ಹೊರಗೆ ಹೊರಟುಬಿಟ್ಟೆ. ಯಾಕೆ? ಏನು? ಎತ್ತ ? ಎಂದು ಗೆಳೆಯರೆಲ್ಲಾ ಕೇಳಿದರು. ನಾನು ಮಾತಿಲ್ಲದೆ ನೇರ ನಡೆದುಬಿಟ್ಟೆ. ನನ್ನ ಈ ವರ್ತನೆಯಿಂದ ಚಕಿತರಾಗಿ ಶ್ರೀಧರ್, ತಾನೂ ಆ ಸ್ಥಳಬಿಟ್ಟು ಬೇರೆಡೆಗೆ ಬಂದುಬಿಟ್ಟರು. ನಾವು ಸ್ಥಳಬಿಡುವುದನ್ನೇ ಹೊಂಚುಹಾಕುತ್ತಾ ಕಾಯುತ್ತಿದ್ದ 'ಆಕೆ' ಮತ್ತು ಆಕೆಯ ಗೆಳತಿಯರು ಪುಸಕ್ಕನೆ ಶೂನ್ಯಸ್ಥಾನವನ್ನು ಆಕ್ರಮಿಸುವ ಗಾಳಿಯಂತೆ, ನಮ್ಮ ಸ್ಥಳಗಳನ್ನು ಆಕ್ರಮಿಸಿಕೊಂಡುಬಿಟ್ಟರು. ಇದೇ ಹೊತ್ತಿನಲ್ಲಿ ಉಪಾಧ್ಯಾಯರು ಪ್ರವೇಶಿಸಿದರು. ಅವರನ್ನು ಹಿಂಬಾಲಿಸಿ

ನಾನು ಮತ್ತೆ ತರಗತಿಗೆ ಬಂದೆ. ಉಪಾಧ್ಯಾಯರು ಎಲ್ಲಾ ಕಥೆಯನ್ನು ಬಲ್ಲವರು-ನಗುತ್ತಾ, "ಈ ಸೀಟಿನ ಯುದ್ಧ ಹುಡುಗಿಯರ ವಿಜಯದಿಂದ ಕೊನೆಗೊಂಡಿತೆಂದು ತೋರುತ್ತದೆ. ಇನ್ನು ಮುಂದೆ ಅವರು ಅವರವರ ಸ್ಥಳಗಳಲ್ಲಿ ಕುಳಿತುಕೊಳ್ಳಲಿ...." ಎಂದರು.

ಅಂದೆಲ್ಲಾ ತರಗತಿಯ, ಎಲ್ಲಾ ವಿದ್ಯಾರ್ಥಿಗಳ ಕಣ್ಣು ಮನಸ್ಸು ನನ್ನ ಮೇಲೆ. ನಾನೇಕೆ ಹಾಗೆ ಮಾಡಿದೆ ಎಂಬುದು ಅವರಿಗೆ ಅರ್ಥವಾಗದ ಒಗಟಾಯಿತು. ಕೆಲವರು 'ಹೆಣ್ಣಿಗ'ನೆಂದು ಹಿಯಾಳಿಸಿದುದೂ ನನಗೆ ಕೇಳಿಸಿತು. ಆದರೆ ಇಡೀ ತರಗತಿಯ ಪೈಕಿ ಒಂದೇ ಒಂದು ವ್ಯಕ್ತಿ ನಾನು ಮಾಡಿದ ಕೃತ್ಯವನ್ನು ಮನಸಾರೆ ಮೆಚ್ಚಿಕೊಂಡಿತ್ತು. ಅದು-'ಆಕೆ'.



# ಸ್ವಪ್ನ ಸುಂದರಿ

"ನೀವು ಊರಿಗೆ ಏಕೆ ಹೋಗಬಾರದು?" ಎಂದು ಕೇಳಿದರು ಬಾನಾಡಿ ಬಾದಾಮಿ ಹಲ್ವವನ್ನು ಬಾಯಲ್ಲಿ ಇರಿಸಿಕೊಳ್ಳುತ್ತಾ. ಬೇರೊಂದು ಹೊತ್ತಿನಲ್ಲಾಗಿದ್ದರೆ 'ನಾನು ಇಲ್ಲಿದ್ದರೆ ನಿಮಗೇನು ತೊಂದರೆ' ಎಂದು ಕೇಳುತ್ತಿದ್ದೆನೋ ಏನೋ. ಆದರೆ ಈಗ ಹಾಗೆ ಕೇಳಲಿಲ್ಲ. ಹೂಂ ಹೌದು. ನಾನು ಯಾಕೆ ಊರಿಗೆ ಹೊರಡಬಾರದು? ರಜ ಹೇಗೋ ಬಂದಿದೆ. ಮನೆಯಿಂದ ಊರಿಗೆ ಬಾ ಎಂದು ಕಾಗದ ಕೂಡ ಬರೆದಿದ್ದಾರೆ....ಎಂದುಕೊಂಡು–"ಈಗ ಹೊರಟರೆ ರೈಲು ಸಿಗುತ್ತದೆಯೇ?" ಎಂದು ಪ್ರಶ್ನಿಸಿದೆ.

ನನ್ನ ಮಾತನ್ನು ಕೇಳಿ ಶ್ರೀಕಾಂತನ್‌ಗೆ ಆಶ್ಚರ್ಯವಾಯಿತು. "ಅವನು ತಮಾಷೆಗೆ ಹಾಗೆಂದರೆ ನೀವು ನಿಜವೆಂದು ತಿಳಿಯುತ್ತೀರಾ?"

"ಹಾಗೇನು ಇಲ್ಲ. ನನ್ನ ಮನಸ್ಸಿನಲ್ಲೂ ಈ ವಿಷಯವೇ ಇತ್ತು. ಹೋದರಾಯಿತು ಎಂದಿದ್ದೆ" ಎಂದೆ.

ನಾನು ಒಂದು ಗಂಟೆಯ ಫಲಹಾರವನ್ನು ಮುಗಿಸಿ, ಹಾಸ್ಟಲು ಗೈರು ಹಾಜರಿ ಪುಸ್ತಕದಲ್ಲಿ ಬರೆದು, ಸಾಮಾನು ಕಟ್ಟಿಟ್ಟು–"ಇಗೋ ಊರಿಗೆ ಹೊರಟೆ" ಎಂದಾಗ ಬಾನಾಡೀಗೇ ಆಶ್ಚರ್ಯ!

"ನಾನಂತೂ ಊರಿಗೆ ಹೋಗುವುದಿಲ್ಲ. ನೀವಾದರೂ ಏಕೆ ನಿಮ್ಮೂರಿಗೆ ಹೋಗಬಾರದು ಎಂದು ನಾನು ವಿನೋದಕ್ಕೆ ಹೇಳಿದರೆ ಅದು ನಿಜವೇ ಆಗಬೇಕೆ?" ಎಂದರು ಬಾನಾಡಿ. ಆದರೆ, ಅವರಿಗೆ ನನ್ನ ಈ ಬಗೆಯ ಕೆಲಸಗಳು ಹೊಸವಲ್ಲ. ನನ್ನ ಕಟ್ಟಕಡೆಗಳಿಗೆಯ ನಿರ್ಧಾರಗಳು ಅವರಿಗೆ ಪರಿಚಯವಿತ್ತು.

"ಒಳ್ಳೆಯದು, ಹೋಗಿಬನ್ನಿ. ಕಾಗದ ಬರೆಯಲು ಮರೆಯಬೇಡಿ!" ಎಂದರು ಶ್ರೀಕಾಂತನ್.

"ಬರುವಾಗ ಚಕ್ಕುಲಿ ತರುವುದನ್ನು ಮರೆಯಬೇಡಿ!" ಎಂದರು ಬಾನಾಡಿ.

ನಾನು ಹಸನ್ಮುಖಿಯಾಗಿ, ಗೆಳೆಯರನ್ನು ಬೀಳ್ಕೊಂಡು ಹೊರಟೆ.

ರೈಲು ಹೊರಟು ಆಕಾಶವಾಣಿಯ ಕಟ್ಟಡ ಕಣ್ಣಿಗೆ ಬಿದ್ದಾಗ, ಹಿಂದಣ ಸಂಜೆ ಆಕಡೆಗೆ ಸಂಚಾರ ಹೊರಟಿದ್ದಾಗ ನಮ್ಮಲ್ಲಾದ ಬಿಸಿಬಿಸಿ ಚರ್ಚೆಯ ನೆನಪು ಬಂತು.

ನಾನೆಂದೆ "ನಾನು ಮದುವೆಯಾಗುವುದಾದರೆ ಗ್ರಾಜುಯೇಟಳನ್ನು ಮದುವೆಯಾಗುತ್ತೇನೆ."

"ನನಗೆ ಹುಡುಗಿ ಎಸ್. ಎಸ್. ಎಲ್. ಸಿ. ಓದಿದ್ದರೆ ಸಾಕು" ಎಂದರು ಬಾನಾಡಿ.

"ಶಾಕುಂತಲ, ಕಾದಂಬರಿಗಳನ್ನು ಓದಿ ಅರ್ಥ ಮಾಡಿಕೊಳ್ಳಬಲ್ಲವಳಾದರೆ ನನಗೆ ಸಾಕು" ಎಂದರು ಶ್ರೀಕಾಂತನ್.

"ನನಗೆ ಹಳ್ಳಿಯ ಚೆಲುವೆಯಾದರೆ ಸಾಕು. ಅವಳ ಓದು ಮುಖ್ಯ ವಲ್ಲ. ಸಂಸಾರವನ್ನು ತೂಗಿಸಿಕೊಂಡು ಹೋಗಬಲ್ಲವಳಾದರೆ ಅದಕ್ಕಿಂತಲೂ ಹೆಚ್ಚಿನ ಓದು ನನಗೆ ಬೇಕಿಲ್ಲ." ಎಂದರು ಶ್ರೀಧರ್.

"ಹಾಗಾದರೆ ನಿಮ್ಮಾಕೆಗೆ ನಿಮ್ಮ ಕಾಗದಪತ್ರಗಳನ್ನೂ, ಮನೆಯ ಆದಾಯವೆಚ್ಚವನ್ನೂ ತಿಳಿಯುವಷ್ಟು ವಿದ್ಯೆ ಇಲ್ಲದೆ ಹೋದರೆ ಗತಿ!" ಎಂದೆ ನಾನು ಶ್ರೀಧರ್‌ರ ಮಾತುಕೇಳಿ.

"ಅಷ್ಟನ್ನು ಅವಳಿಗೆ ಕಲಿಸಿಕೊಡೋಣ. ಆಕೆ ಮುಗ್ಧೆಯಾಗಿ ಮನೆಗೆ ಬರಲಿ. ತಿದ್ದಿ ವಿದ್ಯಾಬುದ್ಧಿ ಕಲಿಸಿಕೊಡುವುದು ಎಷ್ಟರ ಕೆಲಸ. ಆ ಕೆಲಸವೂ ಒಂದು ರಸದೂಟವೇ!" ಎಂದರು ಶ್ರೀಧರ್.

"ಸ್ಥೈರಣೆ ಇದ್ದವರ ಮಾತದು. ಮುಗ್ಧೆಯೆಂದು ಏನೂ ಅರಿಯದ 'ಮಡ್ಡಮ್ಮ'ನನ್ನು ಮದುವೆಯಾಗಿ, ಆಕೆಯನ್ನು ತಿದ್ದಿ ತರಪೇತುಮಾಡಿ, ನೀವು ಅಪೇಕ್ಷಿಸುವ ಸುಶಿಕ್ಷಿತ ಹೆಂಡತಿಯನ್ನಾಗಿ ಮಾಡುವ ಹೊತ್ತಿಗೆ ನಿಮ್ಮ ಕೂದಲು ನೆರೆಯುತ್ತದೆ. ಈ ಶ್ರಮದಲ್ಲಿ ಕೃತಕೃತ್ಯರಾದರೆ ಸರಿ. ಹಾಗಿಲ್ಲದೆ ನಿಮ್ಮ ಆಸೆಗಳೊಂದೂ ನೆರವೇರದೆ ಹೋದರೆ, ನಿಮ್ಮ ಅತೃಪ್ತಿ ಸಂಸಾರದಲ್ಲಿ ವಿರಸವನ್ನು ತಂದುಹಾಕುವುದು ಖಂಡಿತ! ಅದಕ್ಕೇ ನಾನೆನ್ನುವುದು – ಕಲಿತ ಹುಡುಗಿಯನ್ನು ಮದುವೆಯಾದರೆ ಆಕೆಯನ್ನು ಬಹುಬೇಗ ನಮ್ಮದಾರಿಗೆ ತಿರುಗಿಸಬಹುದು ಎಂದು."

"ಹಾಗಾದರೆ, ನಮ್ಮ ಹಿರಿಯರು ಯಾವ ಸ್ಕೂಲಿಗೆ ಮಣ್ಣು ಹಾಕಿದ

ಹುಡುಗಿಯರನ್ನು ಮದುವೆಯಾಗುತ್ತಿದ್ದರು? ಆದರೂ ಅವರು ಸುಖವಾಗಿ ಬಾಳುತ್ತಿರಲಿಲ್ಲವೆ?"

"ಆಗಿನ ನಾಗರೀಕತೆ ಈಗಿನಷ್ಟು ಮುಂದುವರಿದಿರಲಿಲ್ಲ. ಕೊರತೆಗಳು ಬಯಕೆಗಳು ಅವರಿಗೆ ಕಡಿಮೆಯಾಗಿತ್ತು. ಅಷ್ಟನ್ನು ಪೂರೈಸಲು ಅವರಿಗೆ ಯಾವ ಓದೂ ಬೇಕಿರಲಿಲ್ಲ. ಈಗ ರೈತನೊಬ್ಬನ ಉದಾಹರಣೆ ತೆಗೆದು ಕೊಳ್ಳೋಣ. ಅವನಿಗೆ ತನ್ನೊಂದಿಗೆ ಕೆಲಸಮಾಡಬಲ್ಲ, ದೃಢಕಾಯಳಾದ ಆಳಾದರೆ ಅವಳು ಅವನಿಗೆ ಆದರ್ಶಸತಿ ಎನಿಸಿಕೊಳ್ಳುವಳು. ವಿದ್ಯೆ ನೇವೇದ್ಯೆ ಯಾದರೂ ಚಿಂತೆಯಿಲ್ಲ. ಆದರೂ ನಿಮ್ಮಂಥ ತರುಣರಿಗೆ ಎತ್ತಿನಂತೆ ದುಡಿಯ ಬಲ್ಲ, ಸಂಸ್ಕೃತಿಯ ಸೋಂಕೂ ತಾಕದಿರುವ ಹುಡುಗಿಯು ಯೋಗ್ಯ ಹೆಂಡತಿ ಎನಿಸಿಕೊಂಡಾಳೆ? ಆಕೆಯೊಂದಿಗೆ ನಿಮ್ಮ ಜೀವನ ಸರಿಹೋದೀತೆ?........ ಆಲೋಚಿಸಿ ನೋಡಿ" ಎಂದೆ.

"ಹೆಣ್ಣು ಹಳ್ಳಿಯ ರೈತನ ಕೈ ಹಿಡಿದರೆ ಒಕ್ಕಲಿಗಳಾಗುತ್ತಾಳೆ. ಪಟ್ಟಣಿಗನ ಕೈ ಹಿಡಿದರೆ ಆಧುನಿಕಳೆನಿಸುತ್ತಾಳೆ. ಹೊಸ ಆವರಣಕ್ಕೆ ಹೊಂದಿ ಕೊಳ್ಳುವ ಗುಣ ಮನುಷ್ಯನ ಸ್ವಭಾವದಲ್ಲಿ ಇರುವಾಗ, ಈ ಹೊಂದಿಕೊಳ್ಳುವ ಕೆಲಸ ಕಷ್ಟದ ಕೆಲಸವೇನೂ ಅಲ್ಲ. ನಮಗೆ ಬೇಕಾದಂತೆ ತಯಾರುಮಾಡಿ ಕೊಳ್ಳುವ ಶಕ್ತಿ ನಮಗಿದ್ದರೆ ಸರಿ – ಮೇಣ ಯಾವ ಆಕಾರದಲ್ಲಿದ್ದರೇನು? ನಮಗೆ ಬೇಕಾದ ಆಕಾರಕ್ಕೆ ತಂದುಕೊಳ್ಳಬಹುದು. ಅದು ಬಿಟ್ಟು ಕಲಿತ ಹೆಣ್ಣೆಂದು ತಿದ್ದಲಾಗದ, ಸ್ವೇಚ್ಛಾಚಾರಿಯನ್ನು ಮದುವೆಯಾದರೆ, ನೀವು ಕಾಣುವ ಆದರ್ಶ ಸಂಸಾರ ಬರಿಯ ಭ್ರಾಂತಿಯಾಗುತ್ತದೆ."

"ಆದರೆ ಕಲಿತ ಹೆಣ್ಣುಗಳೆಲ್ಲಾ ತಿದ್ದಲಾಗದ, ಬಗ್ಗಿಸಲಾಗದ ಸ್ವೇಚ್ಛಾ ಚಾರಿಗಳಲ್ಲ. ಅವರಲ್ಲೂ ಮಾನವಂತರಿದ್ದಾರೆ. ತುಂಬಿದ ಕೊಳದಂತೆ, ಆಡಂಬರವಿಲ್ಲದೆ ಇರುವವರೂ ಇದ್ದಾರೆ. ಕುಲೀನ ಮನೆತನದಲ್ಲಿ ಹಿರಿಯರ, ಸಮಾಜದ ಶಿಷ್ಟಾಚಾರದ ಕಟ್ಟಿನಲ್ಲಿ ಬೆಳೆದು ಬಂದವರಿದ್ದಾರೆ. ಇಂತಹವರು ಕಲಿತಮಾತ್ರಕ್ಕೆ ಆದರ್ಶ ಗೃಹಿಣಿಗಳಾಗುವುದಿಲ್ಲವೆಂದು ಹೇಳುವ ಮಾತು ಸುಳ್ಳು".

"ಅಂತಹವರ ಮಾತು ಬೇರೆ. ಅವರನ್ನು ದೀಪಹಿಡಿದುಕೊಂಡು ಹುಡುಕಿದರೂ ಸಿಗುವುದು ದುರ್ಲಭ. ಅಂತಹವರ ಮಾತಲ್ಲ ನಾನಾಡುತ್ತಿರು

ವುದು. ಈಗ ನಮ್ಮ ಕಾಲೇಜಿನಲ್ಲಿ ಕಲಿಯುವ ತರುಣಿಯರು ಇದ್ದಾರಲ್ಲ ಅವರ ಮಾತು ಹೇಳಿ ? "

" ಅವರಲ್ಲೂ ಯಾಕಿಲ್ಲ ? ಕಾಲೇಜಿಗೆ ಬಂದಾಕ್ಷಣ ಮಾನ ಮರ್ಯಾದೆ, ಸ್ತ್ರೀ ಸಹಜವಾದ ಲಜ್ಜೆ, ನಾಚಿಕೆ, ಮನೆತನದ ಗೌರವಗಳನ್ನು ಗಾಳಿಗೆ ತೂರಿ ಬರಬೇಕೆನ್ನುವ ನಿಯಮವಿಲ್ಲವಷ್ಟೆ."

" ಅಂತಹ ನಿಯಮವಿಲ್ಲದಿದ್ದರೂ ಕಾಲೇಜಿಗೆ ಬರುವ ಆ ಸುವಾಸಿನಿಯರು ನಡೆದುಕೊಳ್ಳುವ ರೀತಿಯನ್ನು ನೀವೇ ಕಂಡಿದ್ದೀರಲ್ಲ. ಅವರ ನಡವಳಿಕೆಯನ್ನು ಕಂಡು ಹೆತ್ತವರು, ಸಮಾಜ, ದೇಶ – ಎಲ್ಲಾ ತಾವು ಕೃತಾರ್ಥರಾದೆವು ಎನ್ನಬೇಕು ! "

" ಹೌದು, ಕೆಲವು ಹೆಣ್ಣುಗಳು ಮನೆಯಲ್ಲಿ ಕೇಳುವವರು ದಿಕ್ಕಿಲ್ಲದೆ ಅಡ್ಡದಾರಿ ತುಳಿದಿದ್ದಾರೆ. ಸ್ತ್ರೀ ಲೋಕಕ್ಕೆ ಅಪಮಾನವಾಗುವಂತಹ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದಾರೆ. ಹೀಗಾದಮಾತ್ರಕ್ಕೆ ಉಳಿದ ಸಭ್ಯರನ್ನು ಅವರ ಗುಂಪಿಗೆ ಸೇರಿಸಿ ಮುಖಕ್ಕೆ ಮಸಿ ಬಳಿಯುವುದು ಯಾವ ನ್ಯಾಯ ? "

" ಇಂದು ಕಾಲೇಜಿನಲ್ಲಿ ಸಿಗುವ ಶಿಕ್ಷಣದಲ್ಲಿ ಸಭ್ಯ, ಸುಶೀಲ, ಗೌರವಸ್ಥ ತರುಣಿಯರಾಗಿ ಉಳಿಯಲು ಸಾಧ್ಯವೇ ಇಲ್ಲ. ಇಲ್ಲಿ ನೂರು ಬಗೆಯ ಆಕರ್ಷಣೆಗಳಿವೆ. ಹೆಜ್ಜೆ ಇಟ್ಟ ಕಡೆ ಹಳ್ಳವಿದೆ. ಕಣ್ಣು ತೆರೆದಿದ್ದರೂ ತಮಗೆ ತಿಳಿಯದಂತೆ ಪ್ರಪಾತಕ್ಕೆ ಮುಗ್ಗರಿಸುತ್ತಾರೆ. ಮುಗ್ಗರಿಸದೆ ದಡಸೇರುವವರು ನೂರಕ್ಕೆ ಒಬ್ಬರೋ ಇಬ್ಬರೋ ! "

" ಅಡ್ಡದಾರಿಗೆ ಬೀಳುತ್ತಾರೆ ಎಂದು ನೀವು ಅನ್ನುತ್ತೀರಿ. ಆದರೆ ಅಡ್ಡದಾರಿಗೆ ಅವರನ್ನು ಎಳೆಯುವವರು ಯಾರು ? ನಿಮ್ಮಂತಹ ತರುಣರೇ ಅಲ್ಲವೇ ?"

" ತರುಣರೆಲ್ಲಾ ಕುಲೀನರು, ಎಲ್ಲಾ ಯೋಗ್ಯರು, ನೀತಿವಂತರು, ಸದಾಚಾರಿಗಳು ಎಂದು ನಾನು ಹೇಳುತ್ತಿಲ್ಲ. ಅವರಲ್ಲೂ ' ಅಧಮ ' ರೆನಿಸುವವರೂ ಇದ್ದಾರೆ. ಆದರೆ ಅಂತಹ ಅಯೋಗ್ಯರು ಹುಡುಗಿಯರನ್ನು ಅಡ್ಡದಾರಿಗೆ ಎಳೆದರೆ ಹುಡುಗಿಯರೇಕೆ ಆದಾರಿ ತುಳಿಯಬೇಕು ? ಅವರ ಬಲೆಗೆ ಬೀಳಬೇಕೇಕೆ – ಎಂಬುದೇ ನನ್ನ ಪ್ರಶ್ನೆ. ಹುಡುಗಿಯರಲ್ಲಿ ಅಂತಹ ಒಂದು

ಕೆಚ್ಚು, ಸಂಯಮ ಇದ್ದಿದ್ದರೆ ಮೊನ್ನೆ ಕಾಲೇಜಿನಲ್ಲಿ ಗುಲ್ಲೋಗುಲ್ಲು ಎದ್ದು ಬಿಟ್ಟಿರುವ ಆ 'ಕ್ರಾಫರ್ಡ್ ಹಾಲ್' ಪ್ರಕರಣದಂತಹವು ನಡೆಯುತ್ತಿತ್ತೆ?"

"ಅದನ್ನು ನಾನು ನಂಬುವುದಿಲ್ಲ. ಎಲ್ಲಾ ಆಕಾಶ ಪುರಾಣ. ಯಾರೋ ದಂಪತಿಗಳು ಸಂಜೆ ವಾಯುವಿಹಾರಾರ್ಥವಾಗಿ ಅಲ್ಲಿ ಹೋಗಿ ಕುಳಿತಿದ್ದಿರಬಹುದು. ಇದನ್ನು ನೋಡಿದ ತರುಣರು ತಮಗಾಗದ ಹುಡುಗಿಯನ್ನು ಅವಮಾನಗೊಳಿಸಲು ಈ ದಂತಕಥೆ ಕಟ್ಟಿ ಹರಡಿದ್ದಾರೆ!"

"ನೋಡಿದವರು ಉಂಟಲ್ಲಾ!"

"ಅದೂ ಕಟ್ಟು ಕಥೆ. ಮೂರು ಕಾಗೆಗಳ ಸಮಾಚಾರ. ಇಂತಹ ಕಥೆಗಳನ್ನು ನೇಯುವುದರಲ್ಲಿ ನಮ್ಮ ವಿದ್ಯಾರ್ಥಿಗಳು ತುಂಬಾ ನಿಸ್ಸೀಮರು! ಅವರ ಬುದ್ಧಿವಂತಿಕೆ, ಜಾಣ್ಮೆಯೆಲ್ಲಾ ಇದರಲ್ಲಿಯೇ ಮುಗಿದುಹೋಗುತ್ತದೆ" ಎಂದೆ ಕಟುವಾಗಿ.

"ಹಾಗಾದರೆ ನೆಗೆದು ಬಿದ್ದೋಯ್ತು ಬಿಡಿ!" ಎಂದರು ಶ್ರೀಕಾಂತನ್. ಈವರೆವಿಗೂ ಮೌನವಾಗಿ ನಮ್ಮ ವಾಗ್ವಾದವನ್ನು ಆಲಿಸುತ್ತಾ ಬಂದಿದ್ದ ಅವರು ನಡುವೆ ಬಾಯಿಹಾಕಿದರು.

"ನಿಮಗೆ ಹೇಗೆನಿಸುತ್ತದೆ ಬಾನಾಡಿ?" ಎಂದು ಪ್ರಶ್ನಿಸಿದೆ.

"ನಡೆದರೂ ನಡೆದಿರಬಹುದು; ಸುಳ್ಳಾದರೂ ಆಗಿರಬಹುದು. ಆದರೆ ಈ ಕಥೆ ಯಾವ ಹುಡುಗಿಯ ಸುತ್ತಾ ಹೆಣೆಯಲ್ಪಟ್ಟಿದೆ ಎಂಬುದನ್ನು ತಿಳಿಯದ ಹೊರತು ನಾನೇನೂ ಹೇಳಲಾರೆ!" ಎಂದರು ಬಾನಾಡಿ.

"ಹೋಗಲಿ, ನಮ್ಮ ಮಾತು ಎಲ್ಲಿಗೋ ಹಾರಿತು. ನೀವು ಅನ್ನುವುದಾದರೂ ಏನು? ಗ್ರಾಜುಯೇಟು ಹುಡುಗಿಯನ್ನು ಮದುವೆಯಾಗುತ್ತೇನೆ ಎಂದಲ್ಲವೇ?........" ನನ್ನ ಕಡೆ ನೋಡುತ್ತಾ ಶ್ರೀಧರ್ ಪ್ರಶ್ನಿಸಿದರು.

"ಹೂಂ, ಅಂತಹವಳನ್ನು ಕೈಹಿಡಿದರೆ ನನ್ನ ಬಾಳು ಹಸನಾಗುತ್ತದೆ – ಎಂದುಕೊಳ್ಳುತ್ತಿದ್ದೇನೆ. ನಾನು 'ಶೆಲ್ಲಿ' ಕವಿಯನ್ನು ಓದಿದರೆ ಆಕೆ 'ಕೀಟ್ಸ್' ಕವಿಯನ್ನ ಓದಿ ಹೇಳುತ್ತಾಳೆ. ಆಕೆ ನನ್ನ ಅಭಿರುಚಿಗೆ ತಕ್ಕಂತೆ ಹೊಂದಿಕೊಂಡು ನನ್ನ ಛಾಯಾನುವರ್ತಿನಿಯಾಗುತ್ತಾಳೆ. ಮನೆ ಸುಖ ಸಂಪೃದ್ಧಿಯ ನೆಲೆಯಾಗುತ್ತದೆ. ಅವಳು ನನ್ನ ಹೆಂಡತಿಯಲ್ಲ, ಸುಖದುಃಖಗಳಲ್ಲಿ ಪಾಲುಗೊಳ್ಳುವ ಬಾಳಿನ ಗೆಳತಿ........"

"ಆದರೆ ಪದವೀಧರಳಾದ ಹೆಂಡತಿಯಿಂದ ನೀವು ಕನಸುಕಾಣುವ ಸುಂದರ ಸಂಸಾರದ ಚಿತ್ರಣ ನಿಮಗೆ ದೊರೆಯುವುದಿಲ್ಲ. ಯಾಕೆನ್ನುತ್ತೀರೋ- ನೀವೂ ಪದವೀಧರರು. ಆಕೆಯೂ ಪದವೀಧರಳು. ನಿಮಗಿಂತ ತಾನೇನೂ ವಿದ್ಯಾಬುದ್ಧಿಯಲ್ಲಿ ಕಡಿಮೆಯಲ್ಲ ಎನ್ನುವ ಅಹಂಭಾವ ಆಕೆಗೆ ಬಂದಿತೆಂದರೆ ನಿಮ್ಮ ಸಂಸಾರದ ನೌಕೆ ಚೂರು ಚೂರಾದಂತೆಯೇ ಸರಿ. ನಿಮಗೆ ಆಕೆಯ ವ್ಯಕ್ತಿತ್ವ ನಿಮ್ಮದರಲ್ಲಿ ಕರಗುವುದು ಬೇಕು. ಆಕೆ ನಿಮ್ಮ ಪಡಿನೆರಳಿನಂತೆ, ನಿಮ್ಮ ಛಾಯಾನುವರ್ತಿನಿಯಾಗಬೇಕೆನ್ನುವ ಆಸೆ. ಆದರೆ ಸ್ವತಂತ್ರ ಆವರಣ ದಲ್ಲಿ ಬೆಳೆದು, ಸ್ವತಂತ್ರ ಮನೋಭಾವ ಹಾಗೂ ವ್ಯಕ್ತಿತ್ವಗಳನ್ನು ಪೋಷಿಸಿ ಕೊಂಡು ಬಂದ ವ್ಯಕ್ತಿಯೊಬ್ಬಳು ನಿಮ್ಮ ದಾಸಿಯಾಗಿ, ಪಡಿನೆರಳಿನಂತೆ ಬಾಳಲು ಒಪ್ಪಿಯಾಳೆ? ಖಂಡಿತ ಒಪ್ಪುವುದಿಲ್ಲ. ಇಂತಹ ಹೆಂಡತಿಯೊಡನೆ ಮಾಡುವ ಸಂಸಾರ 'ಏರು ತಗ್ಗಾಗದೆ' ಇರುತ್ತದೆಯೇ?"

"ನಾನೆಲ್ಲಿ ಆಕೆಯನ್ನು ದಾಸಿಯಾಗಬೇಕೆಂದು ಅಪೇಕ್ಷಿಸುತ್ತೇನೆ? ಆಕೆ ತನ್ನಿಚ್ಛೆಯಂತೆ ಇರಲು ಸ್ವತಂತ್ರ ಕೊಡುತ್ತೇನೆ."

"ಇದು ಹೇಳುವಷ್ಟು ಸುಲಭದ ಕೆಲಸವಲ್ಲ. ನಿಮಗೆ ಸಾಹಿತ್ಯ ಕಲೆಗ ಳಲ್ಲಿ ವೈಯಕ್ತಿಕ ಅಭಿರುಚಿ ಇದೆ. ರಾಜಕೀಯದಲ್ಲಿ ನಿಮ್ಮದೇ ಆದ ಧೋರ ಣೆಯಿದೆ. ನಾಳೆ ಕೈ ಹಿಡಿದ ಪದವೀಧರಳು ನಿಮ್ಮ ಅಭಿರುಚಿ ಧೋರಣೆಗಳಿಗೆ ಹೊಂದಿಕೊಂಡು ಹೋದರೆ ಸರಿ. ಹಾಗಿಲ್ಲದೆ ಹೋದರೆ?....ನೀವು ಕನ್ನಡಾಭಿ ಮಾನಿಗಳಾದರೆ ಅವಳು ಕನ್ನಡವನ್ನು ಹಳಿಯುವವಳಾದರೆ? ನೀವು 'ಕಾಂಗ್ರೆಸ್' ಎಂದರೆ, ಅವಳು 'ಕಮ್ಯೂನಿಸ್ಟ್' ಎಂದರೆ – ನಿಮ್ಮ ಸಂಸಾರದ ಪಾಡೇನಾಗು ವುದೆಂದು ನೀವೆಂದಾದರೂ ಯೋಚಿಸಿದ್ದೀರಾ? ಸಣ್ಣಪುಟ್ಟ ವಿಷಯಗಳಲ್ಲಿ ವೈಮನಸ್ಸು ತಲೆದೋರಿ....ಸದಾ ಒಬ್ಬರಲ್ಲೊಬ್ಬರು ಕುಂದುಕಾಣಲೆತ್ನಿಸುವಿರಿ. ಹೀಗೆ ನಿಮ್ಮಿಬ್ಬರ ನಡುವಣ ಕಂದರ ದೊಡ್ಡದಾಗುತ್ತಾ ನಡೆಯಿತೆಂದರೆ–ಸಂಸಾ ರದಲ್ಲಿ ಇಬ್ಬರಿಗೂ ಬೇಸರ ಬಂದಿತೆಂದರೆ–ಕಡೆಗೆ ವಿವಾಹವಿಚ್ಛೇದನೆಯಲ್ಲಿ ಪರ್ಯ ವಸಾನ ಹೊಂದಬಹುದು! ಆ ಬಾಳಿನ ದುರಂತ ಚಿತ್ರವನ್ನು ಒಮ್ಮೆ ನೆನೆಯಿರಿ!....ಬದುಕಿನಲ್ಲಿ ತಾತ್ವಿಕ ದೃಷ್ಟಿಯುಳ್ಳ ನಿಮ್ಮಂತಹವರಿಗೆ ಇಂತಹ ಒಂದು ಘಟನೆಯೇ ಸಾಕು – ಮುಂದೆ ತಲೆಯೆತ್ತದಂತೆ ಮಾಡಲು...."

"ನನ್ನ ಸ್ವಭಾವವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಹೊಂದಿಕೊಂಡು

ಹೋಗಬಲ್ಲ ಪದವೀಧರ ಕನ್ಯೆಸಿಕ್ಕಿದರೆ ಯಾಕೆ ಮದುವೆಯಾಗಬಾರದು ?" ಎಂದೆ ನಾನು ನನ್ನ ವಾದವನ್ನು ಸಮರ್ಥಿಸಿಕೊಳ್ಳುತ್ತಾ. ಆದರೂ ಶ್ರೀಧರ್ ತೋರಿಸಿದ ಚಿತ್ರ ಎದೆಯೊಡೆಯುವ ಚಿತ್ರ !

" ನೀವೇನೂ ತಿಳಿಯದಿದ್ದರೆ ಒಂದು ಮಾತನ್ನು ಹೇಳುತ್ತೇನೆ. ನಾನು ನಿಮ್ಮ ಸ್ವಭಾವವನ್ನು ಮೊದಲಿನಿಂದಲೂ ನೋಡುತ್ತಾ ಬಂದಿದ್ದೇನೆ. ಇನ್ನೊಬ್ಬರ ಸ್ವಭಾವಕ್ಕೆ ತಕ್ಕಂತೆ ಹೊಂದಿಕೊಳ್ಳುವುದು ಸಹಜವಾಗಿ ನಿಮ್ಮಿಂದಾಗುವ ಕೆಲಸವಲ್ಲ....ಇನ್ನೊಬ್ಬರು ನಿಮ್ಮ ದಾರಿಯಂತೆ ಬಂದರೆ ಆಗ ನಿಮ್ಮ ಸಂಸಾರ ಸುಖದ ಬೀಡಾಗುತ್ತದೆ. ಕಾಲೇಜಿನಲ್ಲಿ ಕಲಿತವಳು ಎಷ್ಟೇ ಗುಣಶಾಲಿಯಾಗಿರಲಿ, ಕೆಲವು ಹೊತ್ತಿನಲ್ಲಿ ನಿಮಗೆ ಎದುರು ನಿಲ್ಲುತ್ತಾಳೆ. ಅಂತಹ ಹೊತ್ತಿನಲ್ಲಿ ಇರಬೇಕಾದ ಸ್ಥೈರಣೆ, ಸಮಾಧಾನ ನಿಮ್ಮಲ್ಲಿಲ್ಲ. ಆದುದರಿಂದ ನಾನು ಹೇಳುವುದಿಷ್ಟು : ನೀವು ಸಿಟ್ಟಾದರೂ ಸರಿ, ಮದುವೆಯಾಗುವುದಾದರೆ – ಎಸ್ ಎಸ್.ಎಲ್.ಸಿ. ಗಿಂತಲೂ ಹೆಚ್ಚಿಗೆ ಓದಿದ ಹುಡುಗಿಯನ್ನು ಮದುವೆಯಾಗಬೇಡಿ ! "

ಈ ಹೊತ್ತಿನಲ್ಲಿ ನನ್ನ ಮನಸ್ಸಿನಲ್ಲಿ ಕುದಿಯುತ್ತಿದ್ದ ' ಆಕೆ 'ಯ ವಿಷಯ ತೆಗೆದರೆ ಅವರಿಂದ ಪ್ರೋತ್ಸಾಹ ದೊರೆಯದೆಂದು ಮನವರಿಕೆಯಾಗಿ – ನಾಲಿಗೆಯ ತುದಿಯತನಕ ಬಂದಿದ್ದ ವಿಷಯವನ್ನು ಅವರಿಗೆ ಹೇಳದೆ ಸುಮ್ಮನಾದೆ.

ಈ ಬಾರಿ ಹಳ್ಳಿಯಲ್ಲಿ ಎಂದಿನಂತೆ ಕಾಲಕಳೆಯಲಾಗಲಿಲ್ಲ. ನನಗಾಗಿ ಅನೇಕ ಘಟನೆಗಳು ಹಳ್ಳಿಯಲ್ಲಿ ಕಾದು ಕುಳಿತಿದ್ದವು. ಅವುಗಳಲ್ಲಿ ರಾಮಾಚಾರ್ ಬಂದು ಹೋದುದು ಮಹದ್ವಿಷಯ. * ಅವನು ಬಂದುಹೋದಮೇಲೆ ನನಗೆ ವಿಮೋಚನೆ ದೊರೆತೀತೆನ್ನುವ ಆಸೆ ಹುಟ್ಟದೆ ಹೋಗಲಿಲ್ಲ. ಇದರ ಪರೋಕ್ಷ ಪರಿಣಾಮ : ಆಕೆಯ ಮೇಲಿನ ನನ್ನ ಮೋಹ ಇಮ್ಮಡಿಸಿತು. ಈಗ ' ಆಕೆ ' ಸದಾ ನನ್ನ ಕಣ್ಣುಮುಂದೆ ಸುಳಿಯುವಳು. ನಾನು ಮೈಸೂರಿನಲ್ಲಿದ್ದಾಗ ಆಕೆಯನ್ನು ದಿನಕ್ಕೆ ಒಂದು ಬಾರಿಯಾದರೂ ಕಾಣುತ್ತಿದ್ದೆ. ಕಾಲೇಜಿಗೆ ಬಾರದಿದ್ದ ದಿನವೂ ನಮ್ಮ ಸಂಚಾರ ಕಾಲದಲ್ಲಿ ತಪ್ಪದೆ ನೋಡುತ್ತಿದ್ದೆ. ಆಕೆಯೂ, ಆಕೆಯ ಗೆಳತಿಯೂ, ನಾವು ಜಗನ್ಮೋಹನ

* ' ಕರುಳಿನ ಉರುಳು ' ಭಾಗದ ದೇವದೂತ ಎನ್ನುವ ಪ್ರಕರಣ.

ಬಂಗಲೆಯ ಬಳಿ ಬರುವವೇಳೆಗೆ ನಮಗೆ ಅಡ್ಡ ಸಿಗುತ್ತಿದ್ದರು. ಹೀಗೆ ಒಂದು ದಿನ ತಪ್ಪದಂತೆ ಅಧಿದೇವತೆಯ ದರ್ಶನ ಕಾದಲನಿಗೆ ದೊರೆಯುತ್ತಿತ್ತು. ಈಗ ನಾನು ಹಳ್ಳಿಯಲ್ಲಿದ್ದೆ. ಆಕೆಯಿಂದ ಸುಮಾರು ನೂರಿಪ್ಪತ್ತು ಮೈಲಿ ದೂರದ ಊರಿಗೆ ಬಂದುಬಿಟ್ಟಿದ್ದೆ. ಈಗ ಆಕೆಯನ್ನು ಕಾಣುವಂತಿಲ್ಲ. ಕಲ್ಪನೆಯಲ್ಲಿ ಮಾತ್ರ ಕಾಣಬಹುದಿತ್ತು. ಈ ಅಗಲಿಕೆಯ ದಿನಗಳಲ್ಲಿ ನನ್ನ ಭಾವನೆಗಳು ಯಾವ ದಿಕ್ಕಿನಲ್ಲಿ ಹರಿದಿದೆಯೆಂದು ನನಗೆ ನಿರ್ದಿಷ್ಟವಾಗಿ ತಿಳಿಯಿತು. ನಾನು ಅದುವರೆಗೂ ಆಕೆಯನ್ನು ದೂರದಿಂದ ಕಂಡು ಪೂಜಿಸುವ ಭಕ್ತನಾಗಿದ್ದೆ. ಈಗ ಆ ದೇವಿಯನ್ನು ನನ್ನವಳನ್ನಾಗಿ ಮಾಡಿಕೊಳ್ಳುವ ಹೃದಯದ ಹಸಿವು ಹುಟ್ಟಿತ್ತು. ಇಷ್ಟಾದರೂ 'ಆಕೆ' ನನಗೆ ಲೈಂಗಿಕ ಆಕರ್ಷಣೆ ಕೊಟ್ಟಿರಲಿಲ್ಲ. ಎಂತಹದೋ ಒಂದು ದೈವಿಕ ಗುಣ ಆಕೆಯ ಬಳಿಗೆ ನನ್ನ ಮನಸ್ಸನ್ನು ಸೆಳೆಯುತ್ತಿತ್ತು. ಈಗ ನನಗೆ 'ಆಕೆ' ಗೆಳೆಯರಷ್ಟೇ ಆಪ್ತ ವ್ಯಕ್ತಿ. ಉಸಿರಾಟಕ್ಕೆ ಶ್ವಾಸಕೋಶಗಳು ಎಷ್ಟು ಅಗತ್ಯವೋ, ನನ್ನ ಜೀವನಸಾಫಲ್ಯಕ್ಕೆ 'ಆಕೆ' ನನ್ನವಳಾಗುವುದು ಅವಶ್ಯವಿತ್ತು. ಆಕೆಯ ನೆನಪು ಪದೇ ಪದೇ ಬಂದು ಹೋಗುತ್ತಿದ್ದುದರಿಂದ ಆಕೆಯನ್ನು ನಾನು ಸತ್ಯಕ್ಕಿಂತಲೂ ಸ್ಪಷ್ಟವಾಗಿ ನೋಡುತ್ತಿದ್ದೆ.

ಒಂದು ದಿನ 'ದಿಣ್ಣೆ' ಯ ಕಡೆ ಸಂಜೆ ಹೊರಟಿದ್ದೆ. ದಾರಿಯುದ್ದಕ್ಕೂ ಆಕೆಯ ನೆನಪಿನ ನರ್ತನ ಸಾಗಿತ್ತು. ಮೈಸೂರಿಗೆ ಹಿಂತಿರುಗಿದನಂತರ ಮೊದಲು ಆಕೆಯ ಜಾತಿ, ಮದುವೆಯ ವಿಷಯ, ಮನೆತನ – ಇವುಗಳನ್ನು ವಿಚಾರಿಸಿ ತಿಳಿದುಕೊಳ್ಳಬೇಕು. ಸ್ನೇಹಿತರು ನನ್ನ ಬಗ್ಗೆ ತಪ್ಪು ತಿಳಿದರೂ ಚಿಂತೆಯಿಲ್ಲ. ಪರಿಹಾಸ್ಯಮಾಡಿದರೂ ಸರಿ. ಆಕೆಯ ಬಗ್ಗೆ ಎಲ್ಲಾ ಸಂಗತಿಯನ್ನು ಸಂಗ್ರಹಿಸಬೇಕು. ಆಕೆಯ ಸಂಗತಿಗಳು ನನ್ನ ಮಾರ್ಗಕ್ಕೆ ಅನುಕೂಲವಾದರೆ ಈ ವಿಷಯದಲ್ಲಿ ಮುಂದುವರಿಯಬೇಕು.....ಎಂದು ಏನೇನೋ ಕನಸುಗಳು! ಆಗ ಮತ್ತೊಂದು ಹೆದರಿಕೆ. ನಾನು ಸ್ವತಂತ್ರ ವ್ಯಕ್ತಿಯಲ್ಲ. ಬಲೆಯಲ್ಲಿ ಸಿಕ್ಕಿಕೊಂಡ ಮೀನಿನಂತೆ ಇದ್ದೇನೆ. ನನಗಾಗಿ ಕಾದಿರುವ ಅಕ್ಕನ ಮಗಳ ವಿಷಯ ಆಕೆಗೆ ತಿಳಿದುಹೋದರೆ! ನನ್ನ ಆಮಂತ್ರಣವನ್ನು ಆಕೆ ತಿರಸ್ಕರಿಸಿಬಿಟ್ಟರೆ!........

ಅಲ್ಲೇ ಒಂದು ಬಗೆಯ ಆನಂದ! ನನ್ನ – ಹಾಗೂ ಮೈಸೂರಿನ

ಹುಡುಗಿಯ ವ್ಯವಹಾರ ಅಕ್ಕನ ಕಿವಿಗೆ ಬಿದ್ದರೆ ಆ ಸಂಬಂಧದಿಂದ ನನಗೆ ಬಿಡುಗಡೆ ದೊರೆತರೂ ದೊರೆಯಬಹುದು, ಎನ್ನುವ ದೂರದ ಆಸೆ !

ನಾನು ನೇರಹೋಗಿ ನನ್ನ 'ಖಾಯಂ' ಸ್ಥಳದಲ್ಲಿ ಕುಳಿತುಕೊಂಡೆ. ಇಂದು ಆಕಾಶವೆಲ್ಲಾ ಮೋಡಗಳಿಂದ ತುಂಬಿತ್ತು. ಸೂರ್ಯನು ಮೋಡಗಳ ಮರೆಯಲ್ಲಿ ಮಾಯವಾಗಿದ್ದ. ಹಿಂದೆಂದೂ ಇರದಿದ್ದ ಬಿರುಗಾಳಿ – 'ರೊಯ್' ಎಂದು ಬೀಸುತ್ತಿತ್ತು. ಸುತ್ತಲಿದ್ದ ಮರಗಳು ಮರ್ಮರಗುಟ್ಟುತ್ತಿದ್ದುವು. ಗೂಡಿಗೆ ಮರಳಲಿರುವ ಹಕ್ಕಿಗಳ ಚಿಲಿಪಿಲಿ ರವ, ಮನೆಯ ಕಡೆ ಮುಖಮಾಡಿ ನಡೆದ ದನಕರುಗಳ 'ಅಂಬಾ' ಎನ್ನುವ ಧ್ವನಿ, ದೂರದ ಊರಿನ ನಾಯಿಗಳು ಊಳಿಡುವ ವಿಕಾರವಾದ ಧ್ವನಿ ಇವೆಲ್ಲವೂ ಒಂದು ವಿಧವಾದ ರುದ್ರ ಗಂಭೀರ ಆವರಣವನ್ನು ಏರ್ಪಡಿಸಿತ್ತು. ಇಂತಹ ಹೊತ್ತಿನಲ್ಲಿ ಯಾರೋ ಬಂಡೆಯೇರಿ ನನ್ನೆಡೆಗೆ ಬಂದಂತಾಯಿತು. ಅವರು ತೀರಾ ಪರಿಚಯದ ವ್ಯಕ್ತಿಯಂತೆ ತೋರಿದರು. ಉಟ್ಟಿರುವುದು ಒಂದು ಬಿಳಿಯ ಸೀರೆ, ತಲೆಯ ತುಂಬಾ ಮುಸುಕು. ಬಂದವರೇ ನನ್ನ ಬಳಿಯ ಎತ್ತರದ ಬಂಡೆಯಮೇಲೆ ಕುಳಿತುಕೊಂಡರು. ನಾನು ಎಚ್ಚರವಾಗಿಯೇ ಇದ್ದೆ. ಬಂದವರು ಇಂತಹವರೇ ಎಂದು ತಿಳಿದುಹೋಯಿತು.

"ನೀವು ಇಲ್ಲಿಗೆ ಎಂದು ಬಂದಿರಿ ?" ಎಂದೆ.

"ನೀವು ಬಂದ ದಿನವೇ" ಆಕೆ ಉತ್ತರಿಸಿದಳು.

"ಯಾರ ಮನೆಗೆ ಬಂದಿದ್ದೀರಿ ?"

"ನಿಮ್ಮ ಮನೆಗೇ"

"ಎಲ್ಲಿ ಕಾಣಲೇ ಇಲ್ಲ.... ?"

"ನೀವು ಕಾಣ ಬಯಸಲಿಲ್ಲ !" ಎಂದು ನಕ್ಕಳು.

"ಇಲ್ಲಿಗೆ ನೀವು ಬಂದುದೇಕೆ ?....ಕರೆತಂದವರಾರು ?"

"ನೀವು 'ಬಾ' ಎಂದಿರಿ....ನಾನು ನಿಮ್ಮ ಹಿಂದೆಯೇ ಹೊರಟ ಬಂದೆ....ಚೆನ್ನಾಯಿತು. ಆಗಲೇ ಮರೆತು ಬಿಟ್ಟಿದ್ದೀರಿ ನೀವು. ಹಾಗಾದರೆ ನನ್ನ ಮೇಲೆ ನಿಮಗೆ ಇಷ್ಟೆಯೇ ಪ್ರೀತಿ ?"

"ಛೆ ! ಛೀ !! ನೀನೆನ್ನರಗಿಣಿ....ನನ್ನ ಪ್ರೇಮ ಪುತ್ಥಳಿ. ನಿನಗಾಗಿ ನಾನು ಏನು ಬೇಕಾದರೂ ಮಾಡಬಲ್ಲೆ........"

"ಹಾಗಾದರೆ........ಅಕ್ಕನ ಮಗಳನ್ನು ನೀವು ತ್ಯಜಿಸಬಲ್ಲಿರಾ ?"

"ಇದೇ ತ್ಯಜಿಸುತ್ತೇನೆ. ಅವಳನ್ನು ಎಂದೂ ನಾನು ಪ್ರೀತಿಸಿಯೇ ಇರಲಿಲ್ಲ !"

"ನನ್ನನ್ನು ಕಂಡರೆ ನಿಮ್ಮ ಸ್ನೇಹಿತರಿಗೆ, ನಿಮ್ಮ ತಂದೆಗೆ ಆಗುವುದಿಲ್ಲ—ನಾನು ಕಲಿತವಳಂತೆ ! ನಾನು ನಿಮಗೆ ಸರಿಯಾದ ಜೋಡಿಯಲ್ಲವಂತೆ ! ನಾನು ನಿಮ್ಮನ್ನು ವರಿಸಿದರೆ ನಿಮ್ಮ ಸಂಸಾರ ಹದಗೆಡುವುದಂತೆ !....ಹೀಗೆಲ್ಲಾ ಬಾಯಿಗೆ ಬಂದಂತೆ ಹರಟುತ್ತಿದ್ದಾರೆ !"

"ಅವರ ಪಾಡಿಗೆ ಅವರು ಹರಟಿಕೊಳ್ಳಲಿ ಬಿಡು. ನಾವಿಬ್ಬರೂ ನೆಮ್ಮದಿಯಾಗಿದ್ದರಾಯಿತಲ್ಲಾ !"

"ನನ್ನನ್ನು ಮದುವೆಯಾದರೆ ನಿಮ್ಮ ತಂದೆ ನಿಮ್ಮಮೇಲೆ ಸಿಟ್ಟುಮಾಡಿಕೊಂಡು ಮನೆಯಿಂದ ಹೊರಗೆ ಹಾಕಿದರೆ ?"

"ಮನೆಯನ್ನು ತೊರೆಯುತ್ತೇನೆ. ಅವರು ಕಾಣದಿರುವ ಎಡೆಗೆ ನಿನ್ನನ್ನು ಕರೆದೊಯ್ಯುತ್ತೇನೆ........"

"ಹಾಗಾದರೆ ನನ್ನನ್ನು ಎಂದು ಮದುವೆಯಾಗುತ್ತೀರಿ ?"

"ಇಂದೇ........ಬಾ, ಗಂಧರ್ವವಿವಾಹ ಮಾಡಿಕೊಳ್ಳೋಣ ! ಪಂಚಭೂತಗಳೇ ಸಾಕ್ಷಿಯಾಗಿರಲಿ ! ಈ ಸ್ಥಳ – ಆಗಸ, ಸುತ್ತಲಿನ ನಿಸ್ತಬ್ಧ ಜಗತ್ತೆಲ್ಲವೂ ಸಾಕ್ಷಿಯಾಗಿರಲಿ !"

ಆಕೆ ನನ್ನ ಮಾತನ್ನು ಕೇಳಿ ನಕ್ಕಳು. ನಾನು ಆಕೆಯ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಳ್ಳಲು ನೋಡಿದೆ. ಆದರೆ ನನ್ನ ಸ್ಪರ್ಶವಾದೊಡನೆಯೇ ಆಕೆ ಕಿಟಾರನೆ ಕಿರುಚಿಕೊಂಡಳು ! ನನಗೆ ಗಾಬರಿಯಾಯಿತು. "ನೋಡಿ........ನಿಮ್ಮ ಅಕ್ಕ ಕಾಳಿಯಾಗಿ ಬರುತ್ತಿದ್ದಾಳೆ ! ನೀವು ಆಕೆಯ ಸ್ವತ್ತಂತೆ! ನಿಮ್ಮ ಕೈಯನ್ನು ನಾನು ಹಿಡಿದರೆ, ನನ್ನನ್ನು ಜೀವಸಹಿತ ಹುರಿದು ಮುಕ್ಕುವಳಂತೆ !"

ಆಕೆ ಗಳಗಳನೆ ಅತ್ತಳು.

ಅನತಿದೂರದಲ್ಲಿ ಯಾರೋ ಗರ್ಜಿಸುತ್ತಾ ಬಂದರು. ದಿಟ್ಟಿಸಿನೋಡಿದೆ. ಅಕ್ಕ, ಮಗಳ ಕೈಯನ್ನು ಹಿಡಿದುಕೊಂಡು ದರದರನೆ ಎಳೆತಂದು ಅವಳನ್ನು ನನ್ನ ಮುಂದೆ ತಳ್ಳಿದಳು.

"ನನ್ನ ಕಣ್ಣೆದುರಿಗೇ ಇವಳನ್ನು ಬಿಟ್ಟು ಅವಳನ್ನು ಮದುವೆಯಾಗುವ ಧೈರ್ಯ ಬಂತೆ? ಅದು ಹೇಗೆ ಮದುವೆಯಾಗುತ್ತೀಯೋ ಆಗು. ನೋಡುತ್ತೇನೆ. ಏ! ಚಂಡಾಲಿ!! ಒಂದು ಹೆಜ್ಜೆ ಮುಂದೆ ಇಡು. ಕಾಲನ್ನು ಕತ್ತರಿಸುತ್ತೇನೆ. ಯಮಲೋಕಕ್ಕೆ ಅಟ್ಟುತ್ತೇನೆ......." ಎಂದು ರಾಕ್ಷಸಿಯಂತೆ ಗುಡುಗಿದಳು ಅಕ್ಕ. ಅವಳಿಗೆ ಹೆದರಿಕೆಯಾಯಿತು. ಬೀಳುವುದನ್ನೂ ಏಳುವುದನ್ನೂ ನೋಡದೆ ಬಲಭಾಗದ ತೋಪಿನ ಕಡೆ ಓಡಿಹೋದಳು.

ಅಕ್ಕ, ತನ್ನ ಮಗಳ ಕೈಯನ್ನು ನನ್ನ ಕೈಯಲ್ಲಿ ತುರುಕಿ "ನೀನು ಇವಳ ಗಂಡ! ಮರೆಯಬೇಡ!" ಎಂದು ಗಹಗಹಿಸಿ ನಕ್ಕಳು. ಆ ಅಟ್ಟಹಾಸ ಕೇಳಲಾರದೆ ತಲೆ ಸುತ್ತಿ ಬಂತು. ಹಾಗೆಯೇ ಕಣ್ಣುಮುಚ್ಚಿ ಬಂಡೆಯಮೇಲೆ ಬಿದ್ದುಬಿಟ್ಟೆ.

ತಂಗಾಳಿ ಬೀಸಿತು. ಕಣ್ಣುಬಿಟ್ಟು ನೋಡಿದೆ! ಅಕ್ಕನೂ, ಅಕ್ಕನ ಮಗಳೂ ಯಾರೂ ಇರಲಿಲ್ಲ. ಸೂರ್ಯನು ಮುಳುಗಿ ಬಹಳ ಹೊತ್ತಾಗಿತ್ತು. ಸುತ್ತಲೂ ಕತ್ತಲು ಕವಿದಿತ್ತು.

'ಇಷ್ಟುಹೊತ್ತು ನಡೆದದ್ದು ಕನಸೆ? ನಿಜವೇ?........ಎಂದು ಪ್ರಶ್ನಿಸಿಕೊಂಡೆ. ಖಂಡಿತ ಸ್ವಪ್ನವಲ್ಲ........ಅದು ನಡೆದಾಗ ನಾನು ಎಚ್ಚೆತ್ತೇ ಇದ್ದೆ. ಎಂತಹ ರೋಮಾಂಚಕ ಅನುಭವ!

ಅಂದು ರಾತ್ರಿ ಒಂದು ಕನಸುಬಿತ್ತು.

ನಾನು ಕಾಲೇಜಿನಲ್ಲಿರುವ ಹುಡುಗಿಯರನ್ನೆಲ್ಲಾ ಕಟ್ಟಿಕೊಂಡು ನಮ್ಮೂರಿಗೆ ವಿಹಾರಾರ್ಥವಾಗಿ ಬಂದಿದ್ದೇನೆ. ಊರಿನ 'ಮರಳು ಭಾವಿ' ಯಲ್ಲಿ ಅವರೊಂದಿಗೆ ಜಲಕ್ರೀಡೆಯಾಡುತ್ತಿದ್ದೇನೆ. ನನ್ನ ಜಲಕ್ರೀಡೆ ತುಂಬಾ ಹೊತ್ತಿನ ತನಕ ಸಾಗಿದೆ. ಇದ್ದಕ್ಕಿದ್ದಹಾಗೆ ದಡದಮೇಲಿದ್ದ ನನ್ನ ಅರಿವೆಗಳನ್ನು 'ಆಕೆ' ನನ್ನ ಕಣ್ಣೆದುರಿನಲ್ಲಿಯೇ ಎತ್ತಿಕೊಂಡು ಉತ್ತರಮುಖವಾಗಿ ಓಡಿಬಿಟ್ಟಳು. ನಾನು ಆಕೆಯನ್ನು ಬೆನ್ನಟ್ಟಿಹೋದೆ. ನನ್ನ ಬಟ್ಟೆಗಳನ್ನು ನನಗೆ ಹಿಂತಿರುಗಿಸಲು ಬೇಡುತ್ತಾ ಹಿಂಬಾಲಿಸಿದೆ. ಆದರೆ ನನ್ನ ಮೊರೆಯನ್ನು 'ಆಕೆ' ಆಲಿಸದೆ ಓಡುತ್ತಿದ್ದಳು. ನನಗೆ ಆಕೆಯ ಹಿಂದೆ ಓಡಿಓಡಿ ಆಯಾಸವಾಯಿತು. ಕಡೆಗೊಮ್ಮೆ ಸುಸ್ತಿನಿಂದ ಬಿದ್ದುಬಿಟ್ಟೆ. ಕಣ್ ಬಿಟ್ಟಾಗ ಬೆಳಗಿನ ಜಾವ ನಾಲ್ಕು ಗಂಟೆಯ ಸಮಯವಾಗಿತ್ತು. ಎಂತಹ ಹುಚ್ಚು ಕನಸು!

ಎಂದುಕೊಂಡು ಮುಸುಕೆಳೆದು ಮಲಗಿದೆ. ಆದರೆ ನಿದ್ರೆಹತ್ತಲಿಲ್ಲ. ಈ ಕನಸಿನ ಅರ್ಥ ಏನಿರಬಹುದು ಎಂದು ಆಲೋಚಿಸುತ್ತಾ ಹೊರಳುತ್ತಿದ್ದಂತೆ– ಬೆಳ್ಳಂ ಬೆಳಗಾಯಿತು. ಕಾಫಿಯು ಕರೆಯೂ ಬಂತು !

ಈಗ ಊರಿನಲ್ಲಿ ಹೆಚ್ಚು ದಿನ ಕಳೆಯುವುದು ನನ್ನಿಂದಾಗದೆ ಹೋಯಿತು. ಆಕೆಯನ್ನು ಕನಸಿನಲ್ಲಿ ಕಂಡಮೇಲೆ ಒಂದೆರಡು ದಿನ ಮಂಕಾಗಿ ಇದ್ದುಬಿಟ್ಟೆ. ನನ್ನ ಕನಸನ್ನು ಯಾರೊಂದಿಗಾದರೂ ಹೇಳಿಕೊಳ್ಳುವ ಆಸೆ ! ಆದರೆ ಹೇಳು ವುದು ಯಾರೊಂದಿಗೆ ? ಈಗ ನನಗೆ ಹೊತ್ತು ಕಳೆಯಲು ದಾರಿ ಕಾಣಲಿಲ್ಲ. ನನ್ನ ಗ್ರಂಥ ಸಮುದಾಯ ನನಗೆ ಬೇಡವಾಯಿತು. ಪರಿಚಿತರ ಆಪ್ತ ಮಾತುಕತೆ ಬೇಸರವಾಯಿತು. ಈಗ ಮೈಸೂರಿಗೆ ಮರಳಲು ದಿನಗಳನ್ನು ಎಣಿಸುತ್ತಿದ್ದೆ. ಒಂದು, ಎರಡು, ಮೂರು, – ಇನ್ನು ಮೂರು ದಿನಗಳನ್ನು ಕಳೆದರೆ– ' ಆಕೆ ' ಮೈಸೂರಿನಲ್ಲಿ ಕಾಣಸಿಗುತ್ತಾಳೆ. ಆದರೆ ಈ ಮೂರು ದಿನಗಳನ್ನು ನೂಕುವ ಬಗೆ ಹೇಗೆ ? ಈಗಂತೂ ನನ್ನ ಕಣ್ಣಿಗೆ ಎತ್ತ ತಿರುಗಿದತ್ತ ' ಆಕೆ 'ಯೇ ಕಾಣಿಸುತ್ತಿದ್ದಳು. ಮರ್ತ್ಯಲೋಕದ ಎಲ್ಲಾ ಹೆಣ್ಣಿನ ಸೌಂದರ್ಯವನ್ನು ಹೀರಿ ರೂಪಗೊಂಡ ದೇವಕನ್ಯೆಯಂತೆ ನನ್ನ ಅಂತಃಚಕ್ಷುವಿಗೆ ಕಂಗೊಳಿಸುತ್ತಿದ್ದಳು. ಎಂದಿಗೆ ಆಕೆಯನ್ನು ಕಂಡು ನನ್ನ ಪ್ರೇಮವನ್ನೆಲ್ಲಾ ಅವಳಿಗೆ ನಿವೇದಿಸುವೆನು ? ಎಂದಿಗೆ ಆಕೆಯ ಮಧುರ ಸಾನ್ನಿಧ್ಯದ ಸವಿಯನ್ನು ಸವಿದೇನು ? ಎಂದು ಮನಸ್ಸು ಕಾತುರಗೊಂಡಿತ್ತು. ಅಂತೂ– ಇಂತೂ ಆ ಮೂರು ದಿನಗಳನ್ನು ಕಳೆದು ಮೈಸೂರು ರೈಲನ್ನು ಹತ್ತುವ ಹೊತ್ತಿಗೆ ನನಗೆ ಮೂರು ಯುಗಗಳನ್ನು ಕಳೆದಂತೆ ಅನಿಸಿತು.

ಕಾಲೇಜು ಮತ್ತೆ ಕೆಲಸಮಾಡಲಾರಂಭಿಸಿತು. ನಾನು ಎಲ್ಲರಿಗಿಂತ ಮುಂದಾಗಿ ಹೋಗಿ ತರಗತಿಯಲ್ಲಿ ಕುಳಿತೆ. ಮೊದಲನೆಯ ' ಪಿರಿಡ್ ' ಪಾಲಿಟಿಕ್ಸ್ ಕ್ಲಾಸು. ಇಪ್ಪತ್ತು – ಇಪ್ಪತ್ತೈದು ಮಂದಿ ಹುಡುಗಿಯರು ಆ ತರಗತಿಗೆ ಬರುತ್ತಿದ್ದರು. ನಾನು ತರಗತಿಗೆ ಹೋದಾಗ ಅವರ ಸೈನ್ಯ ಇನ್ನೂ ಬಂದಿರಲಿಲ್ಲ. ಗಂಟೆ ಬಾರಿಸಿತು. ಹುಡುಗಿಯರು ಸಾಲುಕಟ್ಟಿ ಕೊಂಡು ಬರುವ ಬಣ್ಣದ ಪತಂಗಗಳಂತೆ ಒಬ್ಬರ ಹಿಂದೊಬ್ಬರು ತರಗತಿಗೆ ಬಂದರು. ನಾನು ಗ್ಯಾಲರಿಯಲ್ಲಿ ಕುಳಿತು ಬಂದವರನ್ನು ನೋಡುತ್ತಿದ್ದೆ. ಎಲ್ಲಾ ವಿದ್ಯಾರ್ಥಿನಿಯರು ಬಂದಿದ್ದರು. ಆದರೆ ' ಆಕೆ ' ಮಾತ್ರ ಬಂದಿರಲಿಲ್ಲ.

ಏನು ಕಾರಣವೋ ಏನೋ? ನನಗಂತೂ ತುಂಬಾ ನಿರಾಶೆ. ಆದರೂ ಇತರ ಹೆಣ್ಣುಗಳ ಉಡಿಗೆತೊಡಿಗೆಗಳನ್ನು ನೋಡುತ್ತಾ, ಅವರು ಮುಡಿದಿದ್ದ ಸುಗಂಧಪುಷ್ಪಗಳ ವಾಸನೆಯನ್ನು ಸವಿಯುತ್ತಾ ಕುಳಿತಿದ್ದೆ !

ಎರಡನೆಯ 'ಪಿರಿಡ್' ಇಂಗ್ಲೀಷ್ ಪದ್ಯಕಾವ್ಯ. ಮತ್ತೆ ಅದೇ ತರಗತಿಯಲ್ಲೇ ಪಾಠ. ನಮಗೆ ಕಾವ್ಯವನ್ನು ತೆಗೆದುಕೊಳ್ಳುತ್ತಿದ್ದ ಉಪಾಧ್ಯಾಯರು ಬೇರೆ ಕಡೆಗೆ ವರ್ಗವಾಗಿದ್ದುದರಿಂದ ಎರಡು ಮೂರು ತರಗತಿಗಳ 'ಕಂಬೈಂಡ್' ಕ್ಲಾಸು. ಇವಕ್ಕೆ ಇನ್ನಷ್ಟು ಹೆಣ್ಣುಮಕ್ಕಳು ಬಂದರು ಇವರೊಂದಿಗೆ 'ಆಕೆ'ಯೂ ತರಗತಿಗೆ ಬಂದಳು. ನಾನು ಆಕೆಯನ್ನು ನೋಡಿದ ಕೂಡಲೇ ಆನಂದದ ಹುಚ್ಚು ಹೊಳೆಯಲ್ಲಿ ಕೊಚ್ಚಿಹೋಗುತ್ತೇನೆಂದು ಮಾಡಿದ್ದೆ. ಆದರೆ ಆಕೆಯನ್ನು ಕಂಡಾಗ ಸಂತೋಷವಾಗುವ ಬದಲು ಒಂದು ಬಗೆಯ ಅತೃಪ್ತಿ ಕಾಣಿಸಿಕೊಂಡಿತು. ಆಕೆಯ ಅಂದ ಚಂದ ಎಲ್ಲಾ ಇಷ್ಟೇಯೆ? ಕನಸಿನಲ್ಲಿ ಕಂಡ ಆ ಅಪ್ಸರೆಯೆಲ್ಲಿ? ಇವಳೆಲ್ಲಿ? ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು ಎನ್ನುವಷ್ಟರಮಟ್ಟಿನ ವ್ಯತ್ಯಾಸ ! ಎದುರಿಗೆ ಕುಳಿತಿರುವ ಈಕೆ ಕನಸಿನಲ್ಲಿ ಕಂಡ ಆಕೆಗಿಂತ ಎಷ್ಟು ರಸಹೀನೆ? ಆ ಮನಮೋಹಕತೆ, ಸೊಬಗು, ಗಾಂಭೀರ್ಯ ಎಲ್ಲಿಹೋಯಿತು?

ನನಗಂತೂ ಆಕೆಯನ್ನು ಪ್ರತ್ಯಕ್ಷ ನೋಡಿ ತುಂಬಾ ನಿರಾಶೆಯಾಯಿತು.

ನನ್ನ ಎದುರಿಗೆ ಕುಳಿತಿದ್ದ 'ಆಕೆ' ಅಂತಹ ರೂಪರಾಣಿಯೇನೂ ಅಲ್ಲ! ಇತರ ಹುಡುಗಿಯರಂತೆಯೇ ಆಕೆಯೂ ಒಬ್ಬ ಸಾಮಾನ್ಯ ಸ್ತ್ರೀ. ಆಕೆಗಿಂತಲೂ ಇತರರು ಎಷ್ಟೋ ಚೆನ್ನಾಗಿದ್ದರು. ಅವರಲ್ಲನೇಕರಿಗೆ ಉಡಿಗೆ ತೊಡಿಗೆಗಳ ಜಬರ್ದಸ್ತು ಇತ್ತು. ಆಕೆಗೆ ಅದೂ ಇಲ್ಲ. ಆಕೆಯುಟ್ಟುದುದು ಒಂದು ಕಾವಿಬಣ್ಣದ ಮಾಸಲು ಸೀರೆ! ಹಣೆಯಲ್ಲಿ ಸಣ್ಣ ಕುಂಕುಮದ ಬಟ್ಟು! ತಲೆಯಲ್ಲಿ ಬಾಡಿದ ಹೂವಿನ ಚೂರು. ಕಿವಿಯಲ್ಲಿ ಬೆಂಡೋಲೆಯೂ ಇರಲಿಲ್ಲ. ಬರೀ ಕಿವಿ! ಒಂದು ಮಾತಿನಲ್ಲಿ ಹೇಳುವುದಾದರೆ 'ಆಕೆ' ಆಶ್ರಮವಾಸಿಯಂತೆ ಕಂಡಳು. 'ಆಕೆ'ಯಲ್ಲಿ ಯಾವ ಆಕರ್ಷಣೆಯೂ ನನಗೆ ಕಾಣಲಿಲ್ಲ. 'ಆಕೆ'ಯ ರೂಪವನ್ನು ಕಂಡು ಬೇಸತ್ತ ನನ್ನ ಕಣ್ಣು ಇತರ ಹುಡುಗಿಯರ ಕಡೆ ಹರಿಯಿತು. ಕೆಲವರು ಆರಂಭದ ದಿನವೆಂದು ತುಂಬ ಥಳಕಿನಿಂದ ಬಂದಿದ್ದರು. ಒಬ್ಬಾಕೆ 'ನಿಗಿನಿಗಿ' ಯೆಂದು ಹೊಳೆಯುವ ಪೀತಾಂಬರ

ವನ್ನು ಉಟ್ಟುಬಂದಿದ್ದಳು. ಇನ್ನೊಬ್ಬಾಕೆ ತೀರಾ ತಿಳುವಾದ ಶುಭ್ರವಾದ 'ವಾಯಲ್' ಸೀರೆ – ಅಲ್ಲಲ್ಲಿ ನಕ್ಷತ್ರಗಳಂತೆ ಹೊಳೆಯುವ ಚುಕ್ಕೆಗಳು – ಉಟ್ಟುಬಂದಿದ್ದಳು. ಕೆಲವರು ಮುಡಿಯನ್ನು ಬಿಚ್ಚಿಕೊಂಡು ಬಂದಿದ್ದರೆ ಮತ್ತೆ ಕೆಲವರು ಮುಡಿಯನ್ನು ಚಕ್ರಾಕಾರವಾಗಿ ಕಟ್ಟಿ ಬಣ್ಣಬಣ್ಣದ ಹೂಗಳಿಂದ ಅಲಂಕರಿಸಿದ್ದರು. ನನಗೆ ಆ ತರಗತಿಯು ನಾನು ಕನಸಿನಲ್ಲಿ ಕಂಡ ಜಲಕ್ರೀಡೆಯ ಚಿತ್ರ ನೆನಪಿಗೆ ತಂದಿತು. ಆದರೆ 'ಆಕೆ' ಮಾತ್ರ ಇಂದು ತನ್ನ ಎಲ್ಲಾ ಸೊಬಗನ್ನು ಕಳೆದುಕೊಂಡಿದ್ದಳು.

ಇವಳಿಗಾಗಿ ನಾನು ಇಷ್ಟು ಬಾಯಿಬಿಡಬೇಕೆ? ಎಂದು ನನ್ನನ್ನು ನಾನೇ ದೂಷಿಸಿಕೊಂಡೆ. ಆದರೆ ಅಗಲಿಕೆಯ ಕಾಲದಲ್ಲಿ ವಾಸ್ತವ ಸತ್ಯಕ್ಕೆ ಮೀರಿದ ಅನೇಕ ಕನಸುಗಳನ್ನು ಕಟ್ಟಿಕೊಂಡು ತಪ್ಪುಮಾಡಿದ್ದೆ. ಈಗ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತ! ರೂಪರಾಶಿಯ ಪರೀಕ್ಷೆ ಈಗ ನಡೆದಿದ್ದರೆ 'ಆಕೆ'ಗೆ ಪಾಸಾಗುವಷ್ಟು ಗಣಗಳನ್ನು ನಾನು ಕೊಡುತ್ತಿದ್ದೆನೋ ಇಲ್ಲವೋ ಹೇಳಲಾರೆ!

ಉಪಾಧ್ಯಾಯರು ಬ್ರೌನಿಂಗ್ ಕವಿಯ "ರಬ್ಬಿ ಬೆನ್ ಎಸ್ರಾ" ಕವಿತೆಯನ್ನು ಮಾಡುತ್ತಿದ್ದರು. ಹಿಂದೆ "ಲಾಸ್ಟ್ ರೈಡ್ ಟುಗೆದರ್" ಕವಿತೆಯನ್ನು ಅವರು ಮಾಡುತ್ತಿದ್ದಾಗ ನಾನು 'ಆಕೆ'ಯೊಂದಿಗೆ ಕಾವ್ಯ ಪ್ರಪಂಚದಲ್ಲಿ ವಿಹಾರ ಹೋಗಿದ್ದೆ. ಅಂತಹೆ ಒಂದು ಸಂದರ್ಭ, ಸದವಕಾಶ, ನನಗೆ ಬರಬಾರದೆ? ಎಂದು ಕೊರಗಿದ್ದೆ.

ಈಗ 'ರಬ್ಬಿ' ಕವನದಲ್ಲಿ ತದ್ವಿರುದ್ಧ ಪರಿಣಾಮ ನನ್ನಮೇಲೆ ಉಂಟಾಗಿತ್ತು. 'ಆಕೆ' ಸ್ವಲ್ಪ ದೂರದಲ್ಲಿ ಕುಳಿತು ನನ್ನ ಆಲೋಚನೆಗಳ ಪರಿವೆಯಿಲ್ಲದೆ ಕೇಳಿದುದನ್ನು ಟಿಪ್ಪಣಿ ಮಾಡಿಕೊಳ್ಳುತ್ತಿದ್ದಳು. ಆದರೆ ನಾನು ಆಕೆಯ ಕಡೆ ದೃಷ್ಟಿ ಹೊರಳಿಸಲೂ ಬೇಸರಪಟ್ಟುಕೊಂಡು ಕುಳಿತಿದ್ದೆ. 'ರಬ್ಬಿ'ಯ ವೇದಾಂತದ ಮೇಲೆ ಉಪಾಧ್ಯಾಯರು ನಿರರ್ಗಳವಾಗಿ ಭಾಷಣ ಮಾಡುತ್ತಿದ್ದರು.

"ಯೌವನ ಕೇವಲ ನೀರುಗುಳ್ಳೆ. ಅದೇ ಜೀವನದ ಸರ್ವಸ್ವವಲ್ಲ. ಕೇವಲ ಕ್ಷಣಿಕವಾದ ಸ್ಥಿತಿ ಅದು. ಅದರ ಸಾರ್ಥಕತೆಯಾಗಬೇಕಾದರೆ ಅದು ಮುಪ್ಪಿನ ಸಿದ್ಧಭೂಮಿಯಾಗಬೇಕು. ಮುಪ್ಪುಗಾಣದ ಯೌವನ ನಿಷ್ಪ

ಯೋಜನ. ಕ್ಷಾರರಹಿತ ಅಡಿಗೆಯಂತೆ — ಸಪ್ಪೆ. ಆದುದರಿಂದ ಎಲೌ ಜವ್ವನಿಗರೇ ! ನನ್ನೊಂದಿಗೆ ಮುಪ್ಪಿನ ಮುದುಕರಾಗಿ ! ಮುಪ್ಪನ್ನು ಮೂದಲಿಸ ಬೇಡಿ !" ಎಂಬರ್ಥದ ಮಾತುಗಳನ್ನು ಆಡುತ್ತಿದ್ದರು. ಪ್ರಾಧ್ಯಾಪಕರು ಮೇಲಿನ ಮಾತುಗಳನ್ನು ನನ್ನನ್ನುದ್ದೇಶಿಸಿ–ಮಾತನಾಡಿದಂತೆ ಭಾಸವಾಯಿತು. ನನಗೆ ಅವರ ಎಲ್ಲಾ ಮಾತು ಅಕ್ಷರಶಃ ನಿಜ, ಸರಿ ಎನಿಸಿತು. 'ಆಕೆ'ಯ ಯಃಕಶ್ಚಿತ ರೂಪಕ್ಕೆ ನಾನೆಷ್ಟು ಬೆರಗಾಗಿಬಿಟ್ಟದ್ದೆ ! 'ಆಕೆ'ಯನ್ನು ಬಿಟ್ಟರೆ ಪ್ರಪಂಚದಲ್ಲಿ ಮತ್ತಾವ ಮೋಹನಾಂಗಿಯರೂ ಇಲ್ಲವೆಂದುಕೊಂಡಿದ್ದೆ, ಕೂಪ ಮಂಡೂಕನಾಗಿ ! ಅದೂ ಈ ಕ್ಷಣಭಂಗುರವಾದ, ಕೆಲವೇ ವರ್ಷಗಳಲ್ಲಿ ಹೇಳಹೆಸರಿಲ್ಲವಾಗುವ, ಯೌವನವನ್ನು ಶಾಶ್ವತ ಸ್ಥಿತಿಯೆಂದು ಭ್ರಮಿಸಿ, ಆದರೆ ನಾನೆಂತಹ ಮರುಳ !

ಅಂದೆಲ್ಲಾ ನಾನು ಹೊಸ ಉತ್ಸಾಹದಲ್ಲಿದ್ದೆ. ಸತ್ಯಶೋಧಕನು ಸತ್ಯವನ್ನು ಕಂಡುಕೊಂಡ ಉತ್ಸಾಹ ನನ್ನದಾಗಿತ್ತು.

ಕೆಲವು ದಿನ ಹೀಗೆಯೇ ಸಾಗಿತು........ಬೆಂಗಳೂರಿನಿಂದ ಒಂದು ಪತ್ರ ಬಂತು. ಆ ಪತ್ರವನ್ನು ಓದಿದೊಡನೆಯೇ ಮನಸ್ಸಿಗೆ ತುಂಬಾ ಬೇಸರ ವಾಯಿತು. ಉದ್ವಿಗ್ನಗೊಂಡ ಮನಸ್ಸು ಪುನಃ ಆಕೆಯ ಬಳಿಗೆ ಧಾವಿಸಿತು; ಆಕೆಯಲ್ಲಿ ಆಶ್ರಯ ಪಡೆಯಲು ನೋಡಿತು. ಈಗ ಆಕೆಯಲ್ಲಿ ನಾನು ಹಿಂದೆ ಕಂಡ ಕನಸುಗಳೆಲ್ಲಾ ಮರುಕೊಳಿಸಿದುವು. ಆಕೆಯಿಲ್ಲದೆ ನನಗೆ ಜೀವವೇ ಇಲ್ಲ ಎನ್ನುವ ಉನ್ಮತ್ತಸ್ಥಿತಿಗೂ ನಾನು ಹೋಗಿಬಿಟ್ಟೆ ! ಈಗ ಗೆಳೆಯರಲ್ಲಿ ಆಕೆಯ ವರ್ಣನೆ ಪದೇ ಪದೇ ಮಾಡುತ್ತೇನೆ. "ಆಕೆಯಲ್ಲಿ ತಾರಿಣಿಯ ಚಿತ್ರವನ್ನು ಕಂಡಿದ್ದೇನೆ. 'ಆಕೆ' ನನ್ನ ಜೀವದ ಉಸಿರು. 'ಆಕೆ'ಯಿಲ್ಲದೆ ನನಗೆ ಬಾಳಿಲ್ಲ" ಎಂದು ಬಾಯಿಗೆ ಬಂದಂತೆ ಹರಟು ತ್ತೇನೆ !

ಈಗ ಗೆಳೆಯರ ಕಣ್ಣು ತೆರೆಯಿತು. ಅವರು ನನ್ನಲ್ಲೇಳುತ್ತಿದ್ದ ಭಾವನೆಗಳನ್ನು ಅರಿಯಲು ಪ್ರಯತ್ನಿಸಿದರು. ನನ್ನ ಪ್ರೇಮಾಲಾಪವನ್ನು ಕೇಳಿ – ಕಾಲೇಜು ಹುಡುಗಿಯರ ಮೇಲಣ ಬೆಡಗಿಗೆ ಮನಸೋಲಬಾರದು ಎಂದು ತಿಳಿಯಹೇಳಿದರು. ಆದರೆ ನನ್ನ ಮನಸ್ಸು ಈ ವಿಷಯದಿಂದ ಮುರಿಯಲಿಲ್ಲ.

"ಆಕೆಯು ಯಾವ ಜಾತಿಯೋ ಏನೋ?" ಎಂದು ಪ್ರಶ್ನಿಸಿದರು ಶ್ರೀಧರ್.

"'ಆಕೆ' ನಮ್ಮ ಜಾತಿಯೆಂದು ಕಾಣುತ್ತೆ. ಹಾಗಿಲ್ಲದಿದ್ದರೂ 'ಆಕೆ' ಬ್ರಾಹ್ಮಣಳು....ಇಷ್ಟು ಮಾತ್ರ ನಿಜ" ಎಂದೆ ನಾನು.

"ನಿಮಗೆ ಹೇಗೆ ಗೊತ್ತು?"

"ಒಂದೆರಡು ಬಾರಿ 'ಆಕೆ'ಯನ್ನು ರಾಯರ ಗುಡಿಯಲ್ಲಿ ಕಂಡಿದ್ದೇನೆ. 'ಆಕೆ'ಯ ಮುಖಛಾಯೆಯೂ ಮಾಧ್ವ ಸಂಪ್ರದಾಯವಂತರ ಕಳೆ. ಇದು ಸುಳ್ಳಾದರೂ 'ಆಕೆ' ಬ್ರಾಹ್ಮಣಳೆಂಬುದು ನಿಜ."

"'ಆಕೆ'ಯ ಮದುವೆಯಾಗಿದ್ದರೆ!" ಎಂದರು ಶ್ರೀಕಾಂತನ್.

"'ಆಕೆ'ಗೆ ಖಂಡಿತವಾಗಿಯೂ ಮದುವೆಯಾಗಿಲ್ಲ. 'ಆಕೆ' ತರಗತಿಯಲ್ಲಿ ನಡೆದುಕೊಳ್ಳುವ ರೀತಿ 'ಆಕೆ' ಇನ್ನೂ ಕುಮಾರಿ ಎಂದು ತೋರಿಸುತ್ತದೆ. ಆಕೆಯ ಆ ಮುಗ್ಧಮುಖ ಆ ತೇಜಸ್ವಿಯಾದ ಕಣ್ಣುಗಳು, ಆ ತುಂಟನಗೆ – ಇವುಗಳು ನನಗೆ 'ಆಕೆ' ಇನ್ನೂ ಮದುವೆಯಾಗದವಳು ಎಂದು ಸಾರಿವೆ. ಅಲ್ಲದೆ ಆಕೆಯ ಕಿವಿಯಲ್ಲಿ ಒಳ್ಳೆಯ ಓಲೆಗಳಾಗಲೀ, ಕೊರಳಿನಲ್ಲಿ ಸರಗಳಾಗಲೀ ಕಂಡಿಲ್ಲ. ಈ ಎಲ್ಲಾ ಕಾರಣಗಳಿಂದ 'ಆಕೆ' ಇನ್ನೂ ಅವಿವಾಹಿತೆ ಎಂಬುದು ಶತಸಿದ್ಧ!"

"ಭೇಷ್!" ಎಂದರು ಗೆಳೆಯರು ನನ್ನ 'ಶೆರ್‌ಲಾಕ್ ಹೋಂಸ್'— ಶೋಧನೆಯನ್ನು ಕೇಳಿ.

"ಆಕೆಯ ನಡತೆ, ಮನೆತನ ಹೇಗಿದೆಯೋ ಯಾರಿಗೆ ಗೊತ್ತು!" ಎಂದರು ಶ್ರೀಧರ್.

"ಅದನ್ನೂ ಸೂಕ್ಷ್ಮವಾಗಿ ಅವಲೋಕಿಸಿ ತಿಳಿದುಕೊಂಡಿದ್ದೇನೆ. 'ಆಕೆ' ರಾಯರ ಮಠಕ್ಕೆ ಆಗಾಗ್ಗೆ ಬಂದು ಹೋಗುವುದರಿಂದ 'ಆಕೆ' ದೈವ ಭಕ್ತಳೆಂಬುದು ಗೊತ್ತಾಗುತ್ತದೆ. ಕಾಲೇಜಿನಲ್ಲಿ ಕಲಿಯುವ ತರುಣಿಯರಲ್ಲಿ ಎಷ್ಟು ಮಂದಿ ದೇವಾಲಯಗಳಿಗೆ ಹೋಗುತ್ತಾರೆ. ಎಲ್ಲೋ ಕೆಲವು ಮಂದಿ–ದೇವರು ದಿಂಡರು, ಗುರುಹಿರಿಯರೆನ್ನುವ ಭಯಭಕ್ತಿ ಇಟ್ಟುಕೊಂಡಿರುವ ಈಕೆಯಂತವರು ಮಾತ್ರ. ಗುರುಹಿರಿಯರಲ್ಲಿ ಭಯಭಕ್ತಿ ಸಾಮಾನ್ಯವಾಗಿ ಸಂಪ್ರದಾಯ ಶರಣರಿಗೆ ಅಭ್ಯಾಸವಾಗಿ ಬರುತ್ತದೆ. ಅಲ್ಲದೆ ಆಕೆಯನ್ನು

ನಾನು ಒಬ್ಬ ಬಡಮುತ್ತೈದೆಯೊಂದಿಗೆ ಹರಟುವುದನ್ನೂ, ಒಬ್ಬ ವೃದ್ಧೆ ಮಡಿ ಹೆಂಗಸಿನೊಡನೆ ಹೋಗುವುದನ್ನೂ ಒಂದೆರಡು ಬಾರಿ ಕಂಡಿದ್ದೇನೆ. ಇದರಿಂದ ಹೊರಬೀಳುವ ಅಂಶವೇನೆಂದರೆ ಆಕೆಗೆ ಹಳೆಯಕಾಲದ, ಕಂದಾಚಾರ ಜನಗಳೆಂದರೆ ಅಸಡ್ಡೆಯಿಲ್ಲ, ತಾತ್ಸಾರವಿಲ್ಲ. ಶಿಷ್ಟಾಚಾರದ ನೆರಳಿನಲ್ಲಿ ಬೆಳೆದಿರುವ ವ್ಯಕ್ತಿಗಳಿಗೆ ಮಾತ್ರವೇ ಇದು ಸಾಧ್ಯ. ಎಂದಮೇಲೆ ಆಕೆಯ ಮನೆಯವರು ಸಂಪ್ರದಾಯ ಶರಣರು, ಪೂರ್ವಾಚಾರವಂತರು – ಎಂದು ಹೇಳಿದಂತಾಯಿತು. ಆದರೆ ಒಂದು ಪ್ರಶ್ನೆ ಏಳುವುದು. ಇಂತಹ ಮನೆಯ ಹೆಣ್ಣುಮಗಳು ಬಿ.ಎ. ಓದುವುದೆಂದರೆ ? ಈ ಪ್ರಶ್ನೆಗೆ ಉತ್ತರ ತಿಳಿದರೆ ಅವಳ ನಡತೆಯ ಬಗ್ಗೆ ಎಲ್ಲಾ ತಿಳಿದಂತಾಗುತ್ತದೆ. ಆಕೆ ತಾನು ಕಾಲೇಜಿನಲ್ಲಿ ಕಲಿತರೂ ಯಾವ ಮಾರ್ಪಾಡಿಗೂ ಒಳಗಾಗುವವಳಲ್ಲ ಎಂಬುದನ್ನು ಮನೆಯ ಜನರಿಗೆ ಮನದಟ್ಟುಮಾಡಿಕೊಟ್ಟಿರುವುದರಿಂದ, ಮನೆಯ ಹಿರಿಯರಿಗೆ ತನ್ನ ನಡತೆಯ ಬಗ್ಗೆ ತುಂಬಾ ವಿಶ್ವಾಸ, ನಂಬಿಕೆ ಹುಟ್ಟಿಸಿರುವುದರಿಂದ ಆಕೆಯ ಕಾಲೇಜಿನ ವಿದ್ಯಾಭ್ಯಾಸ ಸುಸೂತ್ರವಾಗಿ ನಡೆದಿದೆ. ಹೆಣ್ಣುಮಕ್ಕಳನ್ನು ಕಾಲೇಜಿನಲ್ಲಿ ಕಲಿಸುವ ಜನ – ಸುಸಂಸ್ಕೃತರೂ, ವಿದ್ಯಾವಂತರೂ, ಪ್ರಗತಿ ಪರರೂ – ಇರಬೇಕು. ಇಂತಹ ಆವರಣದಲ್ಲಿ ಹುಟ್ಟಿಬೆಳೆದಿರುವ ಈಕೆ ಗುಣಾಢ್ಯಳಿರಬೇಕು."

"'ಆಕೆ' ನಿಮ್ಮ ಅಂತಸ್ಥನ್ನು ಮೀರಿದ್ದರೆ ? ಆಕೆ ಶ್ರೀಮಂತ ಪುತ್ರಿ ಯಾಗಿದ್ದರೆ ?" ಎಂದರು ಬಾನಾಡಿ.

"ಆಕೆ ಶ್ರೀಮಂತ ಪುತ್ರಿಯಲ್ಲ. ಮಧ್ಯಮವರ್ಗದ ಕನ್ಯೆ. ಯಾಕೆಂದರೆ 'ಆಕೆ' ಕಾಲೇಜಿಗೆ ಕಾರು, ಜಟಕ ಮೊದಲಾದ ವಾಹನಗಳಲ್ಲಿ ಬರದೆ ನಡೆದು ಬರುತ್ತಾಳೆ. ಆಕೆಯ ಉಡಿಗೆ ಕೂಡ ತುಂಬಾ ಸಾಧಾರಣ. ಅನೇಕ ಬಾರಿ ಆಕೆಯ ಬಟ್ಟೆಗೆ ಮಸಿ ತಾಗಿರುವುದನ್ನು ನಾನು ಕಂಡಿದ್ದೇನೆ. 'ಆಕೆ' ಓದು ವುದರ ಜತೆಗೆ ಮನೆಗೆಲಸಗಳನ್ನು ಬೇರೆ ಮಾಡಬೇಕೆಂದು ತೋರುತ್ತೆ. ಹೀಗಾಗಿ ಬಟ್ಟೆಗೆ ಮಸಿ, ಕೊಳೆ. ಶ್ರೀಮಂತ ಪುತ್ರಿಯಾಗಿದ್ದರೆ ಪುಸ್ತಕ ಬಿಟ್ಟು ಅಡಿಗೆ ಮೊದಲಾದ ಕೆಲಸಕಾರ್ಯಗಳಲ್ಲಿ ಎಂದಿಗೂ ಕೈಹಚ್ಚಳು" ಎಂದೆ.

"ಪರವಾಗಿಲ್ಲ. ಇಷ್ಟೆಲ್ಲಾ ತಿಳಿದಿದ್ದೀರಿ. ಆಕೆಯ ಮನೆ ಎಲ್ಲಿ ? ತಂದೆಯ ಹೆಸರು........ಚಾಕರಿ ಏನು ?"

"ಈ ವಿಷಯಗಳು ನನಗೆ ತಿಳಿಯದು. 'ಆಕೆ' ವಿರಾಮ ದೊರೆತಾಗ ಲೆಲ್ಲಾ ಕಾಲೇಜಿನಿಂದ ಮನೆಗೆ ಹೋಗಿ ಬರುತ್ತಾಳೆ. ಬಹುಶಃ ಆಕೆಯ ಮನೆ ಕಾಲೇಜಿಗೆ ಸಮೀಪವಾಗಿರಬೇಕು. ಇನ್ನು ತಂದೆಯುವರ ಹೆಸರು, ನೌಕರಿಗಳನ್ನು ಆಕೆಯನ್ನು ಹಿಂಬಾಲಿಸಿ, ಪತ್ತೆ ಹಚ್ಚಬಹುದು. ಆದರೆ ಅಷ್ಟು ಧೈರ್ಯ ನನಗಿಲ್ಲ. ಹೀಗಾಗಿ ಉಳಿದ ವಿವರಗಳು ನನಗೆ ತಿಳಿಯದು.... ಆದರೆ ತಿಳಿಯುವ ಆಸೆ ಬಹಳವಾಗಿದೆ....ನಿಮ್ಮಂತಹ ಗೆಳೆಯರು ತಿಳಿಸಿ ಕೊಡಬೇಕು."

"ಆಕೆಯ ಹೆಸರೇನು ?"

"ಕೆಲವು ಕಾರಣಗಳಿಗಾಗಿ ನಾನು ಈಗ ಹೇಳುವುದಿಲ್ಲ. ಆದರೆ ಇಷ್ಟು ಮಾತ್ರ ಹೇಳುತ್ತೇನೆ. ಆಕೆಯೂ ನಮ್ಮ ತರಗತಿ. ನಾವು ದಿನವಹಿ ಒಮ್ಮೆಯಾದರೂ ಒಬ್ಬರನ್ನೊಬ್ಬರು ಸಂದರ್ಶಿಸುತ್ತೇವೆ."

"ಆಕೆಯೊಂದಿಗೆ ನೀವು ಮಾತನಾಡಿದ್ದೀರಾ ?"

"ಇಲ್ಲ. ಕಾಲೇಜಿನಲ್ಲಿ ಮಾತನಾಡಿಸಲು ಧೈರ್ಯವಿಲ್ಲ, ಅಲ್ಲದೆ ಅವಕಾಶವಿಲ್ಲ. 'ಆಕೆ' ಸದಾ ಯಾರಾದರೊಬ್ಬ ಸ್ನೇಹಿತೆಯರೊಂದಿಗೆ ಇರುತ್ತಾಳೆ. ಸಾಮಾನ್ಯವಾಗಿ ಒಂಟಿಯಾಗಿರುವುದಿಲ್ಲ."

"ನೀವು ಆಕೆಯನ್ನು ಪ್ರೀತಿಸುವ ವಿಷಯ ಆಕೆಗೆ ಗೊತ್ತುಂಟಾ ? ಆಕೆಯಮೇಲೆ ನೀವು ಯಾವುದಾದರೂ ಪರಿಣಾಮಮಾಡಿದ್ದೀರಾ ?"

"ನಾನು ಪ್ರೇಮಿಸುವ ವಿಷಯ ಆಕೆಗೆ ಬಹುಶಃ ಗೊತ್ತಿರಲಾರದು. ಆದರೂ ಅನೇಕ ಬಾರಿ 'ಆಕೆ' ನನ್ನ ಕಡೆ ನೋಡಿ ನಕ್ಕಿದ್ದಾಳೆ. ನಾನು ಆಕೆಯ ಮನಸ್ಸಿನ ಮೇಲೆ ಯಾವುದಾದರೂ ಒಂದು ಮುದ್ರೆ ಒತ್ತಿದ್ದೇನೆ— ಇದು ಖಂಡಿತ. ನಾನು ಪುಸ್ತಕಗಳನ್ನು ತುಂಬಾ ಓದಿದವನು, ಎನ್ನುವ ವಿಷಯವನ್ನು ಆಕೆಗೆ ತಿಳಿಸಿಕೊಟ್ಟದ್ದೇನೆ. ಮಾತಿನಲ್ಲಿ ಖಂಡಿತವಾದಿ ಎಂಬುದೂ ತಿಳಿದಿದೆ. ಇನ್ನು ಹೆಂಗಸರನ್ನು ಕಂಡರೆ ಗೌರವವಾಗಿ ನಡೆದುಕೊಳ್ಳುವೆನೆನ್ನುವ ವಿಷಯ ಆಕೆಗೆ ಗೊತ್ತಾಗಿದೆ. ಇದಕ್ಕೂ ಹೆಚ್ಚಿನ ಸುದ್ದಿ ಆಕೆಗೆ ತಿಳಿದಿರಲಾರದು."

"ಆಕೆಯ ಬಗ್ಗೆ ತುಂಬಾ ಕುತೂಹಲ ಕೆರಳಿಸಿದ್ದೀರಿ. ನಿಮ್ಮಂತಹವ ರನ್ನು 'ಆಕೆ' ತನ್ನ ಮೋಡಿಯಿಂದ ಆಕರ್ಷಿಸಿದ ಮೇಲೆ ಆಕೆಯು ನಿಜ

ವಾಗಿಯೂ ಉಳಿದ ಎಲ್ಲಾ ಹುಡುಗಿಯರಿಗಿಂತ ಬೇರೆ ನಮೂನೆಯವಳೆಂದು ತೋರುತ್ತೆ. ಆಕೆಯನ್ನು ನೋಡಲು ನಮಗೆ ಆಸೆಯಾಗಿದೆ. ಆಕೆಯ ಹೆಸರನ್ನೂ ಹೇಳುವುದಿಲ್ಲವೆನ್ನುತ್ತೀರಿ........ಹೋಗಲಿ ನಾವು ಆಕೆಯನ್ನು ಕಂಡಿದ್ದೇವೆಯೇ?" ಎಂದರು ಶ್ರೀಕಾಂತನ್.

"ಆಕೆಯ ಹೆಸರು ನಿಮ್ಮೆಲ್ಲರಿಗೂ ಗೊತ್ತಿದೆ....ಆಕೆಯು ಹೇಗಿದ್ದಾಳೆಂಬುದನ್ನು ಮಾತ್ರ ಹೇಳುತ್ತೇನೆ. ಆಕೆಯನ್ನು ಪತ್ತೆಹಚ್ಚಲು ನಿಮ್ಮಿಂದಾದರೆ ಪತ್ತೆಮಾಡಿ ನೋಡೋಣ. 'ಆಕೆ' ಒಂಟಿಯಾಗಿ ಇರುವುದೇ ಇಲ್ಲ. ಲೈಬ್ರೆರಿಗೆ ಬಂದು – ಹೋಗಿ, ಮಾಡುವುದು ಹೆಚ್ಚು. ಕಾಲೇಜಿನ ಒಂದು ಸಮಾರಂಭಗಳಿಗೂ 'ಆಕೆ' ಬರುವುದಿಲ್ಲ. 'ಆಕೆ' ನೋಡುವುದಕ್ಕೆ ಸ್ವಲ್ಪ ಕುಳ್ಳ. ಆದರೆ ದೇಹಕ್ಕೆ ತಕ್ಕ ಆಕಾರ! ಮುಖದಲ್ಲಿ ವಯಸ್ಸಾದ ಕಳೆಯಿದ್ದರೂ ಎಳೆಯಮಕ್ಕಳ ಮುಗ್ಧಮುಖ. ಸದಾ ಹಸನ್ಮುಖಿ. ತುಟಿಗಳ ಮೇಲೆ ತುಂಟನಗೆ! ಮಿಂಚು ಕಣ್ಣುಗಳು! ದಿಟ್ಟ ಸ್ವಭಾವದವಳು."

"ಹಾಗಾದರೆ ನನಗೆ ಗೊತ್ತಾಯಿತು ಯಾರು ಅಂತ. ಅವಳ ಹೆಸರು ಕಮಲ!" ಎಂದರು ಶ್ರೀಧರ್.

"ಅಲ್ಲ........" —ಎಂದು ನಾನು ತಲೆಯಲ್ಲಾಡಿಸಿದೆ.

"ಹಾಗಾದರೆ ನಾನು ಹೇಳುತ್ತೇನೆ....ಲಕ್ಷ್ಮಿ" —ಎಂದರು ಶ್ರೀಕಾಂತನ್.

"ಖಂಡಿತ ಅಲ್ಲ...."

"ನಾನು ಸರಿಯಾಗಿ ಹೇಳುತ್ತೇನೆ" ಎಂದು ಕೊಂಚ ಯೋಚಿಸಿ "ಹೂಂ....ಅವಳು....ಲಲಿತ!" ಎಂದರು ಬಾನಾಡಿ.

"ಅಲ್ಲವೇ ಅಲ್ಲಾ....ಈ ಗುಂಪಿಗೆ ಸೇರಿದವಳು ಅಲ್ಲವೇ ಅಲ್ಲಾ........" ಎಂದೆ.

"ನೆಗೆದು ಬಿದ್ದುಹೋಯಿತು!" —ಶ್ರೀಕಾಂತನ್ ಬಾಯಿಂದ ತನಗೆ ತಿಳಿಯದಂತೆ ಈ ಮಾತು ಬಂತು.



# ಅಪ್ರೌಢ್ಯೆಟಿಯ ಶೋಧನೆಯಲ್ಲಿ

ಶೋಧನೆಗೆ ಆರಂಭವಾಯಿತು. ಹೆಣ್ಣೆಂದರೆ ಸಿಡಿದು ನಿಲ್ಲುತ್ತಿದ್ದ ನನ್ನ ಮೇಲೆ ಅಷ್ಟೊಂದು ಪರಿಣಾಮಕಾರಿಯಾಗಿರುವ ಹುಡುಗಿ ಅದೆಂತಹ ಹೆಣ್ಣು ಎಂದು ತಿಳಿಯಲು ಗೆಳೆಯರಿಗೆ ಉತ್ಕಟಾಕಾಂಕ್ಷೆಯುಂಟಾಯಿತು. ಕಾಲೇಜು ತೆರೆದೊಡನೆಯೇ ಅವರ ಪುಡುಗಾಟಕ್ಕೆ ಆರಂಭವಾಯಿತು.

ಎಲ್ಲರಿಗಿಂತಲೂ ಬಾನಾಡಿಗೆ ಈ ವಿಷಯದಲ್ಲಿ ತೀವ್ರಾಸಕ್ತಿ. ಅವರ 'ಭೂಗೋಳದ' ಕೊಠಡಿಯು ಬಳಿಯಲ್ಲೇ ಹೆಂಗಸರ ಕೋಣೆ. ಅಲ್ಲಿಗೆ ಹೋಗಿ ಬರುವಾಗಲೆಲ್ಲಾ, ನಾನು ಕೊಟ್ಟಿದ್ದ ಮಾಹಿತಿಯನ್ನು ನೆನಪಿನಲ್ಲಿಟ್ಟುಕೊಂಡು ಇವರು ಇರಬಹುದೆ? ಇವರು ಇರಬಹುದೇ? ಎಂದು ಅಲ್ಲಿ ಸುಳಿಯುವ ಹುಡುಗಿಯರನ್ನೆಲ್ಲಾ ಗಮನಿಸುತ್ತಿದ್ದರು. ಶ್ರೀಕಾಂತನ್ 'ನಾನು ಒಂದು ಕೈ ನೋಡುತ್ತೇನೆ. ರಸಾತಳದಲ್ಲಿದ್ದರೂ ನಿಮ್ಮ ಕಾವ್ಯದ ಕನ್ಯೆಯನ್ನು ಗುರುತಿಸಿ ಹಿಡಿಯುತ್ತೇನೆ' ಎಂದು ಜಂಬ ಕೊಚ್ಚಿದರು. ಆತ ನನ್ನ 'ವಿಜಯಯಾತ್ರೆ' ಕಾದಂಬರಿಯನ್ನು ಓದಿದ್ದರು. ಅದರಲ್ಲಿ ಚಿತ್ರಿತವಾಗಿರುವ ತಾರಿಣಿಯ ಚಿತ್ರಣ ಅವರ ಮನಸ್ಸಿಗೆ ಹಿಡಿಸಿತ್ತು. ಅಂತಹ ಒಂದು ಅಪೂರ್ವ ಪುಷ್ಪ ಕಾಲೇಜಿನ ವನದಲ್ಲಿದೆಯೇ ಎಂದು ಅವರಿಗೆ ಕುತೂಹಲ. ನಾನು ಅವರಿಗೆ ಎಚ್ಚರಕೊಟ್ಟಿದ್ದೆ. "ಈಕೆ ತಾರಿಣಿಯ ಪ್ರತಿರೂಪವಲ್ಲ. ಅವಳ ಆಕರ್ಷಣೆಯ ಕೆಲವಂಶಗಳನ್ನು ಈಕೆಯಲ್ಲಿ ಕಂಡಿದ್ದೇನೆ. ನಿಮ್ಮ ಕಲ್ಪನಾ ಕುವರಿಗೂ, ಈಕೆಗೂ ತುಂಬಾ ವ್ಯತ್ಯಾಸವಿದೆ. ಈ ಉದ್ಯಮದಲ್ಲಿ ಮುಗ್ಗರಿಸೀರಿ.... ಜೋಕೆ!"

ಶ್ರೀಧರ್ ಸಾಮಾನ್ಯವಾಗಿ ನನ್ನ ಜೊತೆಯಲ್ಲಿರುತ್ತಿದ್ದರು. ಒಂದು ಐಚ್ಛಿಕ ವಿಷಯ ಬಿಟ್ಟರೆ ಉಳಿದ ಎಲ್ಲಾ ವಿಷಯಗಳಿಗೂ ಅವರು ನಮ್ಮ ತರಗತಿ. ನಾನು 'ಕಾರಿಡಾರಿ'ನಲ್ಲಿ ಹರಟೆಕೊಚ್ಚುತ್ತಾ ನಿಂತಿದ್ದರೆ ಅವರು ಕೈಹಿಡಿದು ಎಳೆದುಕೊಂಡು ಒಳ ಅಂಗಳಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ಮುಂದಗಮನೆಯರಾಗಿ ಹೋಗುತ್ತಿದ್ದ ಹುಡುಗಿಯರ ಸೇನೆಯನ್ನು ತೋರಿ

ಸುತ್ತಾ ಇವರೆ? ಇವರೇ? ಇಲ್ಲಾ....ಉದ್ದಕ್ಕೆ ರಷ್ಯನ್ ಸಿಪಾಯಿಯಂತೆ ಇದ್ದಾರಲ್ಲಾ....ಅವರ ಪಕ್ಕದಲ್ಲಿ ಬರುತ್ತಿರುವವರೇ! ಅಥವಾ ಆ ಕೆಂಬೂತಿಯೇ? ಗುಜ್ಜಾನೆಯೇ? ಎಂದು ಹಾಸ್ಯಮಿಶ್ರಿತ ಧ್ವನಿಯಲ್ಲಿ ಕೇಳಿ ಪೀಡಿಸುತ್ತಿದ್ದರು. ನಾನು 'ಅವರಲ್ಲಿ ಯಾರೂ ಅಲ್ಲ....' ಎಂದು ಹೇಳಿ ಅಲ್ಲಿಂದ ಮಾಯವಾಗುತ್ತಿದ್ದೆ.

ಗೆಳೆಯ ಅನಂತ್ ಅವರಿಗೂ ನನ್ನ ಪ್ರೇಮದ ಪ್ರಕರಣ ತಿಳಿಸಿದೆ. ಅವರಿಂದ ಆ ಹುಡುಗಿಯ ಹೆಸರನ್ನು ಮುಚ್ಚಿಟ್ಟುಕೊಳ್ಳಲಿಲ್ಲ. ಆತ ಆಕೆಯ ಹೆಸರು ಕೇಳಿದೊಡನೆಯೇ "'ಆಕೆ' ಮದುವೆಯಾಗದವಳು, ನಿಮ್ಮ ಜಾತಿ, ತುಂಬಾ ಯೋಗ್ಯ ಹುಡುಗಿ" ಎಂದು ಏನೇನೋ ಹೇಳತೊಡಗಿದರು.

"ನಿಮಗೆ ಆಕೆ ಹೇಗೆ ಗೊತ್ತು?" ಎಂದೆ.

"ಆಕೆಯೂ, ಆಕೆಯ ಗೆಳತಿಯೂ ಒಂದು ಬಾರಿ ನನ್ನಿಂದ–'ಬೆಳಗಿಬಾ ಬೆಳದಿಂಗಳೆ' ಎನ್ನುವ ಕವನವನ್ನು ಬರೆಸಿಕೊಂಡರು. ಮದುವೆಯ ಸುದ್ದಿ ಎತ್ತಿದರೆ ತುಂಬಾ ಸಂಕೋಚ, ನಾಚಿಕೆ. 'ಥೂ – ಹೋಗ್ರಿ!' ಎಂದು ಬಿಡುತ್ತಾಳೆ!" ಎಂದರು.

"ಹಾಗಾದರೆ ನನ್ನ ರೊಟ್ಟಿ ಜಾರಿ ತುಪ್ಪಕ್ಕೆ ಬೀಳುವ ಸಂಭವವಿದೆಯೇ?"

"ಬಿದ್ದರೂ ಬಿದ್ದೀತು! ಆದರೆ ಆಕೆಯ ಮನೆಯವರ ವಿಷಯ ನನಗೆ ಏನೊಂದೂ ತಿಳಿಯದು." ಒಂದು ಕ್ಷಣ ತಡೆದು ಅವರು ಪ್ರಶ್ನಿಸಿದರು "ಆಕೆಯ ಬಗ್ಗೆ ನಿಮ್ಮ ನಿಜವಾದ ಭಾವನೆಯೇನು?"

"ಆಕೆಯಲ್ಲಿ ನನಗೆ ಪ್ರೇಮಾಂಕುರವಾಗಿದೆ – ಎಂದುಕೊಳ್ಳುತ್ತಿದ್ದೇನೆ. ಆದರೂ ಅದು ಖಚಿತವಾಗಿ ಮನಸ್ಸಿಗೆ ಬಂದ ಭಾವವಲ್ಲ".

"ನೀವು ಆಕೆಯನ್ನು ಎಂದಾದರೂ ನುಡಿಸಿದ್ದೀರಾ? ನಿಮ್ಮ ಒಳತೋಟ ಆಕೆಗೆ ಗೊತ್ತಿದೆಯೇ?"

"ಬಹುಶಃ ಗೊತ್ತಿರಲಾರದು."

"ಹಾಗಾದರೆ ನಿಮ್ಮ ಪ್ರಣಯ ಮೊದಲ ಹಂತದಲ್ಲೇ ಇದೆ. ನಿಮಗೆ ನಾನೊಂದು ಮಾತು ಹೇಳುತ್ತೇನೆ. ನೀವೇನೂ ತಿಳಿಯಬೇಡಿ........ನಿಮಗೆ

'ಆಕೆ' ಸಿಕ್ಕದೇ ಹೋದರೆ !........'ಆಕೆ' ನಿಮ್ಮ ಪ್ರೇಮವನ್ನು ತಿರಸ್ಕರಿಸಿದರೆ....ಅದನ್ನು ಸಹಿಸುವ ಶಕ್ತಿ ಇದೆಯೇ ?"

"ಇದೆ ಎಂದು ನನ್ನ ನಂಬಿಕೆ."

"ಇದ್ದರೆ ಒಳ್ಳೆಯದು. ಹಾಗಿಲ್ಲದೆ ಹೋದರೆ ಈ ಭಗ್ನಪ್ರಣಯದ ಕಿಡಿ ಮುಂದಿನ ಬಾಳನ್ನೆಲ್ಲಾ ಸುಟ್ಟುಬಿಡುವುದು. ಹಿಂದಣ ನೆನಪು ಮತ್ತೆ ಮತ್ತೆ ಮರುಕಳಿಸಿ ಹೃದಯವನ್ನು ಹಿಂಡಿ, ಹಿಪ್ಪೆಮಾಡಿಬಿಡುವುದು........ ಸಾಮಾನ್ಯವಾಗಿ ಸೂಕ್ಷ್ಮಮತಿಗಳೆಲ್ಲರಿಗೂ ಹೀಗಾಗುವುದು. ನಾನು ನನ್ನ ಸ್ವಂತ ಅನುಭವದಿಂದ ಈ ಮಾತನ್ನು ಹೇಳುತ್ತಿದ್ದೇನೆ. ನೀವು ದಯವಿಟ್ಟು ನನಗಾಗಿ ಈ ವಿಷಯದಿಂದ ಮನಸ್ಸನ್ನು ವಿಮುಖಗೊಳಿಸಿಬಿಡಿ. ಆಕೆಯಲ್ಲಿ ಇಲ್ಲದ ಹೊಂಗನಸನ್ನು ಕಾಣಹೋಗಬೇಡಿ........ಜತೆಗಾತಿಯನ್ನು ಆರಿಸಿ ಕೊಡುವ ಭಾರ ದೈವಕ್ಕೆ ಬಿಟ್ಟು ನೀವು ನಿಶ್ಚಿಂತೆಯಾಗಿರಿ !"

ನಾನು ಮೌನವಾಗಿದ್ದೆ.

"ಅದೂ ಅಲ್ಲದೆ ನಿಮಗೆ ಆಕ್ಕನ ಮಗಳದೊಂದು ಸೆರೆಯಿದೆ. ಅದನ್ನು ಬಿಡಿಸಿಕೊಳ್ಳದೆ ವೃಥಾ ಇಂತಹ ವ್ಯಾಪಾರದಲ್ಲಿ ತೊಡಗಿದರೆ ಇಲ್ಲದ ಸಿಕ್ಕು ತಂದುಕೊಂಡಂತಾಗುತ್ತದೆ. ಮೊದಲು ಆ ಸೆರೆಯನ್ನು ಕತ್ತರಿಸಿಕೊಂಡು ಹೊರಬನ್ನಿ. ಸ್ವತಂತ್ರ ವ್ಯಕ್ತಿಯಾದಮೇಲೆ ಪ್ರೇಮದ ಕರೆಗೆ ಓಗೊಡಿ ! ಈಗ ನೀವು ಈ ಕೆಲಸಮಾಡಿದರೆ ನಿಮಗೆ ತುಂಬಾ ಹಾನಿಯಾಗುವ ಸಂಭವವಿದೆ".

ನಾನು ಮಾತನಾಡಲಿಲ್ಲ.

"ಅಲ್ಲದೆ ನೀವು ಈ ಬಾರಿ ಪರೀಕ್ಷೆಗೆ ಕುಳಿತುಕೊಂಡಿದ್ದೀರಿ. ಪರೀಕ್ಷೆಗಳು ಇನ್ನೆಲ್ಲಾ ಸುಮಾರು ಅರವತ್ತು ದಿನಗಳಿವೆ. ಇಂತಹ ಹೊತ್ತಿನಲ್ಲಿ ಪ್ರಣಯದ ಉರಿಯನ್ನು ಎದೆಯಲ್ಲಿ ಹೊತ್ತಿಸಿಕೊಂಡರೆ ನಿಮ್ಮ ಅಭ್ಯಾಸಕ್ಕೆ ತುಂಬಾ ತೊಂದರೆಯಾಗುತ್ತದೆ. ಈಗ ನಿಮಗೆ ತುಂಬಾ ಜವಾಬ್ದಾರಿಯಿದೆ. ನೀವೇ ಯೋಚಿಸಿ....ನೀವು ಇನ್ನೊಬ್ಬರು ಕೊಡುವ ಹಣದಿಂದ ಓದುತ್ತಿದ್ದೀರಿ. ಒಂದು ವೇಳೆ ಅಭ್ಯಾಸ ಸಾಗದೆ, ಓದು ತಲೆಗೆ ಹಿಡಿಯದೆ ನಿಮಗೆ ಪರೀಕ್ಷೆಯಲ್ಲಿ ಅನ್ಯಾಯವಾದರೆ....ಆಗ ನಿಮಗೆ ತುಂಬಾ ಕಠಿಣ ಪರಿಸ್ಥಿತಿ ಬರುತ್ತದೆ. ನೀವು ಕತ್ತಿಯಮೇಲೆ ನಡೆಯುತ್ತಿದ್ದೀರಿ – ಎಂಬುದನ್ನು ಮರೆಯಬೇಡಿ....

ಪರೀಕ್ಷೆಯಲ್ಲಿ ನಾಪಾಸಾದರೆ ನೆಲೆಯಿಲ್ಲದೆ ನರಳಬೇಕಾಗುವುದೆಂಬುದನ್ನು ನೆನಪಿನಲ್ಲಿಡಿ! ........"

ನಾನು ಮಂತ್ರಮುಗ್ಧನಂತೆ ಆಲಿಸುತ್ತಿದ್ದೆ.

"ನೀವು ಈ ವಿಷಯದಲ್ಲಿ ಚನ್ನಾಗಿ ಆಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬನ್ನಿ. ಈ ಕೆಲಸ ನಿಮ್ಮಿಂದಾಗದೆ ಹೋದರೆ ಗೆಳೆಯರ ಮಾತನ್ನಾದರೂ ಕೇಳಿ – ಅದರಂತೆ ನಡೆಯಿರಿ! ಹಾಗಿಲ್ಲದೆ ನೀವು ದುಡುಕಿ ಈ ವಿಷಯದಲ್ಲಿ ಮುಂದುವರೆದಿರಿ – ಅನ್ನಿ. ನಿಮ್ಮ ಆಕೆಯ ಗೆಳೆತನ ಮಾನಸಿಕವಾಗಿ ಉಳಿಯುವುದಿಲ್ಲ! ಅದು ಕೃತಿಗೆ ಇಳಿಯುತ್ತದೆ. ಆಗ ನೀವು ನಿಮ್ಮ ಪ್ರಣಯದ ರಥಕ್ಕೆ ಆಕೆಯನ್ನು ಒಂದು ಚಕ್ರವಾಗಿ ಸೇರಿಸಿ ಬಿಡುವಿರಿ. ಇದರ ಪರಿಣಾಮ? 'ಆಕೆ' ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ತನ್ನ ಪಾಡಿಗೆ ತಾನು ಓದಿಕೊಳ್ಳುತ್ತಿದ್ದಾಳೆ. ಆಕೆಗೂ ನಿಮ್ಮ ಕೊರಗಿನ ಬಳ್ಳಿಯನ್ನು ಸುತ್ತಿ ಆಕೆಯನ್ನೂ ನಿಮ್ಮ ದಾರಿಗೆ ಎಳೆಯುವಿರಿ. ಇದು ಯಾವ ನ್ಯಾಯ? ನಿಮ್ಮೊಂದಿಗೆ ಆಕೆಯೂ ಅಭ್ಯಾಸವನ್ನು ಮೂಲೆ ಗೊತ್ತಿ ಪರಿತಪಿಸುತ್ತಾ ಕೂಡಬೇಕೆಂಬುದೋ ನಿಮ್ಮಿಚ್ಛೆ? ಹೇಗೆ?...."

ನನಗೆ ಏನು ಹೇಳಲೂ ತೋರಲಿಲ್ಲ. ಅವರೇ ಮುಂದುವರಿಸಿದರು.

"ಇದೂ ಒಂದು ದೃಷ್ಟಿ. ಮತ್ತೊಂದು ದೃಷ್ಟಿಯಲ್ಲೂ ವಿಚಾರ ಮಾಡಿನೋಡಿ! ನಿಮಗೆ ಇಂತಹ ಭಾವನೆಗಳು ಅಪರಿಚಿತ. ಇದು ನಿಮಗೆ ಹೊಸರಂಗ. ಇದಕ್ಕೆ ಹೊಂದಿಕೊಳ್ಳುವುದು ಕಷ್ಟ. ಕಾಲಕ್ಕೆ ತಕ್ಕಂತೆ ವೇಷ, ಭಾಷೆ ಕಲಿತುಕೊಳ್ಳಬೇಕು. ಇದು – ನಿಮಗೆ ಬರುವುದಿಲ್ಲ. ನಿಮ್ಮದು ವಿಚಿತ್ರ ವ್ಯಾಪಾರವಾಗುತ್ತದೆ. ನಿಮ್ಮ ಸ್ನೇಹಿತರಲ್ಲಿ ನೀವು ಒಳ್ಳೆಯ ಹೆಸರನ್ನು ಗಳಿಸಿದ್ದೀರಿ. ಅವರಿಗೆ ನಿಮ್ಮ ಪ್ರಣಯ ಪ್ರಸಂಗ ತಿಳಿದರೆ ಗುಲ್ಲೆಬ್ಬಿಸುತ್ತಾರೆ. ಹಾಸ್ಯಮಾಡುತ್ತಾರೆ. 'ಕ್ರಾಫರ್ಡ್' ಹಾಲಿನ ಘಟನೆ ನಿಮಗೆ ತಿಳಿದೇ ಇದೆಯಲ್ಲ! ಇದನ್ನೆಲ್ಲಾ ಎದುರಿಸಿ ಚಂಚಲಚಿತ್ತರಾಗದೆ ಮೊದಲಿನಂತೆ ಇರುವುದು ನಿಮ್ಮಿಂದ ಸಾಧ್ಯವಿಲ್ಲ. 'ಆಕೆ' ಮತ್ತು ನಿಮ್ಮ ಸಂಬಂಧ ಕಿವಿಯಿಂದ ಕಿವಿಗೆ ಬಿದ್ದು ಕಾಲೇಜಿನಲ್ಲೆಲ್ಲಾ ಹರಡಿ ಆಕೆಗೂ ತಲೆ ಎತ್ತಿ ತಿರುಗದಂತೆ ಅವಮಾನವಾದರೆ? ....ಅದರ ಪರಿಣಾಮ ಎಷ್ಟು ಘೋರ! ಆಲೋಚಿಸಿ" ಎಂದರು ಅನಂತ್.

ನನಗೆ ಅವರ ಮಾತೆಲ್ಲಾ ಸಮಂಜಸವೆನಿಸಿತು.

"ನೀವು ಅನ್ನುವುದಾದರೂ ಏನು ಈಗ ?"

ಇಟ್ಟ ಕಾಲನ್ನು ಹಿಂದಕ್ಕೆ ತೆಗೆದುಕೊಳ್ಳಿ. ಈ ಕೆಲಸ ಈಗ ಅಷ್ಟೇನೂ ಕಠಿಣವಾಗಲಾರದು. ಮುಂದಕ್ಕೆ ಅಡಿಯಿಡುತ್ತಾ ಹೋದರೆ ಬುರುಜಿನಲ್ಲಿ ಸಿಕ್ಕಿಕೊಂಡು – ಹಿಂದಕ್ಕೆ ಬರುವುದೇ ಕಷ್ಟವಾದೀತು !"

"ಆಗಲಿ ನಿಮ್ಮ ಮಾತನ್ನು ಆಲೋಚಿಸಿ ಯಾವುದನ್ನೂ ಹೇಳುತ್ತೇನೆ" ಎಂದು ಅವರಿಂದ ಬೀಳ್ಕೊಂಡೆ. ಈಗ ನನ್ನ ದಾರಿಯನ್ನು ನಾನು ಕಂಡು ಕೊಂಡು ಸರಿಯಾದ ಹೆಜ್ಜೆ ಹಾಕಬೇಕು !

ಮಾರನೆಯ ದಿನ ದೇವರಾಜಾ ಮಾರ್ಕೆಟ್ಟಿನ ಬಳಿ ಅನಂತ್ ಅವರ ತಂಗಿಯೊಂದಿಗೆ ಆಕೆಯೂ ಬರುವುದನ್ನು ಕಂಡೆ. ಬಹುಶಃ ಅವರಿಬ್ಬರೂ ಗೆಳತಿಯರಿರಬೇಕೆಂದುಕೊಂಡೆ.

ಮೂರು ನಾಲ್ಕು ದಿನ ಅನಂತ್ ನನ್ನ ಕೈಗೆ ಸಿಕ್ಕಲಿಲ್ಲ. ಮುಂದೊಂದು ದಿನ ನಮ್ಮ ಭೆಟ್ಟಿಯಾದಾಗ ಅವರಾಗಿ ಅವರೇ ಮಾತು ತೆಗೆದರು. "ನಿಮ್ಮ ಪ್ರಣಯಯಾತ್ರೆ ಎಲ್ಲಿಯವರೆಗೆ ಬಂದಿದೆ? ಬಹುಶಃ ನನ್ನ ಮಾತುಗಳಿಂದ ಅದು ಅಲ್ಲಿಗೇ ಕೊನೆಗೊಂಡಿತೆಂದು ತೋರುತ್ತೆ" ಎಂದರು.

"ಆಕೆಯ ವಿಷಯದಿಂದ ಮನಸ್ಸನ್ನು ವಿಮುಖಗೊಳಿಸಲು ನೋಡಿದೆ. ಆದರೆ ನನ್ನಿಂದ ಸಾಧ್ಯವಾಗಲಿಲ್ಲ. ಬೇರು ಬಲವಾಗಿ ಬೇರೂರಿದೆ. ಕಿತ್ತು ಬಿಸಾಡುವುದು ಅಷ್ಟು ಸುಲಭವಲ್ಲ. ಒಂದೂವರೆ ವರ್ಷದ ಸಸಿ ಅದು. ಸೊಂಪಾಗಿ ನೀರುಂಡು ಬೆಳೆದಿದೆ........" ಎಂದೆ ನಾನು.

"ಹಾಗಾದರೆ ನಾನು ಊಹಿಸಿದುದಕ್ಕಿಂತಲೂ ಹೆಚ್ಚಿನ ಆಳದಲ್ಲಿ ಕಾಲಿಟ್ಟಿದ್ದೀರಿ !"

"ಇನ್ನು ಹಿಂದಕ್ಕೆ ಬರಲು ಸಾಧ್ಯವಿಲ್ಲ. ಮುಳುಗಬೇಕು—ಇಲ್ಲಾ ಈಜಬೇಕು. ತಳದಮೇಲೆ ನಡೆಯಲು ಸಾಧ್ಯವಿಲ್ಲ. ಎಂದೋ ನೆಲ ತಪ್ಪಿಹೋಗಿದೆ".

"ಹಾಗಾದರೆ ನಿಮ್ಮ ಪರಿಣಾಮ ?"

"ಬಾವಿಗೆ ಬಿದ್ದುದಾಗಿದೆ. ಈಜಿಬಿಡೋಣ. ನೀರು ಎಂತಹದೋ ಆಗಲಿ !"

ಈ ಮಾತನ್ನು ಕೇಳಿ "ಐ ಆಮ್ ವೆರಿ ಸಾರಿ, ಐ ಫೌಂಡು ಯು ಟೂ ಲೇಟ್ ! (ನಿಮ್ಮ ವಿಷಯ ನನ್ನ ಕೈಮೀರಿದೆ)" ಎಂದು ವಿಷಾದಪೂರ್ಣ ನಗೆ ನಕ್ಕರು ಅನಂತ್.

"ಅನಂತ್ ನಿಮ್ಮಿಂದ ಒಂದು ಕೆಲಸವಾಗಬೇಕಾಗಿದೆ." ಎಂದೆ.

"ಏನು ?"

ಅವರ ತಂಗಿಯೊಂದಿಗೆ ಆಕೆಯನ್ನು ಕಂಡ ಕಥೆ ಹೇಳಿದೆ. "ತಂಗಿಯನ್ನು ವಿಚಾರಿಸಿದರೆ ಆಕೆಯ ಬಗ್ಗೆ ಹೆಚ್ಚು ವಿಷಯಗಳು ದೊರೆಯುತ್ತದೆ. ಅವು ನನಗೆ ಪ್ರತಿಕೂಲವಾಗಿದ್ದರೆ........ನಾನು ಪಾರಾಗಲು ಒಂದು ಧಾರಿ ಸಿಕ್ಕೀತು !" ಎಂದೆ.

"ಆಗಲಿ ವಿಚಾರಿಸಿ ತಿಳಿಸುತ್ತೇನೆ – ನನಗೆ ಅನಿಸುತ್ತಿದೆ. ನಿಮಗೆ ಪಾರಾಗಲು ದಾರಿಯಿಲ್ಲವೆಂದು........ಆಗಲಿ ನೋಡೋಣ".

ಮತ್ತೆ ಅನಂತ್ ಸಿಕ್ಕಿದಾಗ ತಾವು ತಮ್ಮ ತಂಗಿಯೊಂದಿಗೆ ಈ ಪ್ರಸ್ತಾಪ ಮಾಡಿದುದಾಗಿಯೂ, ಅವಳು ಆಕೆಯನ್ನು ಕಂಡಿಲ್ಲವೆಂದೂ, ಆಕೆಯ ಪರಿಚಯ ತನಗಿಲ್ಲವೆಂದೂ ಹೇಳಿದುದಾಗಿ ತಿಳಿಸಿದರು. 'ಬಹುಶಃ ಅವರಿಬ್ಬರನ್ನು ಒಟ್ಟಿಗೆ ಕಂಡದ್ದು ಆಕಸ್ಮಿಕವಾಗಿ' ಎಂದುಕೊಂಡು ಸುಮ್ಮನಾದೆ.

ಇತ್ತ ಗೆಳೆಯರ ಶೋಧನೆ ನಡೆದೇ ಇತ್ತು. ನಾನು ಅವರಿಗೆ ಒಳ್ಳೆಯ ಕೆಲಸ ಅಂಟಿಸಿಬಿಟ್ಟದ್ದೆ. ಮೂವರು ಗೆಳೆಯರು ಕಾಲೇಜಿನಲ್ಲಿ ಯಾರನ್ನೋ ಕಂಡು, 'ಅವರೇ ಇರಬೇಕು' ಎಂದು ನಿಶ್ಚಯಿಸಿ ಸಾಯಂಕಾಲದ ಸಂಚಾರದಲ್ಲಿ ಈ ವಿಷಯ ಹೇಳುವುದು ನಾನು 'ಅಲ್ಲ' ಎಂದು ಒಂದು ಮಾತಿನಲ್ಲಿ ಅವರ ಉತ್ಸಾಹಭಂಗಮಾಡುವುದು. ಹೀಗೆಯೇ ನಡೆದಿತ್ತು.

ಒಂದು ದಿನ ಶ್ರೀಕಾಂತನ್ "ಏನು ಸಾರ್ ! ನಮಗೆ ಒಳ್ಳೆಯ ಕೆಲಸ ಹತ್ತಿಸಿಬಿಟ್ಟಿರಲ್ಲಾ ! ಪಾಠ ಕೇಳುತ್ತಾ ಕುಳಿತರೂ, ಕಿಟಕಿಯ ಬಳಿ ಯಾರು ಸುಳಿದರೂ ಅವರು ಯಾರೆಂದು ನೋಡಲು ಮನಸ್ಸಾಗುತ್ತೆ. ಪದೇಪದೇ ಹಾಗೆ ನೋಡುತ್ತಿದ್ದರೆ ಉಳಿದವರು ಏನು ತಿಳಿಯುವರೋ ಎನ್ನುವುದನ್ನೂ ಆಲೋಚಿಸದೆ – ನಮಗಾಗಿ ಅಲ್ಲದಿದ್ದರೂ – ನಿಮಗಾಗಿ ಈ ಕೆಲಸಮಾಡುತ್ತಿದ್ದೇವೆ" ಎಂದು ಪದ ಹಾಡಿದರು.

ಇದೇ ಹೊತ್ತಿಗೆ ಬಾನಾಡಿಯೂ ಬಾಯಿಹಾಕಿದರು. "ಇವತ್ತು

ಒಂದು ತಮಾಷೆ ನಡೆಯಿತು! ನಾನು ಕಾರಿಡಾರಿನಲ್ಲಿ ನಿಂತಿದ್ದಾಗ ನಿಮ್ಮ ವರ್ಣನೆಯ ಹೆಣ್ಣೊಂದು ಮೆಟ್ಟಲು ಹತ್ತಿಹೋಯಿತು. ಯಾರೆಂದು ಗುರುತು ಹಿಡಿಯುವ ಹೊತ್ತಿಗೆ ಅವಳು ಮೇಲಕ್ಕೆ ನಡೆದುಬಿಟ್ಟಿದ್ದಳು. ಉದ್ವೇಗವನ್ನು ತಡೆಯಲಾರದೆ ನಾನು ಅವಳ ಹಿಂದೆ ಮೆಟ್ಟಲು ಹತ್ತಿಬಿಟ್ಟೆ. ಇದೇ ಹೊತ್ತಿಗೆ ಮೇಲಿನಿಂದ ಮೂರು ನಾಲ್ಕು ಮಂದಿ ಬಜಾರಿಯರು 'ಪಟಪಟ'ನೆ ಶಬ್ದಮಾಡಿಕೊಂಡು ಇಳಿದು ಬಂದರು – ಯಾರೂ ಹತ್ತಿ ಬರುತ್ತಿಲ್ಲವೆಂದು ತಿಳಿದು. ಇನ್ನೇನು ನಾವು ಒಬ್ಬರನ್ನೊಬ್ಬರು ಡಿಕ್ಕಿ ಹೊಡೆಯಬೇಕು, ಒಬ್ಬರ ಮೇಲೊಬ್ಬರು ಬೀಳಬೇಕು ಎನ್ನುವುದರೊಳಗೆ, ನಾನು ಪಕ್ಕಕ್ಕೆ ಸರಿದು, ಅವರಿಗೆ ದಾರಿಮಾಡಿಕೊಟ್ಟೆ. ಆದರೂ ಅವರ ಸೀರೆಯ ಸೆರಗು ಮುಖಕ್ಕೆ ಬಡಿಯದೆ ಇರಲಿಲ್ಲ. ಅವರು ಇದು ಯಾವುದನ್ನೂ ಲೆಕ್ಕಿಸದೆ ನಡದೇಬಿಟ್ಟರು – ನನ್ನನ್ನು ಪದೇ ಪದೇ ನೋಡಿಕೊಂಡು ಗಹಗಹಿಸಿ ನಗುತ್ತಾ. ಅಂತೂ ನಿಮ್ಮ ದೆಸೆಯಿಂದ ಒಳ್ಳೆಯ ಗ್ರಹಚಾರ ಬಂತು!" ಎಂದು ನಡೆದ ಕಥೆಯನ್ನು ಬಣ್ಣಿಸಿದರು.

ಶ್ರೀಧರ್ ಮಾತ್ರ "ನನಗೆ ಇಂಥಾವಳೇ ಎಂದು ಗೊತ್ತಾಗಿದೆ. ಆದರೆ ಕೊಂಚ ಅನುಮಾನ. ಒಂದೆರಡು ದಿನಗಳಲ್ಲಿ ಅದನ್ನು ನಿವಾರಿಸಿಕೊಂಡು ಆ ಬಗ್ಗೆ ಖಚಿತವಾಗಿ ಹೇಳಿಬಿಡುತ್ತೇನೆ" ಎಂದರು ಗಂಭೀರವಾಗಿ.

"ಶ್ರೀಧರ್ ಮನಸ್ಸುಮಾಡಿದರೆ ಎಲ್ಲರಿಗೂ ಮೊದಲು ಗುಟ್ಟು ರಟ್ಟು ಮಾಡಬಲ್ಲರು" ಎಂದೆ.

ನಾವು 'ರಾಮಚಂದ್ರ ವಿಲಾಸ'ಕ್ಕೆ ನುಗ್ಗಿ ನನ್ನ ಪ್ರೀತಿಯ 'ವಾಂಗಾಯ್ ದೋಸೆ' ತಿಂದು, ದೇವರಾಜಾ ಮಾರ್ಕೆಟ್ಟಿನ ಕಡೆ ಬರುತ್ತಿರುವಾಗ 'ಆಕೆ'ಯೂ, ಆಕೆಯ ಮನೆಯವರೂ – ಮೂರು ನಾಲ್ಕು ಮಂದಿ ಹೆಂಗಸರು – ಮಾರ್ಕೆಟ್ಟು ಚೌಕದ ಬಳಿ ಸಿಕ್ಕಿದರು.

ಆಕೆಯನ್ನು ಗೆಳೆಯರೆಲ್ಲಾ ನೋಡಿದರು. ಆದರೆ ಆಕೆಯೇ ನನ್ನನ್ನು ಮಂತ್ರಿಸಿಬಿಟ್ಟಿರುವ ಮಾಟಗಾತಿಯೆಂದು ಅವರಲ್ಲಾರಿಗೂ ತಿಳಿಯದು. ಆಕೆಯನ್ನು ನೋಡಿದೊಡನೆಯೇ ಬಾನಾಡಿ ಹಿಂದಿನ ಸಂಗತಿಯೊಂದನ್ನು ನೆನಪಿಗೆ ತಂದುಕೊಂಡು ಹೇಳಿದರು.

"ಆ ಹಸುರು ಸೀರೆಯುಟ್ಟು ಬರುತ್ತಿರುವ ಹುಡುಗಿಯನ್ನು ಎಲ್ಲೋ ನೋಡಿದಂತಿದೆಯಲ್ಲಾ !"

"ಹೊಂ, ಹೌದು, ಆಕೆಯನ್ನು ಎಲ್ಲೋ ಕಂಡಂತೆ ಅನಿಸುತ್ತಿದೆ" ಕೊಂಚ ಆಲೋಚಿಸಿ "ಈಕೆಯೇ ಕಣೋ ಅವತ್ತು ಕಣ್ಣಾಸ್ಪತ್ರೆಯಲ್ಲಿ ನಮಗೆ ಸಿಕ್ಕಿದ್ದಳಲ್ಲಾ ಅವಳು" ಎಂದರು ಶ್ರೀಕಾಂತನ್.

"ಹೌದು....ಹೌದು" ಎಂದರು ಬಾನಾಡಿ.

"ಆಕೆ ನಮ್ಮ ಕ್ಲಾಸ್‌ಮೇಟ್" ಎಂದು ನುಡಿದರು ಶ್ರೀಧರ್.

"ನೋಡಿದ್ಯಾ ಶ್ರೀಕಾಂತ್ ! ನನ್ನ ಮಾತು ನಿಜವೋ ಸುಳ್ಳೋ ! ಈಗಲಾದರೂ ಗೊತ್ತಾಯಿತೇ ?" ಎಂದು ಹೇಳುತ್ತಾ ಬಾನಾಡಿ ಶ್ರೀಧರನ ಕಡೆ ತಿರುಗಿ "ನೋಡಿ ಶ್ರೀಧರ್. ಅವತ್ತು ಈಕೆ ನಮ್ಮ ಕಾಲೇಜುಕಣೋ ಅಂತ ಇವನಿಗೆ ಹೇಳಿದೆ. ಇವನು ನನ್ನ ಮಾತನ್ನ ಒಪ್ಪಲಿಲ್ಲ. 'ಈಕೆ ನಮ್ಮ ಕಾಲೇಜು ಅಲ್ಲವೇ ಅಲ್ಲ. ನಮ್ಮ ಕಾಲೇಜಿನವಳಾಗಿದ್ದರೆ ನಾನು ಒಂದು ಸಲಾನಾದ್ರೂ ಈಕೆಯನ್ನು ನೋಡ್ತೆ ಇರ್ತಿದ್ನೆ' ಎಂದು ಇವನು ವಾದಿಸಿದ. ಈಗ ನೋಡಿ ಯಾರ ಮಾತು ನಿಜವಾಯಿತು !" ಎಂದು ಹೇಳಿದರು ಹೆಮ್ಮೆಯಿಂದ.

"ನೀವು ಹೇಳೋದು ನಿಜ. ಆಕೆ ನಮ್ಮ ಕ್ಲಾಸು" ಎಂದು ನಾನೂ ಅವರೊಂದಿಗೆ ಧ್ವನಿಗೂಡಿಸಿದೆ. ಮಾತಿಲ್ಲದೆ ಮೌನ ಧರಿಸಿದರೆ ಅಪಾಯ ಎಂದು ಬಗೆದು.

"ಈಕೆ ನಂ ಕಾಲೇಜೇ ಆಗ್ಲಿ....ಒಪ್ಪಿಗೋತೀನಿ. ಆದರೆ ಈಕೆಗೆ ಮದುವೆಯಾಗಿದೆಯೋ ಇಲ್ವೋ ಹೇಳಿ. ಶ್ರೀಧರ್ ! ಆಗಿದೆ ಅಂತ ನಾನಂದ್ರೆ ಆಗಿಲ್ಲಾ ಅಂತಾನೆ ಇವನು (ಬಾನಾಡಿಯ ಕಡೆ ಕೈ ತೋರಿಸಿ) ನೀವು ಹೇಳಿ. ಹೇಗೂ 'ಆಕೆ' ನಿಮ್ಮ ಕ್ಲಾಸೂಂತ ಹೇಳ್ತೀರಲ್ಲ" ಎಂದರು ಶ್ರೀಕಾಂತನ್.

"ಛೆ ! ಮದುವೆ ಆಗಿಲ್ಲ ಕಣೋ ಅಂತ ಅವತ್ತು ಅಷ್ಟು ಹೊತ್ತು ಹೇಳಿದ್ರೂ ಇನ್ನೂ ನಿಂಗೆ ಸಂಶಯನಾ...." ಎಂದರು ಬಾನಾಡಿ ಅಂದಿನ ಮಾತನ್ನು ನೆನಪಿಗೆ ತಂದುಕೊಂಡು.

"ಹಾಗಾದರೆ ಆಕೆ ಸಣ್ಣ ಮಗೂನ ಎತ್ತಿಕೊಂಡು ಬಂದಿದ್ದಳಲ್ಲಾ ?"

"ಯಾರದೋ ಮಗುವಿರಬಹುದು. ಕಣ್ಣಿಗೇನೋ ಆಗಿತ್ತು. ತೋರಿ ಸೋಕೆ ಕರೆತಂದಿದ್ದಳು, ಅಂತ ಕಾಣುತ್ತೆ."

"ಅಲ್ಲಪ್ಪಾ ಅದು ಆಕೆಯ ಮಗುವೇ ಇದ್ದಹಾಗಿತ್ತು....ಆ ಮಗು ಮುಖ ತಾಯಿಯ ಮುಖವನ್ನೇ ಹೋಲುತ್ತಿತ್ತು. ಅದೂ ಅಲ್ಲದೆ ಆ ಮಗೂಗೆ ಏನೂ ಖಾಯಿಲೆ ಇರಲಿಲ್ಲ."

ನನಗೆ ಅವರಿಬ್ಬರ ಮಾತು ಕೇಳಿ ಹೊಟ್ಟೆಯಲ್ಲಿ ತಳಮಳ. ಅದನ್ನು ತೋರಿಸುವಂತೆ ಇಲ್ಲ. ತೋರಿಸದಿರುವಂತೆಯೂ ಇಲ್ಲ.

"ಕಾಲೇಜು ಹುಡುಗಿಗೆ – ಮಕ್ಕಳು ಮರಿ ಅಂದ್ರೆ ಏನ್ರಿ?" ನಾನು ಸುಮ್ಮನಿರಲಾರದೆ ಪ್ರಶ್ನಿಸಿದೆ.

"ಯಾಕೆ ಆಗಿರಬಾರದು? ಮೊನ್ನೆ ಶ್ರೀಧರ್ ತೋರಿಸಿದ ಹುಡುಗಿ ಯನ್ನ ಮರೆತುಬಿಟ್ರಾ. ಆಕೆ ಪರೀಕ್ಷೆ ಪೇಪರ್ ತಗೊಂಬೋ ಹೊತ್ತಿಗೆ ಹಡೆದು ಕೂತಿರ್ತಾಳೆ. ಇದು ಗ್ಯಾರಂಟಿ. ಅನ್ಯಾಯವಾಗಿ ಒಂದು ವರ್ಷ ಕಳೆದುಕೊಂಡಳು."

"ಅಂತಹವರೂ ಕಾಲೇಜಿನಲ್ಲಿದ್ದಾರೆ. ಇಲ್ಲಾ ಅಂತಲ್ಲ ನಾನು ಹೇಳೋದು. ಆದ್ರೂ ಈ ಹುಡುಗಿಗೆ ಮದ್ವೆಯಾಗಿಲ್ಲ – ಅಂತ ನನಗೆ ಖಂಡಿತ ವಾಗಿ ಗೊತ್ತು." ಎಂದೆ.

'ನಿಮಗೆ ಹೇಗೆ ಗೊತ್ತು?' ಎಂದು ಅವರು ಕೇಳಿದ್ದರೆ ನನ್ನ ಬಣ್ಣ ಬಯಲಾಗುತ್ತಿತ್ತು. ಆದರೆ ಯಾರೂ ಹಾಗೆ ಕೇಳಲಿಲ್ಲ. ಶ್ರೀಧರ್ ಕೂಡ ನನ್ನ ಮಾತನ್ನು ಅನುಮೋದಿಸಿದರು. ಹೀಗಾಗಿ ಶ್ರೀಕಾಂತನ್ ವಿಧಿಯಿಲ್ಲದೆ ಒಪ್ಪಿಕೊಳ್ಳಬೇಕಾಯಿತು.

ಈ ಘಟನೆ ನಡೆದಮೇಲೆ ನಾನು ಗೆಳೆಯರಿಗೆ ಹೀಗೆಂದು ಹೇಳಿದೆ. "ನೀವು ಆಕೆಯನ್ನು ಕಂಡಿದ್ದೀರಿ. ಆಕೆಯ ವಿಷಯ ನಿಮಗೆ ನನಗಿಂತಲೂ ಚನ್ನಾಗಿ ಗೊತ್ತಿದೆ. ನೀವೇ ನನಗೆ ಒಂದೆರಡು ಸಂಗತಿಗಳನ್ನು ಸಂಗ್ರಹಿಸಿ ಕೊಟ್ಟಿದ್ದೀರಿ."

ಇದರಿಂದ ಅವರ ಮಾರ್ಗ ಸುಗಮವಾಗುವುದರ ಬದಲು ಮತ್ತೂ ತೊಡಕಿನದಾಯಿತು.

ಒಂದು ದಿನ ನಾನು – ಶ್ರೀಕಾಂತನ್ ಕಾಲೇಜು ಮುಂದಿನ 'ಪೋರ್ಟಿ

ಕೊ'ದ ಕಟ್ಟೆಯಮೇಲೆ ಹರಟುತ್ತಾ ಕುಳಿತಿದ್ದೆವು. ಅಂದು ಯಾವುದೋ ಹಬ್ಬದ ಪ್ರಯುಕ್ತ ಕಾಲೇಜಿಗೆ ಬೆಳಗಿನ ಕ್ಲಾಸು. ನಮಗೆ ಹತ್ತು ಗಂಟೆಯ ಮೇಲೆ ಒಂದು ತರಗತಿಯು ಇದ್ದುದರಿಂದ ಮಧ್ಯೆ ಸಿಕ್ಕ ವಿರಾಮದಲ್ಲಿ ಹಾಸ್ಟಲಿಗೆ ಹೋಗದೆ ಅಲ್ಲಿ ಹರಟುತ್ತಾ ಕುಳಿತಿದ್ದೆವು. ಆಗ ಕಾಲೇಜಿನ ಪಾಠ ತೀರಿಸಿಕೊಂಡು ಸುಮಾರು ಹತ್ತು–ಹನ್ನೆರಡು ಮಂದಿ ಹುಡುಗಿಯರು ಕಾಲೇಜಿನ ರಸ್ತೆಯಲ್ಲಿ ಮನೆಗೆ ಹೊರಟಿದ್ದರು. ಅವರನ್ನು ಕಂಡು ಶ್ರೀಕಾಂತನ್ ಹೇಳಿದರು. "ಇತ್ತ ಪಾರ್, ವಾರಾಂಗನೆಯರ್ ಪೋಗುತಿರ್ಪರ್"

ಕೆಲವು ದಿನಗಳ ಹಿಂದೆ ನಾವು ಗೆಳೆಯರೆಲ್ಲರೂ ಒಟ್ಟಾಗಿ ಹುಣಸೂರು ಕೃಷ್ಣಮೂರ್ತಿ ಅವರ 'ರಾಜಾ ಗೋಪಿಚಂದ್' ಎಂಬ ನಾಟಕಕ್ಕೆ ಹೋಗಿದ್ದೆವು. ನಾಟಕದಲ್ಲಿ ಕವಿಯ ಭೂಮಿಕೆಯನ್ನು ವಹಿಸಿದ್ದ ಪಾತ್ರಧಾರಿ ತುಂಬಾ ಚನ್ನಾಗಿ ಅಭಿನಯಿಸಿದ್ದ. ಅವನ ಅಭಿನಯ ಸಂಭಾಷಣೆಗಳಿಗೆ ನಾವು ಬೆರಗಾಗಿದ್ದೆವು. ಆ ನಾಟಕ ನೋಡಿದನಂತರ ಗೆಳೆಯರೆಲ್ಲರೂ ಕವಿಯನ್ನು ಅನುಕರಣೆಮಾಡಿ ಮಾತನಾಡುವವರೇ ಆದರು. ಎಲ್ಲಕ್ಕೂ ಪದ್ಯ! ಗೆಳೆಯ ಬಾನಾಡಿ ಸ್ನೇಹಿತರೊಬ್ಬರಿಗೆ ಪದ್ಯದಲ್ಲಿ ಕಾಗದ ಬರೆದು ಬೈಸಿಕೊಂಡರು. ಇಷ್ಟೊಂದು ಪ್ರಭಾವ ಬೀರಿತ್ತು – ನಮ್ಮ ಮೇಲೆ ಆ ನಾಟಕ.

ನನಗೆ ಆ ಗುಂಪನ್ನು 'ವಾರಾಂಗನೆಯರು' ಎಂದು ಶ್ರೀಕಾಂತನ್ ಕರೆದುದು ನನ್ನ ಮನಸ್ಸಿಗೆ ಸರಿಬರಲಿಲ್ಲ. ಆ ಹೊತ್ತಿನಲ್ಲಿ ಅವರ ಮಾತನ್ನು ಹಗುರವಾಗಿ ತೆಗೆದುಕೊಂಡಿದ್ದರೆ ಈ ವಿಷಯ ಬೆಳೆಯುತ್ತಿರಲಿಲ್ಲ. ಆದರೆ ನಾನು ಹಾಗೆಣಿಸುವ ಸ್ಥಿತಿಯಲ್ಲಿರಲಿಲ್ಲ. 'ವಾರಾಂಗನೆ' ಎಂದು ಬೇರೊಂದು ಗುಂಪನ್ನು ಉದ್ದೇಶಿಸಿ ಅವರು ಹೇಳಿದ್ದರೆ ನಾನು ಸುಮ್ಮನಿರುತ್ತಿದ್ದೆನೋ ಏನೊ! ಆದರೆ ಆ ಗುಂಪಿನಲ್ಲಿ ಆಕೆಯೂ ಇದ್ದಳು. ಆಕೆಯನ್ನು ಹಾಗೆ ಕರೆದುದರಿಂದ ನನಗೆ ಅಸಮಾಧಾನವಾಯಿತು.

"ನೀವು ಮಾತನಾಡುವಾಗ – ಪದಗಳನ್ನು ಯೋಚಿಸದೆ ಉಪಯೋಗಿಸಿಬಿಡುತ್ತೀರಿ. ಇದರಿಂದ ಕೆಲವು ವೇಳೆ ಎಷ್ಟು ಆಭಾಸವಾಗುತ್ತದೆ ಗೊತ್ತೆ?" ಎಂದೆ.

ನಾನು ಗಂಭೀರವಾಗಿ ಪ್ರಶ್ನಿಸಿದುದರಿಂದ ಶ್ರೀಕಾಂತನ್ ಧ್ವನಿ ಬದಲಾಯಿಸಿ ಹೇಳಿದರು.

"ಈಗ ನಾನೆಂದುದರಲ್ಲಿ ತಪ್ಪೇನು?........ ಇತ್ತಪಾರ್ ವಾರಾಂಗನೆಯರ್ ಪೋಗುತಿರ್ಪರ್—ಎಂದೆ"

"ಅಲ್ಲಿ ಹೋಗುತ್ತಿದ್ದವರೆಲ್ಲಾ ನಿಮಗೆ ವಾರಾಂಗನೆಯರಾಗಿಬಿಟ್ಟರೆ?" ಗೆಳೆಯ ತಬ್ಬಿಬ್ಬಾದ.

"ವಾರಾಂಗನೆಯರು ಅಂದರೇನು?"

"ನೀವೇ ಅರ್ಥ ಹೇಳಿ. ಕನ್ನಡವನ್ನು ಐಚ್ಛಿಕವಾಗಿ ಬೇರೆ ತೆಗೆದುಕೊಂಡಿದ್ದೀರಿ."

"ಹೆಂಗಸರು ಅಂತ."

"ನೀವು ತಪ್ಪು ತಿಳಿದಿದ್ದೀರಿ. ಇದಕ್ಕೂ ಹೆಚ್ಚಿನ ಅರ್ಥ 'ವಾರಾಂಗನೆ' ಎನ್ನುವ ಪದಕ್ಕಿದೆ. ನೀವು ಬಹುಶಃ 'ವಾರಿಜಾಕ್ಷಿ' ಎನ್ನುವ ಪದವನ್ನು 'ವಾರಾಂಗನೆ' ಎಂದು ತಪ್ಪು ತಿಳಿದಿರಬೇಕೆಂದು ತೋರುತ್ತೆ."

"ಹಾಗೆಂದರೂ ಒಂದೇ, ಹೀಗೆಂದರೂ ಒಂದೇ."

"ಎಂದಿಗೂ ಇಲ್ಲ. ಒಂದರ ಅರ್ಥ ಹೆಂಗಸೆಂದಾದರೆ, ಇನ್ನೊಂದರ ಅರ್ಥ 'ಸೂಳೆ' ಎಂದಾಗುತ್ತದೆ" ಎಂದೆ.

ಶ್ರೀಕಾಂತನ್ ತನ್ನ ಮೊಂಡು ಹಠ ಬಿಡಲಿಲ್ಲ. ಈ ವೇಳೆಗೆ ಬಾನಾಡಿ ಅಲ್ಲಿಗೆ ಬಂದರು. ನಮ್ಮ ವಾದವಿವಾದ ಕೇಳಿ ನಾನು ಹೇಳಿದ ಅರ್ಥ ಸರಿಯೆಂದು ನನ್ನ ಮಾತನ್ನು ಅನುಮೋದಿಸಿದರು.

"ನಾನು ಇನ್ನೂ ವಿಚಾರಿಸುತ್ತೇನೆ" ಎಂದು ಸಣ್ಣಮೋರೆ ಮಾಡಿಕೊಂಡರು, ಶ್ರೀಕಾಂತನ್.

ತರಗತಿಗೆ ಹೋಗುತ್ತಾ ಬಾನಾಡಿ ಪ್ರಶ್ನಿಸಿದರು "ಅವನು ಆ ಹುಡುಗಿಯರನ್ನು ಹಾಗೆ ಅಂದುದರಿಂದ ನಿಮಗೇಕೆ ನೋವು."

"ಆ ಗುಂಪಿನಲ್ಲಿ ಆಕೆಯೂ ಇದ್ದಳು!" ಎಂದೆ.

"ಅರರೆ! ಈ ಮಾತು ಮೊದಲೇ ಹೇಳಿದ್ರೆ, ನಾನು ಅವರನ್ನು ಹಿಂಬಾಲಿಸಿ ಹೋಗಿ 'ಆ ನಿಮ್ಮ ಹುಡುಗಿ ಯಾರೂಂತ' ಪತ್ತೆಮಾಡುತ್ತಿದ್ದನಲ್ಲರಿ? ಎಲ್ಲಾ ಹೊರಟುಹೋದಮೇಲೆ ಬಾಯಿಬಿಡುತ್ತೀರಲ್ಲಾ....!" ಎಂದು ಕೈ ಕೈ ಹಿಸುಕಿಕೊಂಡರು.

ನಾನು ಸಂಜೆ ಯೂನಿವರ್ಸಿಟಿ ಲೈಬ್ರರಿಗೆ ಹೋಗಿ 'ಕಿಟ್ಟೆಲ್' ಅರ್ಥ

ಕೋಶವನ್ನು ನೋಡಿದೆ. ಅದರಲ್ಲಿ 'ವಾರಾಂಗನೆ' ಎನ್ನುವ ಪದಕ್ಕೆ 'ಅರಮನೆಯ ದಾಸಿ, ಗುಡಿಸೆಟ್ಟಿ' ಎನ್ನುವ ಅರ್ಥವಿತ್ತು. ಈ ವಿಷಯ ಶ್ರೀಕಾಂತನ್‌ಗೆ ಹೇಳಿದೆ. 'ನಾನು ಹೇಳಿದುದು ತಪ್ಪಾಯಿತು' ಎಂದು ಅವರು ಒಪ್ಪಿಕೊಂಡರು. ಆಗ ಬಾನಾಡಿ "ಕಾಲೇಜು ಹುಡುಗಿಯರನ್ನು ಈ ಹೆಸರುಗಳಿಂದ ಕರೆಯುವುದು ಬೇಡ. ಅವರನ್ನು ಇನ್ನು ಮೇಲೆ 'ಸುವಾಸಿನಿಯರು' ಎಂದು ಕರೆಯೋಣ. ಆಗ ಅಪಾರ್ಥಕ್ಕೆ ಎಡೆಯಿರುವುದಿಲ್ಲ" ಎಂದರು.

"ಹಾಗಾದರೆ ಸುವಾಸಿನಿಯರ ಸಮ್ಮೇಳನಕ್ಕೆ ಹೊರಡುವವರು ಯಾರು ಯಾರು ?" ಎನ್ನುತ್ತಾ ಶ್ರೀಧರ್ ಕಲಾಮಂದಿರವನ್ನು ಪ್ರವೇಶಿಸಿದರು. ಹೊರಗಿನಿಂದಲೇ ಅವರು ನಮ್ಮ ಮಾತು ಕೇಳಿಸಿಕೊಂಡಿದ್ದರು. ಇಂದು "ವನಿತಾ ಸಂಘದವರು" ಕಾಲೇಜಿನಲ್ಲಿ ಕಾರ್ಯಕ್ರಮವೊಂದನ್ನು ಏರ್ಪಡಿಸಿದ್ದರು. ಈ ವಿಷಯವಾಗಿಯೇ ಆತ ಹಾಗೆಂದುದು.

ನಾವು ಯಾರೂ ಹೋಗುವುದಿಲ್ಲವೆಂದು ತಲೆಯಲ್ಲಾಡಿಸಿದೆವು.

ಏಳೆಂಟು ದಿನ ಕಳೆದರೂ ಗೆಳೆಯರಿಂದ 'ಆಕೆ' ಯಾರು ಎಂಬುದನ್ನು ಪತ್ತೆ ಹಚ್ಚಲಾಗಲಿಲ್ಲ. ಈ ಮಧ್ಯೆ ನಾವು ನಾಲ್ವರು ಮಿತ್ರರು 'ಷಹಜಾನ್' ಚಿತ್ರಪಟಕ್ಕೆ ಹೋಗಿದ್ದೆವು. ಅದರಲ್ಲಿ 'ಸುಲೋಚನ ಚಟರ್ಜಿ' ಎನ್ನುವ ನಟಿ ಅಭಿನಯಿಸಿದ್ದಳು. ಅವಳ ದೂರದೊಂದು ಭಾವಭಂಗಿ ನನಗೆ ಆಕೆಯ ನೆನಪು ತರುತ್ತಿತ್ತು. 'ಲಾಂಗ್ ಷಾಟ್'ಗಳಲ್ಲಿ ಅವಳು ನೋಡುವುದಕ್ಕೂ 'ಆಕೆ'ಯನ್ನು ಹೋಲುತ್ತಿದ್ದಳು. ಚಿತ್ರಮುಗಿದನಂತರ ಗೆಳೆಯರಿಗೆಂದೆ "ಕಾಲೇಜಿನಲ್ಲಿ ಸುಲೋಚನ ಚಟರ್ಜಿಯಂತೆ ಇರುವ ಹುಡುಗಿ ಯಾರೆಂದು ಪತ್ತೆ ಮಾಡಿಬಿಟ್ಟರೆ–ನನ್ನ 'ಆ ಹುಡುಗಿ' ಯಾರೆಂದು ನಿಮಗೆ ತಿಳಿದು ಹೋಗುತ್ತೆ."

ಆದರೆ ಇಷ್ಟೆಲ್ಲಾ ಹೇಳಿದರೂ ಅವರಿಂದ ಪತ್ತೆಮಾಡಲಾಗಲಿಲ್ಲ. ಅಂದಿನ ಆ ಘಟನೆ ನಡೆಯದಿದ್ದರೆ, ಆಕೆ ಯಾರೆನ್ನುವ ವಿಷಯ ಇನ್ನೂ ಗೋಪ್ಯವಾಗಿಯೇ ಉಳಿಯುತ್ತಿತ್ತು. ಆದರೆ ವಿಧಿ ಬೇಕಂತಲೇ ಅಂದು ಬಯಲುಮಾಡಿದ.

ಅಂದು ಸಂಕ್ರಾಂತಿ ಹಬ್ಬ. ಹಾಸ್ಟಲಿನಲ್ಲೂ ಹಬ್ಬದೂಟ. ಬಾನಾಡಿಯ

ಅತ್ತೆಯವರು ಅಳಿಯನಿಗೆ ಯಾರ ಕೈಲೋ 'ಎಳ್ಳು' ಕಳುಹಿಸಿಕೊಟ್ಟಿದ್ದರು. ಶ್ರೀಧರ್ ಕೂಡ ತನ್ನ ಮನೆಯಿಂದ 'ಎಳ್ಳನ್ನು' ತಂದುಕೊಟ್ಟರು. ನಾವು ಹಾಸ್ಟಲಿನಲ್ಲಿ ಇದ್ದುಕೊಂಡೇ ಭರ್ಜರಿ 'ಸಂಕ್ರಾಂತಿ ಹಬ್ಬ' ಮಾಡಿದ್ದೆವು.

ಅಂದು ಸಂಜೆ ಹಬ್ಬದ ಊಟ ಅರಗಿಸಲು ನಾಲ್ವರೂ ಸಂಚಾರ ಹೊರಟೆವು. ಸಾಮಾನ್ಯವಾಗಿ ನಾವು ನೂರಡಿ ರಸ್ತೆಯಲ್ಲಿ ಹೊರಟು, ರಾಯರ ಮಠದ ಮುಂದಿನ ರಸ್ತೆಯಲ್ಲಿ ಹಾದು, ಜಗನ್ಮೋಹನ ಬಂಗಲೆಯ ರಸ್ತೆಯಲ್ಲಿ ತಿರುಗಿ, ಅರಮನೆಯ ಉತ್ತರ ದ್ವಾರದ ಬಳಿಯ ಚೌಕಕ್ಕೆ ಬರುವೆವು. ಅಲ್ಲಿಂದಾಚೆಗೆ ನಿಷಾದ್‌ಬಾಗ್, ಕಾರಂಜಿಕೆರೆ, ತಂಡೀ ಸಾದಕ್, ರೈಲ್ವೇ ಸ್ಟೇಷನ್, ಆಕಾಶವಾಣಿ, ಇವುಗಳಲ್ಲಿ ಯಾವುದು ಮನಸ್ಸಿಗೆ ಬಂದರೆ ಅತ್ತ ಹೆಜ್ಜೆ ಹಾಕುವೆವು.

ಅಂದು ರಾಯರ ಮಠದಬಳಿಗೆ ಬಂದಾಗ ನನಗೆ ಪೂರ್ವ ಸ್ಮರಣೆ ಯುಂಟಾಗಿ ಗೆಳೆಯರಿಗೆ ಹೇಳಿದೆ.

"ಪ್ರಿಯವ್ಯಕ್ತಿಗಳ ನೆನಪಿನೊಂದಿಗೆ ಬೆರೆತ ಸ್ಥಳಗಳೂ ವ್ಯಕ್ತಿಗಳಷ್ಟೇ ಪ್ರಿಯವಾಗುತ್ತವೆ."

"ಹೂಂ, ಹೌದು. ಕಣ್ವಾಶ್ರಮ ಶಾಕುಂತಲೆಯ ನೆನಪಿನಿಂದ (ಕಾವ್ಯವನ್ನು ಓದುವ ನಮಗೂ) ಪ್ರಿಯವಾಗುವಂತೆ!" ಎಂದರು ಶ್ರೀಕಾಂತನ್.

"ನಿಮ್ಮ ಕಣ್ವಾಶ್ರಮ?" ಬಾನಾಡಿ ನನ್ನ ಕಡೆ ನೋಡುತ್ತಾ ಸಂಜ್ಞೆಮಾಡಿ ಪ್ರಶ್ನಿಸಿದರು.

"ಬಹುಶಃ ರಾಯರ ಗುಡಿಯ ಸುತ್ತಮುತ್ತಲು ಎಲ್ಲೊ ಅಡಗಿದೆ."

"ಚಂದ್ರಾಪೀಡ ಮಹಾಶ್ವೇತೆಯನ್ನು ಕಂಡ ಶಿವಮಂದಿರವಿದ್ದ ಹಾಗೆ ಈ ರಾಯರ ಗುಡಿ ಮೂರ್ತಿಗೆ ಅಲ್ಲವೇ?" —ಶ್ರೀಕಾಂತನ್ ಶಾಕುಂತಲಾ ಕಾವ್ಯದಿಂದ ಕಾದಂಬರಿಗೆ ಹಾರಿದರು.

"ಹೂಂ, ಆ ಚಿರಸ್ಮರಣೀಯ ದರ್ಶನ ಇಲ್ಲೇ ನನಗಾದುದು" ಎಂದೆ ನಾನು.

ನಮ್ಮ ಮಾತು ಹೀಗೆಯೇ ಸಾಗಿತ್ತು. ಶಾಕುಂತಲಾ, ಕಾದಂಬರಿಗಳ ಉದ್ಯಾನವನದಲ್ಲಿ ವಿಹರಿಸುತ್ತಾ ಎಚ್ಚರವಿಲ್ಲದೆ ಹೆಜ್ಜೆಇಡುತ್ತಿದ್ದೆವು. ನಾನು

ತಟಕ್ಕನೆ ಕಣ್ಣು ಬಿಟ್ಟು ನೋಡಿದೆ. ಎದುರಿಗೆ ನನ್ನ ಮಹಾಶ್ವೇತೆ-ಅಲ್ಲಾ-ಶಾಕುಂತಲೆ ತನ್ನ ಪ್ರಿಯಂವದೆ ಅನುಸೂಯೆಯೊಡಗೂಡಿ, ಹಬ್ಬದ ಉಡುಗೆಯಲ್ಲಿ ಬರುತ್ತಿದ್ದುದು ಕಣ್ಣಿಗೆ ಬಿತ್ತು. 'ಆಕೆ' ತನ್ನ ಸ್ನೇಹಿತರ ಮನೆಗೆ 'ಅರಿಸಿನ ಕುಂಕುಮಕ್ಕೊ, ಎಳ್ಳು ಬೀರಲೊ' ಹೋಗುತ್ತಿದ್ದಳು. ಮನಸ್ಸಿನಲ್ಲಿದ್ದವಳು ಈಗ ನನಸಿನಲ್ಲಿ ಕಂಡಳು. ಕೇವಲ ಹತ್ತು ಮಾರು ದೂರದಲ್ಲಿ! ನಾನು ಆಕೆಯನ್ನು ಒಮ್ಮೆ ಹಾಗೆ ನೋಡಿದೆ. ಅದೇ ಹೊತ್ತಿಗೆ ಆಕೆಯೂ ನನ್ನನ್ನು ನೋಡಿದಳು. ನಾಲ್ಕು ಕಣ್ಣುಗಳು ಕೂಡಿದವು. ಇಬ್ಬರ ತುಟಿಗಳ ಮೇಲೆ ಮುಗುಳುನಗೆ ಮಿಂಚಿನಾಯವಾಯಿತು. ಇಬ್ಬರ ಮುಖಕ್ಕೂ ರಕ್ತ ನುಗ್ಗಿ ಬಂತು. ಮುಖಕ್ಕೆಲ್ಲಾ ಓಕಳಿ ಚೆಲ್ಲಿದಂತಾಗಿ ನಾಚಿಕೆಯಿಂದ ಕೆಂಪಾಯಿತು. ಇಬ್ಬರೂ ಏಕಕಾಲದಲ್ಲಿ ತಲೆತಗ್ಗಿಸಿಬಿಟ್ಟೆವು! ಇದೆಲ್ಲಾ ಕ್ಷಣಮಾತ್ರದಲ್ಲಿ ನಡೆದುಹೋಯಿತು. ಇನ್ನೊಂದು ನಿಮಿಷದಲ್ಲಿ ಅವರು ನಮ್ಮನ್ನು ಹಿಂದುಳಿಸಿ ಮುಂದೆ ನಡೆದಿದ್ದರು.

ಗೆಳೆಯರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಆಕೆಯನ್ನು ದೂರದಲ್ಲಿ ಕಂಡೊಡನೆ ನನಗೆ ಜಂಘಾಬಲವೇ ಉಡುಗಿ ಹೋದಂತಾಗಿತ್ತು. ಆಡುತ್ತಿದ್ದ ಮಾತು ಹಠಾತ್ತಾಗಿ ನಿಂತುಹೋಗಿತ್ತು. ಸ್ನೇಹಿತರು ಹೇಳುವ ಮಾತೊಂದೂ ಕಿವಿಗೆ ಬೀಳಲೇ ಇಲ್ಲ. ನಾನು 'ಹೂಂ' ಎಂದು ಗೆಳೆಯರ ಪ್ರಶ್ನೆಗಳಿಗೆ ಉತ್ತರ ಹೇಳುತ್ತಾ ಎಲ್ಲೋ ನೋಡುತ್ತಿದ್ದೆ. 'ಆಕೆ' ತೀರ ಸಮೀಪಕ್ಕೆ ಬಂದಾಗ ನನ್ನ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಗಿ ಕೂಗಿಕೊಳ್ಳುವಂತಾಗಿತ್ತು; ಮುಗ್ಗರಿಸಿ ಬೀಳುವಂತಾಗಿತ್ತು. ಆದರೆ ಕೂಗಿಕೊಳ್ಳಲಿಲ್ಲ; ಎಚ್ಚರ ತಪ್ಪಿ ಬೀಳಲಿಲ್ಲ. ಆದರೂ ಪಕ್ಕದಲ್ಲಿದ್ದ ಗೆಳೆಯರ ಕಡೆ ವಾಲಿದ್ದೆ.

ಮತ್ತೆ ಮೊದಲಿನಂತಾಗಲು ಎಷ್ಟೋ ಕಾಲ ಬೇಕಾಯಿತು. ಶ್ರೀಧರ್ ಕಡೆಯಲ್ಲಿ ಬರುತ್ತಿದ್ದವರು, ನನ್ನ ಮುಖದಲ್ಲಾದ ಮಾರ್ಪಾಡನ್ನೂ, ನನ್ನ ವರ್ತನೆಯನ್ನೂ ಸೂಕ್ಷ್ಮವಾಗಿ ಅವಲೋಕಿಸಿದ್ದರು. ಆ ಹುಡುಗಿ ಕಣ್ಮರೆಯಾದ ನಂತರ "ನಿಮ್ಮ ಗುಟ್ಟು ರಟ್ಟಾಯಿತು!" ಎಂದರು, ನಾನು ಮಾತನಾಡಲಿಲ್ಲ. ಶ್ರೀಧರ್ ಅಲ್ಲೇ ಬಾಯಿಬಿಡಲಿಲ್ಲ. ಉಳಿದ ಗೆಳೆಯರನ್ನು ಹತ್ತಿರ ಕರೆದು ಅವರ ಕಿವಿಗಳಲ್ಲಿ ತನ್ನ ಶೋಧನೆಯನ್ನು ಉಸರಿದರು.

ಎಲ್ಲರ ಮುಖ ಅರಳಿದುವು. "ಹೂಂ....ಹೌದು....ಹೌದು !" ಎಂದು ಗೋಣಗುಟ್ಟಿಕೊಂಡರು.

ಕಳ್ಳತನ ಮಾಡಿ ಸಿಕ್ಕಿಹಾಕಿಕೊಂಡ ಕಳ್ಳನ ಸ್ಥಿತಿಯ ಹಾಗಿತ್ತು ನನ್ನ ಸ್ಥಿತಿ.

ರಾತ್ರಿಯ ಊಟವಾದಮೇಲೆ ಎಂದಿನಂತೆ, ಕಾಲೇಜು ಹಿಂದಣ - ಹಾವಿನಂತೆ ಬಳಸಿದ್ದ - ರಸ್ತೆಯಲ್ಲಿ, ನಾನೂ - ಬಾನಾಡಿ, ಸಂಚಾರ ಹೊರಟೆವು. ಹೋಗುತ್ತಾ ಹೋಗುತ್ತಾ ಬಾನಾಡಿ ಮಾತು ತೆಗೆದರು. "ಕಾಲೇಜಿನಲ್ಲಿರುವ ನಿಮ್ಮ ತಾರಿಣಿಯನ್ನು ಪತ್ತೆ ಹಚ್ಚಿಬಿಟ್ಟೆವು." ಎಂದರು.

"ಒಳ್ಳೆಯದು...." ಎಂದೆ ನಾನು.

"ಆಕೆಯನ್ನು ನಾನು ಅನೇಕ ಬಾರಿ ಕಂಡಿದ್ದೇನೆ. ಆಕೆಯೇ ಇರಬೇಕೆನ್ನುವ ಅನುಮಾನ ಕೂಡ ಬಂದಿತ್ತು. ಆದರೆ ನೀವು ಸರಿಯಾದ ವಿವರಣೆ ಕೊಡದೆ ದಾರಿ ತಪ್ಪಿಸಿದ್ದಿರಿ....ಕಡೆಗೂ ಪತ್ತೆ ಹಿಡಿದುಬಿಟ್ಟೆವು."

"'ಆಕೆ' ಯಾರು ಹೇಳಿ ನೋಡೋಣ."

"'ಆಕೆ' ಯಾರೂ ಅಲ್ಲ. 'ಶ್ರೀಮತಿ'-ನಾವು ಆಸ್ಪತ್ರೆಯಲ್ಲಿ ಕಂಡ ಹುಡುಗಿ."

ಅಂತೂ ಗೆಳೆಯರು ಪತ್ತೆಮಾಡಿಯೇ ಬಿಟ್ಟರು !

"ಇಂದು ಆಕೆಯನ್ನು ನೋಡಿದಾಗ ನಿಮ್ಮಲ್ಲಾದ ಮಾರ್ಪಾಟಿನಿಂದ ಕಂಡುಕೊಂಡೆವು...."

"ಹೌದು, ಇಂದು ನಾನಾಗಿ ನಾನೇ ನನ್ನ ಗುಟ್ಟನ್ನು ಬಯಲು ಮಾಡಿಕೊಂಡೆ. ಆಕೆಯನ್ನು ಆಕಸ್ಮಿಕವಾಗಿ ನೋಡುವೆನೆಂದು ನಾನು ತಿಳಿದಿರಲಿಲ್ಲ. ಯಾವಾಕೆಯನ್ನು ಮನಸ್ಸಿನಲ್ಲಿ ನೆನೆಯುತ್ತಿದ್ದೆನೋ ಆಕೆಯೇ ಕಣ್ಣೆದುರಿಗೆ ಪ್ರತ್ಯಕ್ಷಳಾದರೆ! ನನಗೆ ಕ್ಷಣಕಾಲ ಕಸಿವಿಸಿಯಾಯಿತು. ಆ ಹೊತ್ತಿನಲ್ಲಿ ನನ್ನ ಮುಖಭಾವವನ್ನು ನನ್ನ ಹತೋಟಿಯಲ್ಲಿರಿಸಲು ಸಾಧ್ಯವಾಗದೆ ಹೋಯಿತು."

"ಇಂದಿನ ಆ ಘಟನೆ ಒದಗಿ ಬರದಿದ್ದರೂ - ಬೇರೊಂದು ಬಗೆಯಲ್ಲಿ ನಿಮ್ಮಿಂದಲೇ ಈ ವಿಷಯ ಹೊರಡಿಸುವ ಹಂಚಿಕೆ ಮಾಡಿದ್ದೆವು. ಆಕೆಯನ್ನು ಹೆಸರಿಸಿ, ಬಾಯಿಗೆ ಬಂದಂತೆ ದೂಷಿಸಿ, ನಿಮ್ಮ ಮನಸ್ಸಿಗೆ ನೋವುಂಟಾಗು

ವಂತೆ ಮಾಡಿದ್ದರೆ....ನೀವು ಸ್ವಾಭಾವಿಕವಾಗಿ ಆಕೆಯ ಪರ ವಾದಿಸುತ್ತಿದ್ದಿರಿ. ಆಗಲಾದರೂ ನಿಮ್ಮ ಗುಟ್ಟು ಬಯಲಾಗುತ್ತಿತ್ತು...."

"ಅದೂ ನಿಜವೇ ಅನ್ನಿ...." ಎಂದು ಒಪ್ಪಿಕೊಂಡೆ.

ಈ ವೇಳೆಗೆ ಹಾಸ್ಟಲಿಗೆ ಹಿಂತಿರುಗಿ ಬಂದೆವು. ನಾವು ಬರುವುದನ್ನು ಕಾಯುತ್ತಿದ್ದ ಶ್ರೀಕಾಂತನ್ ನನ್ನನ್ನು ಕಂಡೊಡನೆಯೇ,

"ನನಗೂ ಗೊತ್ತಾಯಿತು ಸಾರ್ – 'ಆಕೆ' ಯಾರು ಅಂತ. ಆಕೆಯ ಹೆಸರು ಏನು ಗೊತ್ತೆ....ನನ್ನ ಭಾವಿ ನಲ್ಲೆಯ ಹೆಸರು ಶ್ರೀಮತಿ–ಅಂತ" ಎಂದರು ನಗುನಗುತ್ತಾ.

"ಈ ಹೆಸರು ನಮ್ಮಿಬ್ಬರಿಗೂ 'ಕಾಮನ್ ನೇಮ್'. ಈ ಹೆಸರು ಎತ್ತಿದೊಡನೆಯೇ ನಿಮಗೆ ಕನ್ಫ್ಯೂಸ್–(ಕಸಿವಿಸಿ) ಆಗುತ್ತದೆ. ನಮ್ಮ ಸಂಭಾಷಣೆಗಳಲ್ಲಿ ಆಕೆಯ ಹೆಸರನ್ನು ತಂದರೆ ನೋಡಿದವರು ತಪ್ಪುತಿಳಿಯುವ ಅವಕಾಶವಿದೆ. ಆದುದರಿಂದ ಆಕೆಗೆ ನಾವು ಯಾವುದಾದರೂ ಹೊಸ ಹೆಸರನ್ನು ಇಡೋಣ" ಎಂದೆ.

"ಆಗಬಹುದು" ಎಂದರು ಉಳಿದ ಗೆಳೆಯರು. ಆಕೆಗೆ ಯಾವ ಹೆಸರಿಟ್ಟರೆ ಚನ್ನ! ಎಂದು ಆಲೋಚಿಸುತ್ತಾ ಇರುವಾಗ್ಯೆ ಶ್ರೀಕಾಂತನ್ ಪುಸಕ್ಕನೆ "ಅಪ್ರೊಡೈಟ – ಅಂತ ಕರೆಯೋಣ" ಎಂದರು. ಅವರು ಆಗ ತಾನೇ ಪಠ್ಯಪುಸ್ತಕದ ಶೆಲ್ಲಿ ಕವಿಯ ಅಡೊನೀಸ್ ಕವನ ಓದಿದ್ದರೆಂದು ತೋರುತ್ತೆ.

"ಅಪ್ರೊಡೈಟ! ಹೆಸರು ಚೆನ್ನಾಗಿದೆ. ಆಕೆಗೆ ಒಪ್ಪುವ ಹೆಸರು. ಅಪ್ರೊಡೈಟ ಸೌಂದರ್ಯ ಹಾಗೂ ಜ್ಞಾನಕ್ಕೆ ಮಾತೃಕೆಯಾದ ಗ್ರೀಕ್ ದೇವತೆ! ಇವಳೋ? ಬೇರಾರಿಗಿಲ್ಲದಿದ್ದರೂ ನನ್ನ ಭಾಗಕ್ಕೆ ಅಪ್ರೊಡೈಟಯೇ ಸರಿ." ಎಂದೇ ನಗುತ್ತಾ. "ಆದರೆ ಒಂದು ಮಾತು. ನನ್ನ ಆಕೆಯ ಸಂಬಂಧದ ಕಥೆ ನಮ್ಮ ನಮ್ಮಲ್ಲೇ ಉಳಿಯಬೇಕು. ಬೇರಾರಿಗಾದರೂ ಹೇಳಿದರೆ ನನ್ನಾಣೆ ಇದೆ."

ಗೆಳೆಯರು ಈ ವಿಷಯವನ್ನು ತಮ್ಮಲ್ಲೇ ಉಳಿಸಿಕೊಳ್ಳುವುದಾಗಿ ಭಾಷೆ ಕೊಟ್ಟರು.

"ನನ್ನಲ್ಲಿ ನಿಮಗೆ ನಿಜವಾದ ಆಸಕ್ತಿ, ಅಭಿಮಾನ ಇದೆಯೋ ಇಲ್ಲವೋ

ಎಂದು ಪರೀಕ್ಷಿಸಲು ನಾನು ಹೆಸರು ಹೇಳಲು ಸತಾಯಿಸಿದೆ. ನಿಮ್ಮ ನಿಜವಾದ ಯೋಗ್ಯತೆ ಈಗ ನನಗೆ ಗೊತ್ತಾಯಿತು. ನಿಮ್ಮಂತಹ ಗೆಳೆಯರು ನನಗೆ ಸಿಕ್ಕಿದುದು ನನ್ನ ಪುಣ್ಯವೆಂದೇ ಭಾವಿಸುತ್ತೇನೆ."

ಆ ರಾತ್ರಿ ನನಗೆ ಕಣ್ತುಂಬಾ ನಿದ್ದೆ. ಗೆಳೆಯರ ಬೆಂಬಲದಿಂದ ನನ್ನೆಲ್ಲಾ ಆಸೆ ಕೈಗೂಡಿದಂತೆ ಕನಸು. ಆದರೆ ಕನಸು ನನಸಾದರೆ ?



# ಸಂದರ್ಶನ

ಗೆಳೆಯ ಶ್ರೀಧರ್ ಕಾಲೇಜಿನಲ್ಲಿ ಕಂಡ ವಿಷಯ ಜೀವನ ಚಿತ್ರವನ್ನು ತನ್ನೊಬ್ಬ ಸ್ನೇಹಿತನಿಗೆ ಕೊಡುತ್ತಾ ಒಂದು ಪತ್ರದಲ್ಲಿ ಹೀಗೆ ಬರೆದಿದ್ದರು:

"ನಮ್ಮ ಕಾಲೇಜು 'ನಾರೀಮಯಮಪ್ಪಲೋಕ'........ವಿಧವೆಯರು ಮದುವೆಯಾದವರು, ಆಗದವರು, ಕಿಲಾಡಿಗಳು, ಹಸುಗೂಸಿನಂಥವರು, ಬಣ್ಣದ ಬೊಂಬೆಗಳೂ, ಬಾಯಿಬಡುಕರೂ, ಪ್ರೇಮಜಾಲದಲ್ಲಿ ಸಿಕ್ಕಿ ನರಳಾಡುವವರೂ, ಅದರಿಂದ ವಿಮೋಚನೆ ಹೊಂದಿದವರೂ, ಆಶೆಯ ಅಂಕುರದಿಂದ ಕೂಡಿದವರೂ, ನಿರಾಶೆಯಲ್ಲಿ ಮುಳುಗಿದವರೂ – ಹೀಗೆ ನಾನಾವಿಧ. ಗಂಡಸರಲ್ಲೂ ಇದೇ ತರಹ ಇನ್ನೊಂದು ಗುಂಪು. ಹೀಗೆ ಇತ್ತಂಡ. ಇದರ ನಡುವೆ ಮತ್ತೊಂದು ತಂಡ. ಅದು ಎರಡು ಗುಂಪುಗಳ ಚಲನವಲನ ನೋಡಿ ನಗೋದು, ಅಳೋದು, ಬಿಸುಸುಯ್ಯೋದು – ಹೀಗೆ ಮುಬ್ಭಾಗವಾಗಿದೆ ಮಹಾರಾಜಾ ಕಾಲೇಜು. ಇವುಗಳಲ್ಲಿ ಒಬ್ಬಿಬ್ಬರ ಚಿತ್ರಗಳನ್ನು ಚಿತ್ರಿಸೋಕೆ ಪ್ರಯತ್ನಪಡುತ್ತೇನೆ. ಒಬ್ಬರಿಗೆ ಹೆಸರಿಟ್ಟಿದ್ದೇವೆ "ಲೇಡಿ ಸ್ವೀರ್‌ವೆಲ್" ಅಂತ. ಷಿ ಸ್ವೀರ್ಸ್ ವೆಲ್ (ಗೊರಕೆ ಚೆನ್ನಾಗಿ ಹೊಡೆಯುತ್ತಾರೆ!). ಅವರ ಘೋರಣೆ ಕಾಲೇಜಿನಲ್ಲಿ ಹೇಳತೀರದು. ಇನ್ನೊಬ್ಬರು "ಲೇಡಿ ರವೀನಾ" (ರೂಪರಾಣಿ). ಬ್ರಾಕೆಟ್ಟಿನಲ್ಲಿರುವುದನ್ನು ನೋಡಿ ಮೂರ್ಛೆ – ಗೀರ್ಛೆ ಹೋದೀಯಾ ಮಗು! ಅವರು ನೆಲದ ಮೇಲೆ ನಡೆದುಕೊಂಡು ಬರೋರು ಅಲ್ವಂತೆ! ಹಾರ್‍ತಾ ಬರ್‍ತಾರಂತೆ!! ಇದು ನನ್ನೊಬ್ಬ ಮಿತ್ರರ ಅಭಿಪ್ರಾಯ. ಇಷ್ಟಾಯಿತೇ, ಇನ್ನಿಬ್ಬರು ನಾಗಕನ್ನಿಕೆಯರಿದ್ದಾರೆ. ಯಾಕೆ ಹೇಳ್ತೀಯೋ ಅವರ ವಿಷಯಾನ — ಎಷ್ಟು ಹೇಳಿದರೂನೂ ಕಮ್ಮಿನೇ........ಓಹೊಹ್ಹೋ ........ಅದೇನು ಬೆಡಗು! ಅದೇನು ಬಿನ್ನಾಣ! ಸುಮ್ಮಸುಮ್ಮನೆ ಕುಣೀತಾರೆ, ನೋಡು ಮಗೂ! ದಾರೀಲಿ ನಾವು ನಿಂತಿದ್ರೆ ಲಕ್ಷ್ಯವೇ ಇಲ್ಲ. 'ಡ್ಯಾಷ್' ಹೊಡಕೊಂಡು ಹೋಗೋಕು ತಯಾರಿ. ಕಾಲೇಜಿನ ಕಂಬ ಒರಗಿಕೊಂಡು ನಿಂತಿದ್ದೆ ಒಂದು ದಿವಸ. ಹಿಂದಿನ ದಿನವೇ 'ಗಗ್ಗಯ್ಯನ ಗಡಿಬಿಡಿ' ನಾಟಕ

ಆಡಿದ್ದೆವು........ಕುಣ್ಕೊಂಡು, ಕುಣ್ಕೊಂಡು ಬಂದಳು ಆಕೆ. ಹತ್ತಿರಕ್ಕೆ ಬರುತ್ತಲೂ ನಾನು 'ವಾಚ್' ಕಟ್ಟಿದ್ದೇನೆ - ನೋಡೂಂತ ಕಂಕಣರವ ಮಾಡ್ತಾ, ಎಡಗೈ ಎತ್ತಿ ತೋರಿಸಿದಳು! ಭಲಾರೆ ಹುಡುಗಿ! ಅಂದುಕೊಂಡೆ. ಇನ್ನೊಂದಿನ ಹಾಗೆಯೇ ನಿಂತಿದ್ದೆ. ಸವಾರಿ ಎದುರಿಗೆ ಚಿತ್ತೈಸಿತು. ಯಾರೂ ಇರಲಿಲ್ಲ, ಮಧ್ಯಾಹ್ನ. 'ಹೈಹೀಲ್ಡ್ ಷೂ' ಹಾಕಿದ ಕಾಲನ್ನ ಚಿಕ್ಕಿನಹಾಗೆ ಇಟ್ಟುಕೊಂಡು (ಕರೀಸೀರೆ ಉಟ್ಟಿದ್ರು) ಸೀರೇನ ಮೊಳಕಾಲವರೆಗೂ ಎತ್ತಿ ಕೊಂಡು ವಯ್ಯಾರ ಮಾಡ್ತಾ, ಹುಸಿನಗೆ ಬೀರ್ತಾ, ಮಾಯವಾದಳು ಮೃಗಾಕ್ಷಿ ........ಇವರ ಸ್ನೇಹಿತರು ಅವರೂನೂ ಅಷ್ಟೇನೆ........ಶ್ರೀ........ಅವರ ಕಾವ್ಯ ವಾಚನ ಏರ್ಪಡಿಸಿದ್ದರು. ಅದಕ್ಕೆ ಅವರೇ ಕಾರ್ಯದರ್ಶಿ. ಕೊನೇಲಿ ವಂದನಾರ್ಪಣೆ ಮಾಡೋಕೆ ಬಂದು, ನೂಲಿನ ಹಾರಾನ........ (ಆ ಇಬ್ಬರು ಮಹನೀಯರು) ಕುತ್ತಿಗೆಗೆ ಹಾಕದೆ ಕೈಗೆ ಕೊಟ್ಟರು. ಕೊರಳಿಗೆ ಹಾಕಿದ್ರೆ ಏನಾಗುತ್ತಿತ್ತೋ? 'ಗಾಂಧರ್ವ ರೀತ್ಯಾ ನಿನ್ನ ನಾನು ವರಿಸಿದ್ದೇನೆ. ಆದುದ ರಿಂದ ನೀನು ನನ್ನೊಡನೆ ಬರಬೇಕು' ಅಂತ ಆ ಇಬ್ಬರು ಮಹನೀಯರು ಎಲ್ಲಿ ಕದನಕ್ಕೆ ಆರಂಭಿಸುತ್ತಾರೋಂತ ಹೆದರಿಕೆಯಿಂದಲೋ ಅಥವಾ ಇನ್ಯಾವ ಕಾರಣದಿಂದಲೋ ಕೊರಳಿಗೆ ಹಾರಹಾಕಲಿಲ್ಲ. ಹೋಗಲಿ, ಅವರ ಸುಸಂಸ್ಕೃತಿ ಯನ್ನು ಎತ್ತಿತೋರಿಸುತ್ತೆ. ಆಮೇಲೆ 'ಬಾಡಿ'ನ 'ಬೆಂಡ್' ಮಾಡಿ 'ಕುಲುಕುಲು' ನಗುತ್ತಾ, ಕುಣಿಕೊಂಡು ಹೋದಳು ಆ ಕಮಲನೇತ್ರೆ! ಆ ನಗು ಎಷ್ಟು ಜನರ ದೃಷ್ಟಿ ಸೆಳೀತೋ! ಎಷ್ಟು ಜನರ ಹೃದಯದಲ್ಲಿ ದಾವಾಗ್ನಿಯನ್ನು ಎಬ್ಬಿಸಿತೋ ಹೇಳೋಕೆ ಆಗೋದಿಲ್ಲ. ಇಂಥ ಸಂಗತಿಗಳು ಎಷ್ಟೋ ನಡೆಯುತ್ತವೆ - ದಿನಂಪ್ರತಿ ನಂ ಕಾಲೇಜಿನಲ್ಲಿ. ಇದು ಒಂದು ತಂಡದ ಚಿತ್ರ........

"ಇನ್ನೊಂದು ತಂಡದ ಚಿತ್ರಾನೂ ಕೊಡ್ತೀನಿ. ನಮ್ಮ ಕ್ಲಾಸಿನಲ್ಲಿ ಒಬ್ಬರಿದ್ದಾರೆ. ತಾನೇ 'ಮನ್ಮಥಾ' ಅಂತ ತಿಳಿದುಕೊಂಡಿದ್ದಾರೇಂತ ಕಾಣುತ್ತೆ. ತೆರೆದ ಬಾಯಿ ತೆರಕೊಂಡು 'ಸುವಾಸಿನಿ'ಯರ ಕಡೆ ನೋಡ್ತಾ ಕೂತುಬಿಡುತ್ತಾರೆ. ಬಾಯಲ್ಲಿ ನೊಣ ಹೊಕ್ಕರೂ ಪ್ರಜ್ಞೆ ಇರೋಲ್ಲ. ಅವರಿಂದ 'ಷಹಬಾಶ್‌ಗಿರಿ' ತಗೋಬೇಕೂಂತ ನಡುನಡುವೆ ಮೇಷ್ಟ್ರಿಗೆ ಪ್ರಶ್ನೆ ಹಾಕೋದು, ಹುಸಿನಗೆಯಿಂದ ಕೂಡಿದ ಮುಖಾನ್ನ ಅವರ ಕಡೇಗೆ ತಿರುಗಿ

ಹೋದ್ರು, ಅಕಸ್ಮಾತ್ ಅವರ ದೃಷ್ಟಿ ಈ ಮುಂಗಸ್ನೂತಿ ಮನ್ಮಥನ್ಮೇಲೆ ಬಿದ್ರೆ ಮನಸ್ಸಿಗೆ 'ಹಾಯ್' ಅನಿಸೊತ್ತೆ ಅಂತ ಕಾಣುತ್ತೆ. ಇದು ಪ್ರತಿದಿನ ನಡೀತಿರುತ್ತೆ. ಇನ್ನು ಕೆಲವರು 'ಸ್ನೊ' ಹಚ್ಚಿಕೊಂಡು, ಕ್ರಾಪ್ ತೀಡಿ, ಉಲ್ಲನ್ ಸೂಟು ಧರ್ಸಿ, ಅಲ್ಲಿಂದಿಲ್ಲಿಗೆ – ಇಲ್ಲಿಂದಲ್ಲಿಗೆ ಕುಪ್ಪಳಿಸ್ತಾ ಇರ್ತಾರೆ. ಆಗ ಅಕಸ್ಮಾತ್ ಅವರೇನಾದ್ರೂ ಇವರ ಕಡೆ ತಿರುಗಿದ್ರೆ, ಒಂದು ಕುಡಿ ನೋಟ ಬೀರಿದ್ರೆ, ಕೃತಾರ್ಥರಾದೆವು. ಜನ್ಮ ಪಾವನವಾಯಿತೂಂತ ಬಾಯಿಬಿಟ್ಟುಕೊಂಡು, ಜೊಲ್ಲು ಸುರಿಸೋರು ಕೆಲವರು. ಇನ್ನೊಂದು ತಂಡಕ್ಕೆ ಇವನ್ನೆಲ್ಲಾ ನೋಡೋದೆ ಕೆಲಸ. ಈ ಮೂರು ತಂಡಗಳು ಕಾಲೇಜಿನಲ್ಲಿ ಮುಖ್ಯ ತಂಡಗಳಾದ್ದರಿಂದ ಸವಿಸ್ತಾರವಾಗಿ ಬರೆದಿರೋದು. ಇನ್ನೊಂದು ಗುಂಪೂ ಇದೆ. ಆ ಗುಂಪು....ಅಯ್ಯಂಗಾರ್ಯರ ಗುಂಪಿಗೆ ಸೇರಿದ್ದು. ಶಂಖ ಊದಿದ್ರೇ ಊದಿದ್ದು. ಈ ವಿಷಯುಗಳೆಲ್ಲಾ ಅವರ ಕಣ್ಣಿಗೆ ಬೀಳೊಲ್ಲ. ಮೇಲಿನ ಮೂರು ತಂಡಗಳು ತಮ್ಮ ಪ್ರಭಾವವನ್ನ ಬೀರಿ ಈ ನಾಲ್ಕನೇ ತಂಡವನ್ನು ಇಲ್ಲದಂತೆ ಮಾಡಿದೆ.

"ಇದನ್ನೆಲ್ಲಾ ನೋಡಿದರೆ ನನಗೆ ಹೀಗೆನಿಸುತ್ತದೆ. ಮಿಲ್ಟನ್ ಕವಿ 'ಪ್ಯಾರಡೈಸ್ ಲಾಸ್ಟ್' ಅಂತ ಒಂದು ಪುರಾಣ ಬರೆದಿದ್ದಾನೆ. ಅಲ್ಲಿ ಒಂದು ತೋಟ. ಅದರ ಹೆಸರು ಈಡನ್ ಅಂತ. ಅಲ್ಲಿ ಫಲಭರಿತವಾದ ಮರಗಳ ನಡುವೆ ಒಂದು 'ಜ್ಞಾನ ವೃಕ್ಷ' ಇತ್ತಂತೆ. ಆಡಂ ಮತ್ತು ಈವ್ ದಂಪತಿಗಳೇ ಅದರ ಒಡೆಯರು. ಅವರೇ ಮಾನವ ಪ್ರಪಂಚದ ಮೊದಲಿಗರು. ದೇವರು ಆ ವೃಕ್ಷದ ಹಣ್ಣುಗಳನ್ನು ತಿನ್ನಕೂಡದೂಂತ ಅವರಿಗೆ ಆಜ್ಞೆ ಮಾಡಿದ್ದನಂತೆ. ಆದರೆ ದೇವರ ಮೇಲಿನ ಸೇಡು ತೀರಿಸಿಕೊಳ್ಳಲು 'ಸೇಟನ್' ಎನ್ನುವನು ಸರ್ಪದ ರೂಪದಲ್ಲಿ ಬಂದು ಈವ್‌ನನ್ನು ಆ ಹಣ್ಣು ತಿನ್ನಲು ಪ್ರೇರೇಪಿಸಿದನಂತೆ. ಅವಳು ಅದನ್ನು ತಿಂದು ಗಂಡನಾದ ಆಡಂಗೂ ತಿನ್ನಿಸಿದಳಂತೆ. ಇದರಿಂದ ಸಿಟ್ಟುಗೊಂಡ ದೇವರು ಅವರನ್ನು ತೋಟದಿಂದ ಹೊರದಬ್ಬಿದನಂತೆ. ಅಲ್ಲಿಂದ ಮನುಷ್ಯನಿಗೆ ಈ ತಾಪತ್ರಯುಗಳೆಲ್ಲಾ ಬಂದ ವಂತೆ. ಇದನ್ನು ಯಾಕೆ ಹೇಳ್ದೆ ಅಂದರೆ, ನಮ್ಮ ಕಾಲೇಜು ನನ್ನ ಕಣ್ಣಿಗೆ ಆ ತೋಟದ ಹಾಗೆ ಕಾಣುತ್ತೆ. ಈ ತೋಟದಲ್ಲಿ ಗಿಣಿಗಳೂ, ಚಕೂರ ಚಕೋರಿಯರೂ, ಕೋಗಿಲೆಗಳೂ, ಹುಲಿ, ಕರಡಿ, ಶಾರ್ದೂಲಗಳೂ ಇವೆ.

ಇವಲ್ಲದೆ ಆಡಂ ಮತ್ತು ಈವ್‌ನಂತವರು ಇದ್ದಾರೆ—ತೋಟ ನೋಡಿಕೊಳ್ಳೋಕೆ. ಕಣ್ಣುಬಿಟ್ಟುಕೊಂಡು, ಕುಣೀತಾ ಕೇಕೆ ಹಾಕುತ್ತಾ, ಆ ಮರದಿಂದ ಈ ಮರಕ್ಕೆ ಈ ಮರದಿಂದ ಆ ಮರಕ್ಕೆ ಹಾರಾಡ್ತಾ ಇರೋ ಕೋತಿಗಳೂ ಇವೆ. ಇದನ್ನು ಕಾಲೇಜು, ಅಲ್ಲಿನ ವಿದ್ಯಾರ್ಥಿ – ವಿದ್ಯಾರ್ಥಿನಿಯರಿಗೆ ಹೋಲಿಸೋಣ. ಕಾಮ ಮತ್ತು ಪ್ರೇಮ ಇವೇ ಎರಡು ಮರಗಳು. ಕಾಮದ ಮರದಲ್ಲಿ ಬಿಡುವ ಹಣ್ಣು ತಿನ್ನಕೂಡದು ಅಂತ ಸಮಾಜದ ಕಟ್ಟಾಜ್ಞೆ. ವಿಷ ಜಂತುಗಳು (ಹಾವುಗಳು) ಈವ್‌ನಂತ ಮುಗ್ಧೆಯರಿಗೆ ಅದೇ ಹಣ್ಣನ್ನು ತಿನ್ನೋಕೆ ಪ್ರೇರೇಪಿಸಿ ಅವರ ಜೀವನ ಕೆಡಸಿದ್ದಲ್ಲದೆ ಸಮಾಜವನ್ನೂ ಕೆಡಿಸಿ, ಸೇಟನ್ ತನ್ನ ಕೆಲಸ ಆದಮೇಲೆ ಹೇಗೆ ಮಾಯವಾಗುತ್ತಾನೋ ಹಾಗೆ ಇವರೂನೂ ತಲೆತಪ್ಪಿಸಿಕೊಳ್ಳುತ್ತಾರೆ – ಅಂತ ತಿಳಿಸೋಕೆ ಇಷ್ಟು ಬರಿಬೇಕಾಯಿತು.

"ಇಲ್ಲಿಗೆ ಸಾಕು ಮಾಡ್ತೀನಿ ನಮ್ಮ ಪುರಾಣಾನ. ಈ ಗುಂಪುಗಳಲ್ಲಿ ನನ್ನನ್ನು ಯಾವ ಗುಂಪಿಗೆ ಸೇರಿಸ್ತೀಯಾ?" ಎಂದು ಶ್ರೀಧರ್ ತನ್ನ ಸ್ನೇಹಿತನಿಗೆ ಪ್ರಶ್ನೆಹಾಕಿ ಕಾಗದವನ್ನು ಮುಗಿಸಿದ್ದರು. ಈಗ ನನ್ನ ಮುಂದಿದ್ದ ಪ್ರಶ್ನೆ ಎಂದರೆ ಈ ಗುಂಪುಗಳ ಪೈಕಿ ನನ್ನದು ಯಾವ ಗುಂಪು? ಕಾಲೇಜು ಪ್ರಣಯಿಗಳಲ್ಲಿ ನಾನೂ ಒಬ್ಬನೆಂದು ಗೆಳೆಯರ ಭಾವನೆ. ಆದರೆ ನಾನು ಅವರಿಗಿಂತ ಭಿನ್ನ ಪ್ರಕೃತಿಯವನು. ಮೇಲ್ಕಂಡ ಯಾವ ಗುಂಪಿಗೂ ಸೇರದ ಬೇರೊಂದು ಗುಂಪಿನವನು ಎಂದು ಅವರಿಗೆ ಗೊತ್ತಿಲ್ಲ!

ಗೆಳೆಯರಿಗೆ ಶೋಧನೆಯಲ್ಲಿ ಇದ್ದ ಆಸಕ್ತಿ, ಉತ್ಸಾಹ ಈಗ ಇರಲಿಲ್ಲ. ಆದರೆ ನನ್ನ ಸ್ಥಿತಿ ಈಗ ಮೊದಲಿಗಿಂತಲೂ ಹೆಚ್ಚು ಹದಗೆಟ್ಟಿತ್ತು. ಓದಲು ತೊಡಗಿದರೆ ನನ್ನ ಪುಸ್ತಕದ ಹಾಳೆಗಳಲ್ಲಿ ಆಕೆಯದೇ ಚಿತ್ರಕಾಣುತ್ತಿತ್ತು. ಈ ಪುಸ್ತಕದಲ್ಲಿ ಈ ಚಿತ್ರ ಎಲ್ಲಿಂದ ಬಂತು ಎಂದು ಕೊಂಚ ಎಚ್ಚೆತ್ತು ನೋಡಿದರೆ ಅದು ಅಲ್ಲಿಂದ ಮಾಯವಾಗುವುದು. ಮತ್ತೆ ಓದುತ್ತಾ ಓದುತ್ತಾ ಇದ್ದರೆ ಅಕ್ಷರಗಳ ಬದಲು ಅಪ್ರೊಡೈಟಿಯ ಚಿತ್ರ! ಕೂತಲ್ಲಿ, ನಿಂತಲ್ಲಿ, ಹೋದಲ್ಲಿ ಆಕೆ ಬೆನ್ನಟ್ಟಿ ಬರುವಳು. ಆಕೆಯನ್ನು ಮನಸ್ಸಿನಿಂದ ತೊಡೆದುಹಾಕಿ ನನ್ನ ವ್ಯಾಸಂಗದಲ್ಲಿ ಮುಳುಗಲು ನಾನು ಮಾಡಿದ ಸಾಹಸ ವ್ಯರ್ಥವಾಯಿತು.

ಒಂದೆರಡು ಕ್ಷಣ ಈ ಕೃತ್ಯದಲ್ಲಿ ಯಶಸ್ವಿಯಾದಂತೆ ಕಂಡರೂ, ಮರುಕ್ಷಣದಲ್ಲಿ ಮನಸ್ಸು ನಾಯಿಬಾಲದ ಸಮಾಚಾರವಾಗುತ್ತಿತ್ತು.

ಒಂದು ದಿನ ಮಧ್ಯಾಹ್ನ, ಕಲಾಮಂದಿರದಲ್ಲಿ ನನ್ನ ಹೊಟ್ಟೆಯ ದುಃಖ ವನ್ನು ಹೊರಗೆ ಕಾರುತ್ತಿದ್ದೆ. ಆಗ ಶ್ರೀಧರ್ ಹೇಳಿದರು, "ಆಕೆಯನ್ನು ನೀವು ಯಾಕೆ ಇಷ್ಟು ಹಚ್ಚಿಕೊಂಡು ಕೊರಗುವಿರೋ ನಾಬೇರೆ ಕಾಣೆ. ಆಕೆಯು ಅಂತಹ ರತಿಯೂ ಅಲ್ಲ. ನಿಮ್ಮ ತಾರಿಣಿಯ ಕಲ್ಪನೆಯು ಆಕೆಯಲ್ಲಿ ಮುಗಿದುಹೋದರೆ, ನಿಮ್ಮ ವಿಜಯ ಯಾತ್ರೆಯ ತಾರಿಣಿ ತುಂಬಾ ಸಪ್ಪೆ! ಬೀದಿಯಲ್ಲಿ ಹೋಗುವ ಸಾವಿರಮಂದಿ ಹೆಣ್ಣುಗಳಲ್ಲಿ ತಾರಿಣಿಯೂ ಒಬ್ಬಳಾಗು ತ್ತಾಳೆ. ಆದರೆ ನಿಮ್ಮ ವಾಣಿಯಲ್ಲಿ, ಕಾದಂಬರಿಯಲ್ಲಿ ತಾರಿಣಿಗೆ ಅದಕ್ಕೂ ಮಹೋನ್ನತ ವ್ಯಕ್ತಿತ್ವವಿದೆ. ಇಂತಹ ಅಪೂರ್ವ ಸೃಷ್ಟಿಯನ್ನು ಕಂಡವರು ಅದು ಹೇಗೆ ಈ ಅಪ್ರೊಡ್ಯೈಟಗೆ ಬಾಯಿಬಿಡುತ್ತೀರೋ ನನಗೆ ತಿಳಿಯದ ಒಗಟಾಗಿದೆ" ಎಂದು ನನ್ನನ್ನು ಕೆಣಕಿದರು.

"ಸೌಂದರ್ಯವೆನ್ನುವುದು ಯಾವುದೊಂದು ಪದಾರ್ಥ ಅಥವಾ ವಸ್ತು ಸ್ಥಿತಿಯಲ್ಲಿಲ್ಲ. ಅದು ನೋಡುವ ಕಣ್ಣಿನಲ್ಲಿದೆ. ನಿಮಗೆ ಈ ಹೂ ಸುಂದರ ವಾಗಿದೆ, ಆದರೆ ನನ್ನ ಮನಸ್ಸಿಗೆ ಚನ್ನಾಗಿಲ್ಲ. ನಾಲ್ಕು ಜನಕ್ಕೆ ಚನ್ನಾಗಿದ್ದ ಮಾತ್ರಕ್ಕೆ ಐದನೆಯವರಿಗೆ ಅದು ಪ್ರಿಯವಾಗಬೇಕಿಲ್ಲ. ಅವನವನ ಅಭಿರುಚಿ, ಸಂಸ್ಕಾರಕ್ಕೆ ತಕ್ಕಂತೆ ಆಯಾ ವಸ್ತುಗಳ ಸೌಂದರ್ಯ ಅವನಿಗೆ ಗೋಚರಿ ಸುತ್ತದೆ. ಅಲ್ಲದೆ ಚಲುವಿನ ಆವಾಸ ಸುಂದರ ವಸ್ತುಗಳಿಗೆ ಮಾತ್ರವೇ ಮೀಸಲಿಲ್ಲ. ಕಣ್ಣು ತೆರೆದು ನೋಡುವ ಸೌಂದರ್ಯೋಪಾಸಕನಿಗೆ ಚಲುವು ಕುರೂಪವೆನಿಸಿಕೊಳ್ಳುವ ವಸ್ತುವಿನಲ್ಲೂ ಕಾಣಿಸುತ್ತದೆ. ಆ ಚಲುವು ಅಂತ ರಂಗದ ಚಲುವು. ಚಿರನೂತನವೂ ಅಚಲವೂ ಆದ ಚಲುವು. ಸತ್ಯದ ಚಲುವು ಇಂತಹದಂತೆ! ಪ್ರೇಮದ ಚಲುವು ಇಂತಹ ದೈವಿಕ ಚಲುವಂತೆ – ಹೀಗೆನ್ನುತ್ತಾರೆ ಗಾಂಧೀಜಿ. ಅತಿ ಕುರೂಪಿ ಎನಿಸಿಕೊಂಡಿದ್ದ ಸಾಕ್ರಟೀಸನು ಕೂಡ ಅವರ ದೃಷ್ಟಿಯಲ್ಲಿ ಜಗತ್ತಿನಲ್ಲಿ ಆಗಿಹೋದ ಅತಿ ಸುಂದರ ವ್ಯಕ್ತಿಗಳಲ್ಲಿ ಒಬ್ಬ. ಅವನು ಸತ್ಯ ಶೋಧಕ, ಸತ್ಯದ ಆರಾಧಕ, ಅವನ ಅಂತರಂಗ ಪವಿತ್ರವಾಗಿತ್ತು, ಸುಂದರವಾಗಿತ್ತು........

"ನಾನು ಅಪ್ರೊಡ್ಯೈಟಿಯಲ್ಲಿ ಕಾಣುತ್ತಿರುವುದು ಇಂಥಹ ಅಂತರಂಗದ

ಚಲುವನ್ನು. ಹೊರಗಿನ ಚಲುವನ್ನಲ್ಲ. ಇಂದ್ರಿಯಾತೀತ ಚಲುವನ್ನು ಕಾಣುತ್ತೇನೆ. ಆಕೆಯ ಚಲುವು ಇಂದ್ರಿಯಜನ್ಯ ಚಲುವಾಗಿದ್ದರೆ, ಅದು ಇಂದ್ರಿಯವನ್ನು ಮಾತ್ರ ಸಂತೋಷಪಡಿಸುತ್ತಿತ್ತು. ಆದರೆ 'ಆಕೆ' ಇದು ವರೆವಿಗೂ ಇಂದ್ರಿಯ ಆಕರ್ಷಣೆಯನ್ನು ನನಗೆ ಕೊಟ್ಟಿಲ್ಲ. ಆದರೂ ಆಕೆಗಾಗಿ ಹೃದಯ ಒಂದೇ ವಿಧವಾಗಿ ಪರಿತಪಿಸುತ್ತಿದೆ. ಆಕೆಯ ಸಾನ್ನಿಧ್ಯ ಸುಖದಲ್ಲಿ ಮನಸ್ಸು ತಪ್ತವಾಗುತ್ತದೆ; ತನ್ನ ಎಲ್ಲಾ ವಿಕಾರಗಳನ್ನು ಕಳೆದುಕೊಂಡು ಯಾವುದೋ ಅನಂತವಾದ ಚಿದಾನಂದಪರಿಯಲ್ಲಿ ಲೀನವಾಗುತ್ತದೆ. ಇಂತಹ ಒಂದು ಭವ್ಯ ಅನುಭವವನ್ನು ಕೊಡುವ 'ಆಕೆ', ಮನಸ್ಸಿನ ತೃಷೆಯನ್ನು ಹಿಂಗಿಸುವ ಅಪ್ರೊಡೈಟಿ ನನ್ನ ಭಾಗಕ್ಕೆ ಚಲುವೆಯೇ ಸರಿ........

"ಇನ್ನು ಆಕೆಯಿಂದ ತಾರಿಣಿಯ ವ್ಯಕ್ತಿತ್ವದ ವ್ಯಾಪ್ತಿಗೆ 'ಧಕ್ಕೆ' ಎನ್ನುವ ವಿಷಯ. ಹೀಗೆ ನಿಮಗೆನಿಸುವುದು ಒಂದು ರೀತಿಯಲ್ಲಿ ಸಹಜವೇ. ಆದರೆ ಅಪ್ರೊಡೈಟಿಯೇ 'ತಾರಿಣಿ' ಎಂದು ನಾನು ಎಂದೂ ಕರೆದಿಲ್ಲ, ತಿಳಿದಿಲ್ಲ. ತಾರಿಣಿಯ ಕೆಲವಂಶ ಆಕೆಯಲ್ಲಿ ಕಂಡುಕೊಂಡಿದ್ದೇನೆ. ಹೀಗಾಗಿ ಅವಳ ಕಡೆ ಮನಸ್ಸು ಹರಿಯುತ್ತಿದೆಯೆಂದು ನಾನು ಹೇಳುತ್ತಲೇ ಬಂದಿದ್ದೇನೆ. ತಾರಿಣಿ ಒಂದು ಅಪೂರ್ವ ಸೃಷ್ಟಿಯೇ ಸರಿ! ಆಕೆ ಚಲುವಿನಲ್ಲಿ, ಗುಣದಲ್ಲಿ ಆದರ್ಶವ್ಯಕ್ತಿ ಮಾತ್ರಳಲ್ಲ. 'ಅವಳು ಸೌಂದರ್ಯದ ಸೌಂದರ್ಯ, ಸಚ್ಚಿದಾನಂದದ–ಆನಂದ, ನೀರಿನಲ್ಲಿನ ರಸ ಅವಳು, ಸೂರ್ಯಚಂದ್ರ ತೇಜ ಅವಳು, ಪುರುಷರ ಪೌರುಷ ಸ್ತ್ರೀಯರ ಸ್ತ್ರೀತ್ವ, ಮಣ್ಣಿನ ಪುಣ್ಯ ಗಂಧ ಅವಳು, ಅಗ್ನಿಯ ತೇಜಸ್ಸು, ತಾಪಸಿಗಳ ತಪಸ್ಸು, ಬುದ್ಧಿವಂತರ ಬುದ್ಧಿ – ಜೀವದ ಪ್ರಾಣ' ಎಲ್ಲವೂ ತಾರಿಣಿಯೇ. ಎಲ್ಲವೂ ತಾರಿಣಿಯ ಸ್ವರೂಪವೇ. ಆಕೆಯು ಒಂದು ವ್ಯಕ್ತಿ ಮಾತ್ರವಲ್ಲ – ಒಂದು ಶಕ್ತಿ. ಜಗದಾಂಬೆ ಬೇರೆ ಯಲ್ಲ – ನನ್ನ ತಾರಿಣಿ ಬೇರೆಯಲ್ಲ. ನನ್ನ ತಾರಿಣಿಯ ಕಲ್ಪನೆ ಅಷ್ಟೊಂದು ಹಿರಿಯದಿದೆ. ಹೀಗಿರುವಾಗ ಸಮುದ್ರದ ನೀರನ್ನು ಸೌಟಿನಲ್ಲಿ ಮೊಗೆದು – ಇದು ಸಮುದ್ರ – ಎಂದರೆ ಅದು ಸಮುದ್ರವಾಗಬಲ್ಲುದೆ? ಅದು ಸಮುದ್ರದ ಒಂದು ಅಂಶ. ಅದಕ್ಕಿಂತಲೂ ಹೆಚ್ಚಿನ ಯೋಗ್ಯತೆ ಅದಕ್ಕಿಲ್ಲ...." ಎಂದು ದೀರ್ಘವಾಗಿ ಉಪನ್ಯಾಸ ಕೊಟ್ಟುಬಿಟ್ಟೆ.

ಶ್ರೀಧರ್ ನನ್ನ ಮಾತು ಕೇಳಿ ಬೆರಗಾಗಿ ಹೋದರು. "ಹಾಗಾದರೆ

ಅಫ್ರೊಡೈಟಿಯೇ ನಿಮ್ಮ ಜತೆಗಾತಿಯಾಗಬೇಕೆಂದು ನೀವೇಕೆ ಬಯಸುತ್ತೀರಿ? ಅಕ್ಕನ ಮಗಳಲ್ಲಿ ತಾರಿಣಿಯ ದರ್ಶನ ಪಡೆದು ಯಾಕೆ ತೃಪ್ತಿಯಿಂದ ಇರಬಾರದು ?"

"ಹಾಗಾದರೆ ಅಪರಂಜಿಯೂ ಒಂದೇ, ಸವರನ್ ಬಂಗಾರವೂ ಒಂದೇ ಎಂದು ನಿಮ್ಮ ಕಲ್ಪನೆಯೋ ?" ಎಂದೆ.

"ಅದು ಹೇಗಾದೀತು ?" ಎಂದು ಶ್ರೀಧರ್ ಕೇಳಿದರು.

"ಹಾಗೆಯೇ ನನ್ನ ಭಾಗಕ್ಕೂ, ಸವರನ್ ಬಂಗಾರವಾಗಿರುವ ಅಕ್ಕನ ಮಗಳು ಅಪರಂಜಿ ಚಿನ್ನವೆಂದು ಹೇಗೆ ಎನಿಸಿಕೊಂಡಾಳು ?"

"ನಿಮ್ಮ ವೇದಾಂತ ನನ್ನ ಮಂಡೆಯೊಳಗೆ ಇಳಿಯದು. ಆದರೆ ನಾನು ಹೇಳುವುದಿಷ್ಟು. ಪರೀಕ್ಷಾ ಸಮಯದಲ್ಲಿ ಯಾವಳೋ ಅಫ್ರೊಡೈಟಿ ಎಂದು ನೀವು ತಲೆಕೆಡಿಸಿಕೊಂಡು ಕೂಡಬೇಡಿ. ನಾಳೆ ಫೇಲಾದರೆ ಆ ಅಫ್ರೊಡೈಟಿ ಬಂದು ಪಾಸುಮಾಡಿಸುವುದಿಲ್ಲ."

"ಅಫ್ರೊಡೈಟಿಯ ಒಲವು ಒಂದು ನನ್ನದಾದರೆ, ಅದರ ಸ್ಫೂರ್ತಿಯಿಂದ ಪಾಸು ತಾನಾಗಿ ಆಗುತ್ತದೆ !" ಎಂದೆ.

"ಹಾಗಾದರೆ ನೀವು ಹೇಳುವುದೇನು ?"

"ಏನೇ ಆಗಲಿ ಅಫ್ರೊಡೈಟಿಯನ್ನು ಕಂಡು, ಮಾತನಾಡಿಸಿ ಬರಬೇಕೆನ್ನುವ ಆಸೆ ಇದೆ."

"ನಿಮಗೆ ಅಷ್ಟು ಧೈರ್ಯವಿದೆಯೇ ?"

"ಇಲ್ಲವೆಂದೇ ನಿಮ್ಮ ಸಹಕಾರ ಅಪೇಕ್ಷಿಸುತ್ತಿರುವುದು. ನಿಮಗೆ ನನ್ನ ಮಾತುಗಳು ಹುಚ್ಚನ ಮಾತುಗಳಾಗಿ ತೋರಿದರೆ, ನನ್ನ ಪ್ರಯತ್ನ ನಾನು ಮಾಡಬೇಕಾಗುತ್ತದೆ" ಎಂದೆ.

"ಒಂದು ವೇಳೆ ಅವಳು ನಿಮ್ಮ ಪ್ರೇಮವನ್ನು ತಿರಸ್ಕರಿಸಿದರೆ ?" ಎಂದು ಗೆಳೆಯ ಪ್ರಶ್ನಿಸಿದ.

"ಒಂದು ವೇಳೆ ಅವಳು ನನ್ನವಳಾಗಲು ಒಪ್ಪಿದರೆ ?" ಎಂದು ಉತ್ತರ ಕೊಡುವ ಬದಲು ನಾನು ಪ್ರಶ್ನಿಸಿದೆ.

"ಎರಡರ ಉತ್ತರವೂ ಒಂದೇ. ನಿಮ್ಮ ಮುಂದಿನ ಬದುಕು ಮಣ್ಣುಗೂ

ಡುತ್ತದೆ" ಎಂದರು ಶ್ರೀಧರ್ ನಿಷ್ಠುರವಾಗಿ. ಅವರಿಗೆ ಕಾಲೇಜು ಹುಡುಗಿಯರೆಂದರೆ ಬೆಂಕಿಬೆಂಕಿ.

"ನಾಳಿನ ಮಾತು ಇಂದಾಡುವುದು ಬೇಡ. ಈಗ ಹೇಗೂ ಮೈಗೆ ಬಣ್ಣ ಬಳಿದುಕೊಂಡು ಪ್ರೇಮದ ನಾಟಕ ಕಟ್ಟಿದ್ದೇನೆ. ಅದು ಯಶಸ್ವಿಯಾಗುತ್ತದೋ, ವಿಫಲವಾಗುತ್ತದೋ ಅನಂತರ ನೋಡೋಣ" ಎಂದೆ ಸಮಾಧಾನದಿಂದ.

"ಪ್ರತಿಕ್ರಿಯೆ ಇಲ್ಲದ ನಾಟಕ ವ್ಯರ್ಥ" ಎಂದು ಶ್ರೀಕಾಂತನ್ ಅಪ್ಪಣೆ ಕೊಡಿಸಿದರು.

"ನಾನು ಈಗ ಪ್ರತಿಕ್ರಿಯೆಗಾಗಿ ಎದುರುನೋಡುತ್ತಿದ್ದೇನೆ. ಬಂದರೆ ನನ್ನ ಭಾಗ್ಯವೆಂದುಕೊಳ್ಳುತ್ತೇನೆ. ಬರದೆಹೋದರೆ ದೌರ್ಭಾಗ್ಯ – ತಿಳಿದೇ ಇದೆ...."

"ಹಾಗಾದರೆ ಅಕ್ಕನ ಮಗಳ ವಿಷಯ ಏನುಮಾಡುತ್ತೀರಿ?"

"ಖಂಡಿತ ಮಾಡಿಕೊಳ್ಳುವುದಿಲ್ಲ – ಎಂದು ತಿಳಿಸಿಬಿಟ್ಟು ಊರು ಬಿಡಲು ನಿಶ್ಚಯಿಸಿದ್ದೇನೆ."

ಈ ಎಲ್ಲಾ ಸಂಭಾಷಣೆ ನಡೆದು ನಾಲ್ಕಾರು ದಿನಗಳಾದರೂ ಗೆಳೆಯರು ಯಾರೂ ಅಪ್ರೊಡೈಟೆಯ ಬಗ್ಗೆ ನನಗೆ ಬೇಕಾದ ಸುದ್ದಿ ಸಂಗ್ರಹಿಸಿಕೊಡಲು ನೆರವಾಗಲಿಲ್ಲ.

ನನ್ನ ಪಕ್ಕದ ಕೋಣೆಯಲ್ಲಿ ಇದ್ದ ಸ್ನೇಹಿತರು–ಇಂತಹ ಸುದ್ದಿ ಸಂಗ್ರಹೆ ಕಾರ್ಯದಲ್ಲಿ ಚತುರರು. ಆತ ಕಾಲೇಜಿಗೆ ಬರುವ ಹುಡುಗಿಯರ ಎಲ್ಲಾ ಸಮಾಚಾರಗಳನ್ನು ತಿಳಿಸುವ ಕೋಶವಿದ್ದಂತೆ! ಯಾರ ಬಗ್ಗೆ ಸುದ್ದಿಬೇಕಾದರೂ ಸಂಗ್ರಹಿಸಿಕೊಡುತ್ತಾರೆ. ನಾನು ಅವರ ಸಹಾಯ ಅಪೇಕ್ಷಿಸಿದೆ. ನನ್ನ ಮತ್ತು ಅಪ್ರೊಡೈಟೆಯ ಸಂಬಂಧವನ್ನೆಲ್ಲಾ ಯಾವುದನ್ನೂ ಮುಚ್ಚಿಡದೆ ಹೇಳಿದೆ; ಅಪ್ರೊಡೈಟೆಯನ್ನು ಒಂದು ದಿನ ಕಾಲೇಜಿನಲ್ಲಿ ತೋರಿಸಿದೆ. "ಇನ್ನು ನಾಲ್ಕು ದಿನಗಳಲ್ಲಿ ಆಕೆಯ ಕುಲಗೋತ್ರ, ವಯಸ್ಸು, ಮನೆತನ, ನಿವಾಸ, ತಂದೆಯ ಹೆಸರು, ಚಾಕರಿ, ವಿವಾಹಿತಳೋ – ಅವಿವಾಹಿತಳೋ – ಇ- ಮೊದಲಾದ 'ಕಾಲಂ'ಗಳನ್ನು ಭರ್ತಿಮಾಡಿ ಕೊಡುವುದಾಗಿ ತಿಳಿಸಿ-

ಆದರೆ ವಾರಕಳೆದರೂ ಆತನಿಂದ ನನಗೆ ಬೇಕಾದ ಸು-

ಕೊಡಲು ಸಾಧ್ಯವಾಗಲಿಲ್ಲ. ‘ ಇನ್ನೊಂದುವಾರ ಅವಕಾಶಕೊಡಿ ’ ಎಂದ. ಆದರೆ ವಾರದ ಮಾತು ಹಾಗಿರಲಿ. ಒಂದೆರಡು ತಾಸುಗಳು ಆಕೆಯ ಬಗ್ಗೆ ಏನೂ ತಿಳಿಯದೆ ಕೂರುವಷ್ಟು ಮನಸ್ಸಿನ ವ್ಯವಧಾನವಿರಲಿಲ್ಲ ನನಗೆ. ಸುಮ್ಮನೆ ಉದ್ವೇಗ ! ಉದ್ವೇಗ ! ಹೇಳಲಾಗದ ಅಶಾಂತಿ, ಅತೃಪ್ತಿ ಯಾವ ಕೆಲಸ ಮಾಡಲೂ ಬೇಸರ !

ಕಡೆಗೊಂದು ದಿನ ನಾನೇ ಏಕೆ ಅಪ್ರೊಡೈಟಿಗೆ ಪತ್ರ ಬರೆಯಬಾರದೆಂದು ಆಲೋಚಿಸಿದೆ. ಹೂಂ. ಬರೆಯಬಹುದು.....ಆದರೆ ಬರೆಯಲು ಲೇಖಣಿಯನ್ನು ತೆಗೆದುಕೊಂಡಾಗ ಧೈರ್ಯ ಉಡುಗಿತು. ಈಗ ನೂರೆಂಟು ಸಮಸ್ಯೆ ಎದುರಿಗೆ ಬಂತು. ಯಾವ ರೀತಿ ಪತ್ರ ಬರೆಯುವುದು ? ಯಾರನ್ನು ಉದ್ದೇಶಿಸಿ ಬರೆಯಬೇಕು ? ಆಕೆಗೊ ಅಥವಾ ಆಕೆಯ ಮನೆಯವರಿಗೋ ? ಕಾಗದವನ್ನು ಯಾವ ಭಾಷೆಯಲ್ಲಿ ಬರೆಯಬೇಕು ? ಕನ್ನಡದಲ್ಲೋ ಇಂಗ್ಲೀಷಿನಲ್ಲೋ ? ಕನ್ನಡದಲ್ಲಿ ಬರೆದರೆ ಪದಗಳನ್ನು ಹಿಂಜಿ ದ್ವಂದ್ವಾರ್ಥಗಳನ್ನು ಪಡೆಯಬಹುದು. ಇಂಗ್ಲೀಷೆ ಸರಿ.....ಅದರಲ್ಲೇ ಪತ್ರ ಬರೆಯುವುದಾಗುತ್ತದೆ. ಆದರೆ ಅದನ್ನು ಆಕೆಗೆ ತಲುಪಿಸುವ ಬಗೆ ಹೇಗೆ ?

ಕೆಲವು ತಿಂಗಳುಗಳ ಹಿಂದೆ ಕಾಲೇಜಿನಲ್ಲಿ, ನಮ್ಮ ತರಗತಿಯಲ್ಲಿ ಒಂದು ಸ್ವಾರಸ್ಯವಾದ ಘಟನೆ ನಡೆದಿತ್ತು. ಯಾವನೋ ಉನ್ಮತ್ತಪ್ರೇಮಿಯೊಬ್ಬ ಹುಡುಗಿಯೋರ್ವಳಿಗೆ ತನ್ನ ಹುಚ್ಚು ಪ್ರೇಮವನ್ನೆಲ್ಲಾ ತೋಡಿಕೊಂಡು ಒಂದು ಕಾಗದ ಬರೆದಿದ್ದ. ಆ ಕಾಗದವನ್ನು ಅಂಚೆಯವನು ತರಗತಿ ನಡೆಯುತ್ತಿರುವಾಗಲೇ ತಂದು ಉಪಾಧ್ಯಾಯರ ಕೈಗೆ ಕೊಟ್ಟ. ಅದರ ವಿಳಾಸದಾರಳು ತರಗತಿಯಲ್ಲಿದ್ದಳು. ಕವರಿನ ವಿಳಾಸವನ್ನು ಗಟ್ಟಿಯಾಗಿ ಉಪಾಧ್ಯಾಯರು ಓದಿ ಹೇಳಿದಾಗ ಆಕೆ ತಲೆತಗ್ಗಿಸಿಕೊಂಡು ಕುಳಿತುಬಿಟ್ಟಳು. ಎದ್ದುನಿಂತು ತೆಗೆದುಕೊಂಡಿದ್ದರೆ ಯಾವ ಪಂಚಾಯಿತಿಯೂ ಆಗುತ್ತಿರಲಿಲ್ಲ. ಆದರೆ ಅವಳು ಹಾಗೆ ಮಾಡಲಿಲ್ಲ. ಕಾಗದ ನೋಡಿದಕೂಡಲೇ ಯಾವನೋ ಹುಡುಗನ ಕಾಗದವೆಂದು ಗೊತ್ತಾಯಿತು. ಅದು ‘ ನಾಟ್ ಪೈಡ್ ಲೆಟರ್ ’ ಬೇರೆ ! ಹುಡುಗಿ ಹಣಕೊಟ್ಟು ಕಾಗದ ತೆಗೆದುಕೊಳ್ಳಬೇಕಾಗುತ್ತಿತ್ತು. ಹಾಗೆ ಮಾಡಿದರೆ ತನಗೆ ಮಾನಕ್ಕೆ ಕುಂದು ಎಂದುಕೊಂಡು ಆಕೆ ಕೂತಲ್ಲಿಂದ ಕದಲಲಿಲ್ಲ. ಅಂಚೆಯವನು ವಿಳಾಸದಾರರು ಕಾಗದ ತೆಗೆದುಕೊಳ್ಳದಿರುವುದನ್ನು

ಕಂಡು, ಬಹುಶಃ ಅವರು ಬಂದಿಲ್ಲವೆಂದು ಕಾಗದದೊಂದಿಗೆ ಹಿಂತಿರುಗಿದ. ಅವನು ಹಿಂತಿರುಗುತ್ತಿದ್ದಂತೆ ತರಗತಿಯಲ್ಲಿ 'ಜೋಕ್' ಎಂದು ನಗುವಿನ ತರಂಗವೆದ್ದಿತು. ಅಂಜಿಯುವನು ಹಿಂತಿರುಗಿ ನೋಡಿದ. ಕೆಲವು ವಿದ್ಯಾರ್ಥಿಗಳು 'ಆಕೆ ಬಂದಿದ್ದಾಳೆ' ಎಂದು ಸಂಜ್ಞೆ ಮಾಡಿ ತಿಳಿಸಿದರು. 'ಇರಲಿ' ಎಂದು ಕೊಂಡು ಅವನು ಅಲ್ಲಿಂದ ಹೊರಬಿದ್ದ. ಉಪಾಧ್ಯಾಯರು ಹಾಜರಿ ತೆಗೆದು ಕೊಳ್ಳುತ್ತಿದ್ದಾಗ ಆ ಹುಡುಗಿಯ ಹೆಸರನ್ನು ಕೂಗಿದಾಗ ಅಂಜಿಯುವನು ಹೊರಗೆ ಹೊಂಚು ಹಾಕಿ ಕಾದಿದ್ದವನು ಕಾಗದದೊಂದಿಗೆ ಒಳಗೆ ಧಾವಿಸಿದ (ಬರೆದವರು ಅವನನ್ನು ಲಂಚ ತಿನ್ನಿಸಿ ತಮ್ಮವನನ್ನಾಗಿ ಮಾಡಿಕೊಂಡಿದ್ದರೆಂದು ತೋರುತ್ತದೆ). ಈಗ ಹುಡುಗಿಗೆ ಏನು ಮಾಡಲೂ ತೋಚಲಿಲ್ಲ. ತೆಗೆದು ಕೊಳ್ಳಬೇಕೇ, ಬಿಡಬೇಕೇ ಎನ್ನುವುದು ಸಮಸ್ಯೆಯಾಯಿತು. ಅಂತೂ ಕಾಗದದ ವಿಳಾಸದಾರಳು ಇಂತಹವಳೇ ಎಂಬುದು ಈಗ ಪತ್ತೆಯಾಗಿತ್ತು. ಈಗ ಮೌನವಹಿಸುವಂತಿಲ್ಲ! ಉಪಾಧ್ಯಾಯರು ಬೇರೆ, ಕಾಗದ ತೆಗೆದು ಕೊಳ್ಳಲು ಅವಳಿಗೆ ಉಪ್ಪೋದ್ಬಲ ಮಾಡಿದರು. ಇಂತಹ ಹೊತ್ತಿನಲ್ಲಿ ಏನು ಮಾಡಬೇಕು?

ತರಗತಿಯು ತುಂಬಾ ಗದ್ದಲ. ಹುಡುಗರ ಮಾತು ಹಾಗಿರಲಿ, ಹುಡುಗಿಯರೇ ಅವಳನ್ನು ದಿಟ್ಟಿಸಿನೋಡುತ್ತಾ ಗುಸುಗುಸನೆ ನಗುತ್ತಿದ್ದರು. ಬಾಯಿಗೆ ಬಂದಂತೆ ಆಡಿಕೊಳ್ಳುತ್ತಿದ್ದರು. ಇಷ್ಟೊಂದು ಮಂದಿ ಎದುರಿನಲ್ಲಿ ತನಗೆ ಇಂತಹ ಅವಮಾನವಾಗಬೇಕೆ? —ಎಂದು ಆ ಹುಡುಗಿಯ ಕಣ್ಣಿನಲ್ಲಿ ನೀರು ಬಂತು. ತಲೆತಗ್ಗಿಸಿ ಗಳಗಳನೆ ಅತ್ತುಬಿಟ್ಟಳು. ಅಂಜಿಯುವನು ಈಗ 'ರೋಫ್' ಹಾಕಿದ. 'ಕಾಗದ ತನಗೆ ಬೇಕಿಲ್ಲ ಎಂದರೆ ಹೊರಟು ಹೋಗುತ್ತೇನೆ. ಇದು ಯಾತರ ಪಂಚಾಯಿತಿ – ಬೇಕು ಬೇಡ ಅಂತ ಹೇಳದೆ' —ಎಂದು ಗೊಣಗಿದ ಆಗ ಉಪಾಧ್ಯಾಯರೇ ಮಧ್ಯಸ್ಥಿಕೆ ಮಾಡಿ ಆ ಕಾಗದ ಅವಳಿಗೆ 'ಬೇಕಿಲ್ಲ' ಎಂದು ಹೇಳಿ ಅಂಜಿಯುವನನ್ನು ಕಳುಹಿಸಿಕೊಟ್ಟರು. ಅಂದೆಲ್ಲಾ ಆ ಹುಡುಗಿ ಇನ್ನೊಬ್ಬರೊಂದಿಗೆ ತಲೆಯೆತ್ತಿ ಮಾತನಾಡಲಿಲ್ಲ. ಅಷ್ಟೊಂದು ಅವಮಾನವಾಗಿತ್ತು.

ಈ ಘಟನೆ ಅಪ್ರೊಡೈಟಿಯ ಕಣ್ಣೆದುರಿನಲ್ಲೇ ನಡೆದಿತ್ತು. ನಾನು ಆಕೆಗೆ ಪತ್ರ ಬರೆದರೆ ಹಿಂದೆ ಬರೆದಿದ್ದ ಅನಾಮಧೇಯ ಪತ್ರದ ಕರ್ತೃವೂ

ನಾನೆಂದು ತರಗತಿಯಲ್ಲಿ ಮುಖಕ್ಕೆ ಮಸಿಬಳಿದರೆ! ನನ್ನ ಕಾಗದವನ್ನು ನನ್ನ ಮುಖಕ್ಕೆಸೆದು ಧಿಕ್ಕರಿಸಿ ಮಾತನಾಡಿಬಿಟ್ಟರೆ?....ನಾನು ಭೂಗತನಾಗುತ್ತಿದ್ದೆ. ಅಂತಹ ಅವಮಾನವಾಗುವ ಬದಲು ಸಾವೇ ಮೇಲು.......

ಹಾಗಾದರೆ ನನ್ನ ಮನಸ್ಸಿನ ಆಶಯವನ್ನು ಆಕೆಗೆ ತಿಳಿಸುವ ಬಗೆ? ಇದು ತುಂಬಾ ಸೂಕ್ಷ್ಮತರವಾದ ಉದ್ಯಮ. ಆಕೆಯನ್ನು ಕಂಡು ಮಾತನಾಡಿಬಿಡುವುದೇ ಒಳ್ಳೆಯದು.

ಆದರೆ 'ಆಕೆ' ಒಂಟಿಯಾಗಿ ಸಿಗಬೇಕಲ್ಲ! 'ಆಕೆ' ಸದಾ ಯಾರ ಜತೆಗಾದರೂ ಇರುತ್ತಾಳೆ. ಅಲ್ಲದೆ ಇಂತಹ ವಿಷಯಗಳನ್ನು ಹಠಾತ್ತಾಗಿ ಪ್ರಸ್ತಾಪಿಸಲು ತೊಡಗಿದಾಗ ಬಾಯಿ ಕಟ್ಟಿದರೆ ಗತಿ? ಹೇಳಬೇಕೆಂದಿರುವ ವಿಷಯಗಳು ಒಂದು, ಹೇಳುವ ವಿಷಯ ಮತ್ತೊಂದು ಹೀಗೆ ಆಗಿಬಿಟ್ಟರೆ! ಮೊದಲನೆಯ ಬಾರಿ ಕಂಡು ಮಾತನಾಡುವಾಗ ಆಕೆಗೆ ಗಾಬರಿಯಲ್ಲಿ ಏನೇನೋ ಹೇಳಿಬಿಡಬಹುದು. ನನ್ನ ಹರುಕುಮುರುಕು ಮಾತುಗಳಿಂದ ನಾನಪೇಕ್ಷಿಸುವ ಪರಿಣಾಮವಾಗದೆ, ಅದರ ವಿರುದ್ಧ ಪರಿಣಾಮ ಉಂಟಾಗುವುದೂ ಹೆಚ್ಚಲ್ಲ.

ನನಗೋ! ಹರೆಯದ ಹುಡುಗಿಯರೊಂದಿಗೆ ಮಾತನಾಡಿ ರೂಢಿ ಇಲ್ಲ. ಅದರಲ್ಲೂ ಇಂತಹ ವಿಷಯಗಳನ್ನು ನಾನು ಗಂಡಸರೊಂದಿಗೇ ಬಿಚ್ಚು ಮನಸ್ಸಿನಿಂದ ಮಾತನಾಡಿದ್ದಿಲ್ಲ. ಹೀಗಿರುವಲ್ಲಿ ಹುಡುಗಿಯೊಬ್ಬಳೊಂದಿಗೆ ಇಂತಹ ವಿಷಯಗಳನ್ನು ಚರ್ಚಿಸುವುದೆಂದರೆ – ಖಂಡಿತ ಅದು ನನ್ನಿಂದ ಆಗುವ ಕೆಲಸವಲ್ಲ! ಒಮ್ಮೆ ಆಕಾಶವಾಣಿಯ ಬಾನುಲಿಯಲ್ಲಿ ಭಾಷಣಮಾಡುವಾಗ ತರುಣಿಯೊಬ್ಬಳು 'ಅನೌನ್ಸ್' ಮಾಡಲು ನನ್ನೆದುರಿಗೆ ಕುಳಿತುಬಿಟ್ಟಳು. ಆ ಕೋಣೆಯಲ್ಲಿ ನಾವಿಬ್ಬರೇ ಇಬ್ಬರು. ಮೂರನೆಯ ವ್ಯಕ್ತಿ ಇಲ್ಲ. ಆ ಕೋಣೆಯ ಉಸಿರು ಕಟ್ಟಿಸುವ ಗಂಭೀರ ವಾತಾವರಣ, ತೀರಾ ಸಮೀಪದಲ್ಲಿ 'ಹೆಡ್ ಫೋನ್' ಹಾಕಿಕೊಂಡು ಕುಳಿತ ಆ ಹುಡುಗಿ – ನನಗೆ ಎಚ್ಚರ ತಪ್ಪುವಂತೆ ಆಯಿತು. ಭಾಷಣಮಾಡಲು ತೊಡಗಿದಾಗ ಧ್ವನಿಯೇ ಬದಲಾಗಿಬಿಟ್ಟಿತು—ಕೈಯಲ್ಲಿದ್ದ ಹಸ್ತಪ್ರತಿ ಕಂಪಿಸುತ್ತಿದೆ. ನನ್ನ ಅವಸ್ಥೆಯನ್ನು ನೋಡಿ ಸೂಕ್ಷ್ಮಮತಿಯಾದ ಆಕೆ, ನನ್ನೆದುರಿಗೆ ನಿಲ್ಲದೆ ಬೇರೆಕಡೆಗೆ ಹೋದುದರಿಂದ ನನ್ನ ಭಾಷಣ ಸರಾಗವಾಯಿತು.

ಹೀಗಿರುವಲ್ಲಿ ಯಾರನ್ನು ಹೃದಯಮಂದಿರದಲ್ಲಿ ಇಪ್ಪತ್ತು ತಿಂಗಳಿಂದಲೂ ಕೂಡಿಸಿ ಆರಾಧಿಸುತ್ತಿದ್ದೆನೋ ಆ ವ್ಯಕ್ತಿಯನ್ನು ಏಕಾಏಕಿ ಕಂಡು ಮಾತನಾಡುವುದಕ್ಕಿಂತಲೂ ಹೆಚ್ಚಿನ ಸಾಹಸಕೃತ್ಯ ಬೇಕಿಲ್ಲ. ರಕ್ತ ಹೆಪ್ಪುಗಟ್ಟುತ್ತದೆ– ಉಸಿರು ನಿಲ್ಲುತ್ತದೆ ಖಂಡಿತ! ಎಂದೆನಿಸಿತು.

ಹಾಗಾದರೆ ನನ್ನ ಭಾವನೆಗಳನ್ನು ಆಕೆಗೆ ತಿಳಿಸುವ ಬಗೆ ಹೇಗೆ? ಪತ್ರರಚನೆಯೇ ಯೋಗ್ಯದಾರಿ. ಪತ್ರವನ್ನು ಬರೆಯುವುದಾಗುತ್ತೆ. ಯಾರೂ ಇಲ್ಲದಾಗ ಕೊಡುವುದೂ ಆಗುತ್ತೆ. ಆದರೆ 'ಆಕೆ' ಪತ್ರವನ್ನು 'ಸೀರಿಯಸ್' ಆಗಿ ತೆಗೆದುಕೊಂಡು, ನನ್ನಲ್ಲಿ ಅಪಾರ್ಥವೆಸಗಿ ಕಾಗದವನ್ನು ಮುಖ್ಯೋಪಾಧ್ಯಾಯರಿಗೋ, ಹಾಸ್ಟಲಿನ ವಾರ್ಡನ್‌ರಿಗೋ ಕೊಟ್ಟರೆ! ನನಗೆ ಛೀಮಾರಿಯಾಗುವುದರ ಜತೆಗೆ ಕಾಲೇಜಿನಿಂದ ಹೊರಗಟ್ಟುತ್ತಾರೆ. ಅಲ್ಲಿಗೆ ನನ್ನ ಅವತಾರ ಪೂರೈಸುತ್ತೆ!

ಇದೇ ಗುಂಪಿಗೆ ಸೇರಿದ ಘಟನೆಯೊಂದು ಹಾಸ್ಟಲಿನ ವಾರ್ಡನ್‌ರವರ ತನಕ ಬಂದಿತ್ತು:

ಹಾಸ್ಟಲಿನ ನಿವಾಸಿಯೊಬ್ಬ – ಕಾಲೇಜಿಗೆ ಬರುತ್ತಿದ್ದ ಹುಡುಗಿಯೊಬ್ಬಳಲ್ಲಿ ಆಸಕ್ತಿಹೊಂದಿದ್ದ. ಅವಳ ಮುಂದೆ ತನ್ನ ಕಪಿಚೇಷ್ಟೆಯೆಲ್ಲಾ ಮಾಡುತ್ತಿದ್ದ. ಅವಳು ಯೋಗ್ಯರ ಮನೆಯ ಹುಡುಗಿ. ನೋಡುವಷ್ಟು ದಿನ ನೋಡಿ ಒಂದು ದಿನ ಅವನನ್ನು ಎದುರಿಸಿ ಬಾಯಿಗೆ ಬಂದಂತೆ ಬೈದು ಅವಮಾನಮಾಡಿಬಿಟ್ಟಳು. ಅವಮಾನಗೊಂಡ ವಿದ್ಯಾರ್ಥಿ ಅವಳ ಮೇಲೆ ಛಲ ಸಾಧಿಸಲು ನಿಶ್ಚಯಿಸಿದ. ಒಂದು ದಿನ ಕಾಲೇಜಿನಿಂದ ಮನೆಗೆ ಹೋಗಲು ಅವಳು ತನ್ನ ಗೆಳತಿಯೊಂದಿಗೆ ಹಾಸ್ಟಲಿನ ಬಳಿ ಬರುತ್ತಿದ್ದಳು. ಆಗ ಆ ವಿದ್ಯಾರ್ಥಿ ಆನೆಪಟಾಕಿ ಒಂದನ್ನು ಹೊತ್ತಿಸಿ ಅವಳ ಮುಂದೆ ಹಾಕಿಬಿಟ್ಟ. ಅದು ಭಯಂಕರ ಶಬ್ದಮಾಡಿಕೊಂಡು ಸಿಡಿಯಿತು. ಆ ಶಬ್ದಕ್ಕೆ ಅವಳು ಮೂರ್ಛೆ ಹೋಗುವಂತಾಯಿತು. ಅವಳ ಗೆಳತಿಯರು ಪಟಾಕಿ ಎಸೆದವನನ್ನೂ ಅವನು ಅವಿತುಕೊಂಡ ಕೋಣೆಯನ್ನೂ ಗುರುತಿಟ್ಟುಕೊಂಡು, ಮನೆಯ ಹಿರಿಯರ ಮೂಲಕ 'ವಾರ್ಡನ್'ರಿಗೆ ಬರೆಯಿಸಿದರು. ವಾರ್ಡನರು ಆ ವಿದ್ಯಾರ್ಥಿಯನ್ನು ಕರೆಯಿಸಿಕೊಂಡು ಚನ್ನಾಗಿ ಬೈದು, ಕ್ಷಮಾಪಣೆ

ಪತ್ರ ಬರೆಯಿಸಿಕೊಂಡರು. ಎಂಟು ದಿನ ಅವನು ಹಾಸ್ಟಲು ನಿವಾಸಿಗಳಿಗೆ ಮುಖ ತೋರಿಸಲಿಲ್ಲ.

ನನ್ನ ವಿಷಯದಲ್ಲಿಯೂ ಅಪ್ರೊಡೈಟಿ ಹಾಗೆ ಮಾಡಿಬಿಟ್ಟರೆ? ನಾನು ಹಾಸ್ಟಲು ಬಿಡಬೇಕಾಗುತ್ತೊ ಏನೋ........

ಆದರೆ ಅವನ್ನೆಲ್ಲಾ ನಿರ್ಲಕ್ಷಿಸಿ ಮುನ್ನುಗ್ಗುವ ಹುಚ್ಚು ಎದೆಗಾರಿಕೆ ನನಗೆ ಬಂದಿತ್ತು. ಗೆಳೆಯ ಶ್ರೀಕಾಂತನ್ ಹಾಗೂ ಭಾಗವತರ ಮಾತುಗಳು ನನ್ನಲ್ಲಿ ಸ್ವಾಭಾವಿಕವಾಗಿ ಇಲ್ಲದಿದ್ದ ಗುಂಡಿಗೆಯನ್ನು ಕೊಟ್ಟಿತ್ತು. ಬೇಸತ್ತ ನಾನು ಯಾವ ಸಾಹಸಕ್ಕೂ ಹೇಸುತ್ತಿರಲಿಲ್ಲ. ಏನೇ ಆಗಲಿ ಕಾಗದ ಬರೆದು ಆಕೆಗೆ ಕೊಟ್ಟು ಬರಲೇಬೇಕೆಂದು ತೀರ್ಮಾನಿಸಿದೆ. 'ಅಪ್ರೊಡೈಟಿ ಎಲ್ಲ ಹುಡುಗಿಯರಂತಲ್ಲ. ನನ್ನನ್ನು ಬಯಲಿಗೆಳೆದು ಅವಮಾನಮಾಡುವ ಹುಡುಗಿಯಲ್ಲ' ಎಂದು ಒಳಗಿನ ಧ್ವನಿಯೊಂದು ಪಿಸುಗುಟ್ಟುತ್ತಿತ್ತು. ಆ ಧ್ವನಿಯನ್ನು ನಂಬಿ ಕೆಲಸಕ್ಕೆ ಕೈ ಹಚ್ಚಿದೆ.

ರಾತ್ರಿಯೆಲ್ಲಾ ನನ್ನ ಕೊಠಡಿಯಲ್ಲಿ ದೀಪ ಉರಿಯುತ್ತಿತ್ತು. ನೋಡಿದವರಿಗೆ ನಾನು ರಾತ್ರಿಯೆಲ್ಲಾ ಓದುತ್ತಿರುವೆನೆಂಬ ಭ್ರಮೆ. ಆದರೆ ನಾನು ಪೆನ್‌ಸಿಲ್ ಮತ್ತು ಕಾಗದ ಮುಂದಿಟ್ಟುಕೊಂಡು ಪತ್ರರಚನೆಯಲ್ಲಿ ತೊಡಗಿದ್ದೆ.

ಪ್ರಣಯಪತ್ರರಚನೆ ನಾನು ಎಣಿಸಿದ್ದಷ್ಟು ಸುಲಭದ ಕೆಲಸವಾಗಲಿಲ್ಲ. ಒಂದು ಮಾತು ಬರೆಯುವುದು, ಅದು ಸರಿಯಲ್ಲವೆಂದು ಹೊಡೆಯುವುದು – ಹೀಗೆಯೇ ಸಾಗಿತ್ತು. ನಾನು ಎಂದೂ ಯಾರನ್ನೂ ಪ್ರೇಮಿಸಿರಲಿಲ್ಲ. ಯಾರಿಗೂ ಪ್ರಣಯಪತ್ರ ಬರೆದಿರಲಿಲ್ಲ. ಅಚ್ಚಾಗಿದ್ದ ಪ್ರಣಯಪತ್ರ ಸಾಹಿತ್ಯವನ್ನು ಓದಿಕೊಂಡು ಆನಂದಿಸಿದ್ದೆ. ಅಂತಹ ಒಂದು ಪತ್ರವನ್ನು ನಾನು ಬರೆಯಬೇಕಾದ ಸಂದರ್ಭ ಬರಬಹುದೆಂದು ಎಣಿಸಿರಲಿಲ್ಲ. ಈಗ ನಾನೂ ಒಂದು ಪ್ರಣಯಪತ್ರವನ್ನು ಅಪ್ರೊಡೈಟಿಗೆ ಬರೆಯಲೇ ಬೇಕಾಗಿತ್ತು. ಬರೆದೆ.

ಇಂಗ್ಲೀಷಿನಲ್ಲಿದ್ದ ಆ ಪತ್ರದ ಅನುವಾದ ಇದು :

ಶ್ರೀಮತಿ—ಅವರ ಪೋಷಕರಿಗೆ,

ಮಾನ್ಯರೇ,

ಪರಿಚಯವಿಲ್ಲದವರಿಗೆ, ಇಂತಹ ಸೂಕ್ಷ್ಮತರ ಹಾಗೂ ಗಹನ ವಿಷಯಗಳನ್ನು ಈ ಬಗೆಯಾಗಿ ಬರೆಯುವುದು ತುಂಬಾ ನಗೆಗೇಡು ಮಾತ್ರವಲ್ಲ, ಅಮರ್ಯಾದೆಯೆಂದೆನಿಸಿಕೊಳ್ಳುತ್ತದೆ. ಇದನ್ನು ನಾನು ಚೆನ್ನಾಗಿ ಬಲ್ಲೆ. ಆದರೆ ನಾನೇನು ಮಾಡಲಿ ! ಇಂತಹ ಒರಟು ರೀತಿಯಲ್ಲಿ ತಿಳಿಸದ ಹೊರತು ನನಗೆ ಬೇರೆ ಮಾರ್ಗ ಕಾಣಿಸದು – ಅಂತಹದು ನನ್ನ ಸಮಸ್ಯೆ – ಈಗ ಹಲವಾರು ದಿನಗಳಿಂದ ನನ್ನ ಮನಶ್ಶಾಂತಿಯನ್ನು ಹುರಿದು ಮುಕ್ಕುತ್ತಿರುವ ಸಮಸ್ಯೆ ! ಇದನ್ನು ಪತ್ರದ ಮೂಲಕವಲ್ಲದೆ ಹೇಗೆ ತಾನೇ ತೋಡಿಕೊಳ್ಳಲಿ ? ........ನಿಮ್ಮ ವಿಷಯಗಳೊಂದೂ ನನಗೆ ತಿಳಿಯದು. ನಿಮ್ಮ ಹೆಸರು, ವಾಸ, ಕುಲಗೋತ್ರಗಳೊಂದೂ ನನಗೆ ಗೊತ್ತಿಲ್ಲ. ಆದರೂ ಎಂತಹ ಹುಚ್ಚು ಕೆಲಸಕ್ಕೆ ಕೈಹಚ್ಚಿದ್ದೇನೆ ನಾನು ? ........ಈ ಪತ್ರದ ಮುಖೇನವಾದರೂ ಈ ಬಗ್ಗೆ ಕೊಂಚವಾದರೂ ತಿಳಿದೀತೆಂದು ನನ್ನ ಆಸೆ ! ....ನನ್ನ ಹುಚ್ಚು ಪ್ರಯತ್ನ ! ಆದುದರಿಂದ ನೀವು ದಯವಿಟ್ಟು ಈ ಪತ್ರವನ್ನು ಯಾವನೋ ಮೂರ್ಖ, ಅಸಂಯಮ, ತಲೆಹರಟೆ ಕಾಲೇಜು ವಿದ್ಯಾರ್ಥಿ – ಹುಚ್ಚು ಪ್ರಣಯವನ್ನು ಹರಿಸಿ ಬರೆದಿದಾನೆಂದು ಭಾವಿಸಿ, ಇಲ್ಲದ ವಾಸನೆಯನ್ನು ಹುಡುಕಬಾರದೆಂದು ನಿಮ್ಮಲ್ಲಿ ನನ್ನ ನಮ್ರ ವಿನಂತಿ........

ನಾನು ನಿಮ್ಮ ಹುಡುಗಿಯನ್ನು ಕಾಲೇಜಿನಲ್ಲಿ ಕಂಡದಿನವೇ ಆಕೆಯ ಅಂತರಂಗ, ಬಹಿರಂಗ ಚೆಲುವಿಗೆ ಮಾರುಹೋದೆ. ಆಕೆಯ ಸೌಂದರ್ಯ ನನ್ನನ್ನು ಮೋಹಗೊಳಿಸಿದ್ದರೆ, ಆಕೆಯ ಹಸುಗೂಸಿನ ಮುಗ್ಧನೋಟ ನನ್ನನ್ನು ಬೆರಗುಗೊಳಿಸಿದೆ. ಕಾಲೇಜಿನಲ್ಲಿ ಆಕೆಯ ನಡೆನುಡಿಯನ್ನು ಕಂಡಮೇಲಂತೂ ಆಕೆಯ ಬಗ್ಗೆ ತುಂಬಾ ಅಭಿಮಾನ, ಗೌರವ ತಳೆದೆ. ಆಕೆಯ ಬಗ್ಗೆ ನನ್ನ ಈ ಭಾವನೆಗಳನ್ನು ನಾನು ಈವರೆವಿಗೂ ರೂಪಾರಾಧನೆಯೆಂದು ತಿಳಿದಿದ್ದೆ. ಆದರೆ ಈಗಲೀಗ ಅದು ರೂಪಾರಾಧನೆಗೂ ಮೀರಿದ ಭಾವ-ಅನುರಾಗವೆಂದು ಕಂಡುಕೊಂಡೆ. ಈಗ ಆಕೆಯ ಹೆಸರೆತ್ತಿದೊಡನೆಯೇ ಮೈ ರೋಮಾಂಚಗೊಳ್ಳುತ್ತದೆ. ಆಕೆಯನ್ನು ದೂರಮಾತ್ರದಿಂದ ಕಂಡೊಡನೆಯೇ ಎಂಥಹದೋ

ಸ್ವರ್ಗಸುಖದಲ್ಲಿ ಮುಳುಗೆದ್ದ ಅನುಭವವಾಗುತ್ತದೆ. ಈ ಅನುಭವ-ಭಾವೊ
ನ್ಮಾದ-ನನಗೆ ಇದುವರೆವಿಗೆ ಆಗದಿದ್ದ ಅನುಭವ-ತೀರಾ ಹೊಸದು.

ನಾನೇನುಮಾಡಲಿ?

ನನ್ನ ಈ ಬಗೆಯ ವರ್ತನೆಗೆ ನೀವು ಪುಷ್ಟಿಕೊಡುವಿರಾ? ಅಥವ
ಅದನ್ನು ಬೇರುಸಹಿತ ಕಿತ್ತಿಸೆಯುವಿರಾ?

ನಿಮ್ಮ ಹುಡುಗಿಯ ನೋಟ, ಹಾವಭಾವಗಳಿಂದ ಆಕೆ ಇನ್ನೂ ಮದು
ವೆಯಾಗದ ಕನ್ಯೆ, ನಮ್ಮ ಕುಲಗೋತ್ರದ ಹೆಣ್ಣು-ಎಂದು ಊಹಿಸಿ ತಿಳಿದು
ಕೊಂಡಿದ್ದೇನೆ....

ಆಕೆಯ ಕೈ ಹಿಡಿಯಲು ನನ್ನ ಸ್ವವಿಷಯ ಹಾಗೂ ಅರ್ಹತೆಗಳು ಇವು

ಹೆಸರು :—ಮೂರ್ತಿ

ವಯಸ್ಸು:—ಸುಮಾರು ಇಪ್ಪತ್ತೊಂರು.

ಆಕಾರ:—ನೋಡಲು ಲಕ್ಷಣವಂತ, ದೃಢಕಾಯ.

ತಂದೆ:—ರಾಯರು.

ಸ್ಥಿತಿಗತಿ:—ಜಮೀನುದಾರರು. ಮುನ್ನೂರು ರೂಪಾಯಿ ಕಂದಾಯಕೊಡು
ಮಧ್ಯಮವರ್ಗದ ಜೀವನ.

ಕುಲಗೋತ್ರ:—ಮಾಧ್ವ ಬ್ರಾಹ್ಮಣರು.

ಅಭಿರುಚಿ:—ಸಾಹಿತ್ಯಾಭ್ಯಾಸಿ. 'ವಿಜಯಯಾತ್ರೆ'-, 'ಕಾಮನಬಿಲ್ಲು' ಎಂ
ಎರಡು ಕಾದಂಬರಿಗಳ ಕರ್ತೃ. ಅವು ಪ್ರಕಟಣೆಯ ದಾರಿಕಾಯುತ್ತಿವೆ

ಸ್ವವಿಷಯ:—ನಾನು ತಂದೆತಾಯಿಗಳ ಹಿರಿಯ ಕುವರ. ಮುಂದಿನ ಚೈತ್ರ
ಮಾಸದಲ್ಲಿ ಮದುವೆಮಾಡುವ ಸನ್ನಾಹ ನಡೆದಿದೆ. ಈಗಾಗಲೇ ಅನೇ
ಗಣ್ಯವ್ಯಕ್ತಿಗಳು ಹೆಣ್ಣುಕೊಡಲು ಮುಂದೆ ಬಂದಿದ್ದರು. ಆದರೆ ನನ
ಪೂರ್ಣ ವಿದ್ಯಾವತಿಯೂ, ಕುಲೀನಳೂ, ಸುಸಂಸ್ಕೃತಳೂ ಆದ ಹುಡು
ಗಿಯನ್ನು ಬಾಳಿನ ಜತೆಗಾತಿಯನ್ನಾಗಿ ಪಡೆಯಲು ಆಸೆ. ಈ ಎಲ್ಲಾ
ಅರ್ಹತೆಗಳು ನಿಮ್ಮ ಮಗಳಲ್ಲಿ ನಾನು ಕಂಡುಕೊಂಡಿದ್ದೇನೆ.

[ಮತ್ತೊಂದು ವಿಷಯ. ನನ್ನ ಕಲ್ಪನಾ ಸುಂದರಿಯಾದ ತಾರಿಣಿಯ-ವಿಜಯ
ಯಾತ್ರೆಯ ನಾಯಕಿ-ಚಿತ್ರಣದ ಕೆಲವಂಶವನ್ನು ನಿಮ್ಮ ಹುಡುಗಿಯಲ್ಲಿ ಕಂಡು
ಕೊಂಡಿದ್ದೇನೆ. ಹೀಗಾಗಿ ನನ್ನ ಒಲುವಿನ ಸೆಳೆತ.]

ನಮ್ಮಿಬ್ಬರ ವಿವಾಹಕ್ಕೆ ನೀವು ಸಮ್ಮತಿಸುವಿರಾ ? ಈ ವಿವಾಹವಾದರೆ ಜೀವತೆಗಳೂ ಕರುಬುವ ಆದರ್ಶಜೋಡಿ ನಮ್ಮದಾಗುವುದು.

ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ? ನಿಮ್ಮ ಯಾವ ನಿರ್ಧಾರಕ್ಕೂ ನಿಮ್ಮ ಮಗಳ ಅಭಿಪ್ರಾಯ ಮುಖ್ಯವಾದುದು. ಆಕೆಯನ್ನು ಈ ವಿಷಯದಲ್ಲಿ ಕೇಳಿ ತಿಳಿದುಕೊಂಡು, ಪತ್ರಮುಖೇನವಾಗಲೀ, ನೀವೇ ಸ್ವತಃ ಕಂಡಾದರೂ ಸರಿಯೇ-ತಿಳಿಸಿದರೆ ಸರಿ !

ನೀವು ಈ ವಿಷಯವನ್ನು ಕೂಲಂಕಷವಾಗಿ, ಎಚ್ಚರವಾಗಿ, ಪೂರ್ವಾಭಿಪ್ರಾಯಕ್ಕೆ ಅವಕಾಶಕೊಡದೆ, ಆಲೋಚಿಸುತ್ತೀರೆಂದು ನಂಬಿಕೆ ನನಗಿದೆ. ಪ್ರಸಂಗವಶಾತ್ ನಮ್ಮಿಬ್ಬರ ಸಂಬಂಧ ನಡೆಸಿಕೊಡಲು ನೀವು ಅಸಮರ್ಥರಾದರೆ ಇದರಿಂದ ನನಗೇನೋ ತುಂಬಾ ನಿರಾಸೆಯುಂಟಾಗುತ್ತದೆ. ಆದರೆ ಇದರಿಂದ ಆಗುವ ಹೆಚ್ಚಿನ ನಷ್ಟ ನಿಮಗೇ ಹೊರತು ನನಗಲ್ಲ !....ನೀವು ಅನುಭವಿಗಳು, ಹಿರಿಯರು, ಯಾವುದನ್ನೂ ತೂಕವಾಗಿ ವಿಚಾರಿಸುತ್ತೀರಿ, ವಾಸ್ತವಿಕ ವಿಷಯಗಳನ್ನು ನಿರ್ಲಕ್ಷಿಸದೆ ದುಡುಕದೆ ಆಲೋಚಿಸುವಿರೆಂದು ಬಗೆದಿದ್ದೇನೆ. ಈಗಿನ ದಿನಗಳಲ್ಲಿ ಪೂರ್ಣ ವಿದ್ಯಾವತಿಯರಾದ ಹುಡುಗಿಯರಿಗೆ ವರ ಸಿಕ್ಕುವುದು ಎಷ್ಟು ಕಠಿಣವೆಂದು ನಿಮಗೇ ಗೊತ್ತಿರುವಾಗ ನಾನು ಹೆಚ್ಚಿಗೆ ಹೇಳಬೇಕಿಲ್ಲ. ಯಾವುದಕ್ಕೂ ತಡಮಾಡದೆ ಉತ್ತರಕೊಡಿ.

ನನ್ನ ವಿಳಾಸ :—ಮೂರ್ತಿ, ಇಂತು ನಿಮ್ಮವ
ಕಾಲೇಜು ಹಾಸ್ಟಲ್ ಮೂರ್ತಿ

ಕಾಗದವನ್ನೇನೋ ಬರೆದು ಮುಗಿಸಿದೆ. ಅದನ್ನು ತಲುಪಿಸುವ ಬಗ್ಗೆ ದೀರ್ಘವಾಗಿ ಯೋಚಿಸಿದೆ. ಕಡೆಗೆ ಆಕೆಯನ್ನು ಕಾಲೇಜು ಬಿಟ್ಟೊಡನೆಯೇ ಯಾರೂ ಕಾಣದ ಸ್ಥಳದಲ್ಲಿ ಕಂಡು, ಮಾತಿಲ್ಲದೆ ಕೊಟ್ಟು ಬರಬೇಕೆಂದು ನಿಶ್ಚಯಿಸಿದೆ.

ಅಂದು ಕಾಲೇಜಿಗೆ 'ಆಕೆ' ಬಂದಾಗ ಶ್ರೀಕಾಂತನ್ ಅನ್ನುವಂತೆ 'ಷಿ ವಾಸ್ ಅಟ್ ಹರ್ ಬೆಸ್ಟ್'. 'ಆಕೆ' ಸೊಗಸಾದ ರೇಷ್ಮೆ ಸೀರೆಯೊಂದನ್ನು ಉಟ್ಟು ಬಂದಿದ್ದಳು. ದಿನಾಗಲೂ ಆಕೆಗೆ ಮೂರನೆಯ 'ಪಿರೀಡ್' ವಿರಾಮವಿರುತ್ತಿತ್ತು. ಆಗ ಆಕೆಗೆ ಪತ್ರಕೊಡಲು ನೋಡಿದೆ. ಆಕೆ ಸಿಗಲಿಲ್ಲ. ಒಮ್ಮೆ

'ಕಾರಿಡಾರ್'ನಲ್ಲಿ ಸಿಕ್ಕರೂ ಆಕೆಗೆ ಅದನ್ನು ಕೊಡುವ ಧೈರ್ಯ ಬರಲಿಲ್ಲ— ಇಷ್ಟೊಂದು ಜನ ವಿದ್ಯಾರ್ಥಿಗಳ ಮಧ್ಯೆ........!

ಸಂಜೆ ನಾಲ್ಕೂವರೆ ತನಕ ಆಕೆಗೆ ತರಗತಿಯಿತ್ತು. ನನಗೆ ಆ ಗಂಟೆಯಲ್ಲಿ ವಿರಾಮ. ನಾನು ಕಾಲೇಜು ಮುಗಿಸಿ, ರೂಂಗೆ ಬಂದು ಬಟ್ಟೆ ಬದಲಿಸಿ, ಶ್ರೀರಾಮಕೃಷ್ಣರಿಗೆ ವಂದಿಸಿ, ಹೊರಬಿದ್ದೆ. ನನ್ನ ಕೆಲಸಕ್ಕೆ ವಿಘ್ನಕಾರಿಯಾಗುವ ಗೆಳೆಯರನ್ನು ಮಾತನಾಡಿಸಲು ಹೋಗಲಿಲ್ಲ.

ಕಾಲೇಜಿನ ಗಂಟೆ ಬಾರಿಸಿತು. ಅಪ್ರೊಡೈಟ ಮನೆಯ ಮುಖಮಾಡಿ ಹೊರಟಳು. ಆಕೆಯನ್ನು ಹಿಂಬಾಲಿಸಿ ಹೋಗಲು ನನಗೆ ಸಂಕೋಚವೆನಿಸಿತು. ನಾನು ಬೇರೆ ದಾರಿಯನ್ನು ಹಿಡಿದು 'ಆಕೆ' ಸಾಮಾನ್ಯವಾಗಿ ಸಿಗುತ್ತಿದ್ದ ತಿರುವಿನಲ್ಲಿ ಹೋಗಿ ನಿಂತುಕೊಂಡೆ.

ನನ್ನ ಸುದೈವ. 'ಆಕೆ' ಇಂದು ಒಂಟಿಯಾಗಿ ಲಗುಬಗಿಯಿಂದ ಬರುತ್ತಿದ್ದಳು. ಆಕೆಯನ್ನು ಕಂಡೊಡನೆಯೇ ನನ್ನ ಧೈರ್ಯವೆಲ್ಲಾ ಹಾರಿ ಹೋಯಿತು. ಕಾಗದ ಕೊಡಲು ಕೈಯೇ ಬರಲಿಲ್ಲ. ಕೊಡುವುದು ಬೇಡ. ನೇರ ಹೊರಟುಹೋಗಿಬಿಡೋಣವೆಂದುಕೊಂಡೆ. ಆದರೆ ನನ್ನ ಭಾವನೆಗಳನ್ನು ಆಕೆಗೆ ತಿಳಿಸಲೇಬೇಕಾಗಿತ್ತು. ಕಾಗದ ಕೊಡಲು ಧೈರ್ಯವಿಲ್ಲ. ಕೊಡದಿರಲು ಮನಸ್ಸಿಲ್ಲ. ನಾನು ಈ ಪೀಕಲಾಟದಲ್ಲಿ ಬಿದ್ದಿರುವಾಗ ಅಪ್ರೊಡೈಟ ಎದುರಿಗೇ ಬಂದುಬಿಟ್ಟಳು. ಏನು ಮಾಡಬೇಕು ?

ಅಪ್ರೊಡೈಟ ನನ್ನನ್ನು ದೂರದಿಂದಲೇ ಕಂಡು, ಪರಿಚಯದ - ಮುಗುಳ್ನಗೆಯನ್ನು ಬೀರಿದಳು. ನನಗೆ ಅಷ್ಟೇ ಸಾಕಾಯಿತು - ಹುರುದುಂಬಿಸಲು. ನಾನು ಆಕೆಯ ಬಳಿಗೆ ಹೋಗಿ "ನಿಮಗೊಂದು ಪತ್ರವಿದೆ" ಎಂದು ಕಾಗದ ಕೈಗಿತ್ತೆ.

ಆಕೆ ಮುಗುಳುನಗೆ ನಗುತ್ತಲೇ ಕೇಳಿದಳು "ಯಾವುದು ಈ ಪತ್ರ ?" ನನಗೆ ವಿವರಣೆ ಕೊಡುವಷ್ಟು ವ್ಯವಧಾನವಿಲ್ಲ. ಮೈ ಬೆವರಿತು, ಬಾಯಿ ತೊದಲಿತು — 'ನೀವು ನೋಡಿಕೊಳ್ಳಿ' ಎಂದುಬಿಟ್ಟು, ಅಲ್ಲಿ ನಿಲ್ಲದೆ ಬಿರುಗಾಳಿಯ ವೇಗದಲ್ಲಿ ನಡೆದುಬಿಟ್ಟೆ. ಯಾರಾದರೂ ಕಂಡಾರೆಂದು, ಹೆದರಿ ತಲೆ ತಗ್ಗಿಸಿ, ಅಲ್ಲಿಂದ ಮಾಯವಾದೆ.

ಕವರಿನ ಮೇಲೆ ಇಂಗ್ಲೀಷಿನಲ್ಲಿ ಹೀಗೆಂದು ಬರೆದಿದ್ದೆ.

" ಶ್ರೀಮತಿ (ತಾರಿಣಿಗೆ),

ಈ ಕಾಗದ ನಿಮಗೆ ಅಸಂಬದ್ಧಪ್ರಲಾಪವೆನಿಸಿದರೆ ದಯವಿಟ್ಟು ಇದನ್ನು ಬೆಂಕಿಯಪಾಲು ಮಾಡಿ."

ಆಕೆ ಅದನ್ನು ಓದಿಕೊಂಡು ಕಿಲಕಿಲನೆ ನಕ್ಕಂತೆ ನನಗೆ ಭಾಸವಾಯಿತು.

ನನಗೆ ಹಾಸ್ಟಲು ತಲುಪಿ ಹಾಸಿಗೆಯ ಮೇಲೆ ಹೊರಳುವವರೆಗೂ ಉದ್ವೇಗದಿಂದ ಎದೆ ಒಂದೇ ಸಮನೆ ಹೊಡೆದುಕೊಳ್ಳುತ್ತಿತ್ತು. ಎಂತಹದೋ ಅದುಮಿ ಹಿಡಿಯಲಾಗದ ಸಂತೋಷ; ಹಿಗ್ಗು. ಎಲ್ಲವೂ ಕನಸಿನಲ್ಲಿ ನಡೆದು ಹೋದಂತೆ, ನನಗೆ ಅನಿಸಿತು. ಆದರೆ ನಾನು ಎಚ್ಚರದ ಸ್ಥಿತಿಯಲ್ಲೇ ಆಕೆಗೆ ಪತ್ರ ಮುಟ್ಟಿಸಿ ಬಂದಿದ್ದೆ. ಇದು ದಿಟ! ಆದರೆ ಇಷ್ಟೊಂದು ಕೆಚ್ಚು ನನಗೆಲ್ಲಿಂದ ಬಂದಿತ್ತು? ನನಗೇ ಆಶ್ಚರ್ಯವಾಯಿತು—ನನ್ನ ಕೃತ್ಯವನ್ನು ನೆನೆದು.

ಸಾಯಂಕಾಲದಲ್ಲಿ ನಾನಿದ್ದ ಹುಚ್ಚು ಸಂತೋಷ ಗೆಳೆಯರನ್ನು ವಿಸ್ಮಯ ಗೊಳಿಸಿತು. ಅಂದು ಅವರಿಗೆ ಬಯಸಿದ ತಿಂಡಿಕೊಡಿಸಿದೆ – ಅನಂತರ ಅರಮನೆಯ ಮುಂದಿನ ಬಯಲಿನಲ್ಲಿ ಕುಳಿತು ಅಂದಿನ ನನ್ನ ಸಾಹಸಕೃತ್ಯ ವನ್ನು ವರ್ಣಿಸಿದೆ—

ನನ್ನ ಕಥೆಯನ್ನು ಕೇಳಿ ಗೆಳೆಯರಿಗೆ ಮಾತೇ ಹೊರಡಲಿಲ್ಲ.

" ಏನು?....ನೀವು! ಹೀಗೆ ಮಾಡಿದಿರಾ?"—ಎಲ್ಲರ ಬಾಯಿಂದಲೂ ಇದೊಂದೇ ಪ್ರಶ್ನೆ.

ನಾನು ಹೌದೆಂದು ತಲೆಯಲ್ಲಾಡಿಸಿ ನಕ್ಕುಬಿಟ್ಟೆ.

" ಒಳ್ಳೆಯ ಹುಚ್ಚು ಕೆಲಸಮಾಡಿಬಿಟ್ಟಿದ್ದೀರಲ್ಲಾ! ನಮ್ಮನ್ನು ಕೇಳಾದ್ರೂ ಮಾಡಬಾರದಾಗಿತ್ತೆ?....ಖಂಡಿತ ನೀವು ಇಷ್ಟು ಮುಂದುವರೆ ಯಲು ನಾವು ಬಿಡುತ್ತಿರಲಿಲ್ಲ......." ಎಂದರು ಶ್ರೀಧರ್ – ಬೇಸರ, ವಿಸ್ಮಯದ ಧ್ವನಿಯಲ್ಲಿ.

" ಹಾಗಂದೇ ಈ ಕೆಲಸವನ್ನು ಮಾಡಿ ಪೂರೈಸುವ ಮುನ್ನ ನಿಮಗಾರಿಗೂ ಹೇಳಲಿಲ್ಲ! ನೀವು ಕಲ್ಲುಹಾಕುವುದು ನನಗೆ ಗೊತ್ತಿತ್ತು."

" ನೀವು ಇಷ್ಟು ಹಚ್ಚಿಕೊಂಡಿದ್ದೀರೆಂದು ನಾನು ಕನಸಿನಲ್ಲಿಯೂ ತಿಳಿ

ದಿರಲಿಲ್ಲ—" ಎಂದರು ಶ್ರೀಕಾಂತನ್. "ಅದರಲ್ಲಿಯೂ ನೀವು ಇಷ್ಟು ಧೈರ್ಯ ತಾಳಿ ಕಾಗದ ಕೊಟ್ಟಿರುವ ವಿಷಯ ನನ್ನ ಕಲ್ಪನೆಗೂ ಮೀರಿದ ವಿಷಯ!" ಎಂದು ಮಾತನ್ನು ಮುಂದುವರಿಸಿದರು.

ಗೆಳೆಯ ಬಾನಾಡಿ ಮೌನವಾಗಿದ್ದರು.

"ಅಲ್ಲರಿ! ನಮ್ಮನ್ನೆಲ್ಲಾ ಕೇಳದೆ ನೀವು ಹೀಗೆ ಮಾಡಬಹುದೇನ್ರಿ? ನೀವು ಬುದ್ಧಿವಂತರಾಗಿದ್ದುಕೊಂಡು, ಹೀಗೆ ಏಕಾಏಕಿ ಕಾಗದ ಬರೆದುಬಿಡೋದೇನ್ರಿ?" ಎಂದರು ಕಡೆಯಲ್ಲಿ.

"ಕಾಗದ್ದಲ್ಲಿ ಏನು ಬರೆದಿದ್ದೀರಿ, ಅದಾದ್ರು ತಿಳ್ಸಿ" ಎಂದರು ಶ್ರೀಧರ್.

ನಾನು ಎಲ್ಲ ವಿಷಯಗಳನ್ನು ಸೂಕ್ಷ್ಮವಾಗಿ ಹೇಳಿದೆ.

"ಬೆಂಗಳೂರಿನಲ್ಲಿ ನಿಮ್ಮಕ್ಕನ ಮಗಳೊಂದು 'ಎಡವಟ್ಟಾಗಿ' ಕುಳಿತಿದೆ ........ಹೀಗಿದ್ದುಕೊಂಡೂ ಇವರಿಗೆ ಮದುವೆಯಾಗ್ತೀನೀಂತ ಯಾಕೆ ಬರೆಯೋಕೆ ಹೋದ್ರಿ? ನಾಳೆ ಒಂದು ವೇಳೆ 'ಆಕೆ' ಮದುವೆಯಾಗಲು ಸಮ್ಮತಿಸಿದರೆ ಏನು ಮಾಡ್ತೀರಿ?"

"ಮದುವೆಯಾಗುತ್ತೇನೆ" ಎಂದೆ.

"ನಿಮ್ಮ ತಾಯಿತಂದೆಗಳು ವಿರೋಧಿಸಿದರೆ?"

"ಅವರನ್ನು ಒಪ್ಪಿಸಲೆತ್ನಿಸುತ್ತೇನೆ. ತಾಯಿಗೆ ನನ್ನ ಹಿತದೃಷ್ಟಿ ಇದೆ........"

"ಮನೆಯವರು ಒಪ್ಪದೆಹೋದ್ರೆ? ಅವರ ವಿರೋಧ ಈಕೆಯನ್ನು ವಿವಾಹವಾಗುತ್ತೀರಾ?" ಎಂದರು ಶ್ರೀಧರ್.

ನಾನು ಕೊಂಚ ಆಲೋಚಿಸಿದೆ.

"ಇನ್ನೊಂದು ವಿಷಯ. 'ಆಕೆ' ನಿಮ್ಮ ಕಾಗದವನ್ನು ನಾಳೆ ಪ್ರಿನ್ಸಿಪಾಲ್‌ರಿಗೆ ಕಳುಹಿಸಿಕೊಟ್ಟರೆ? ಅಥವಾ ನಿಮ್ಮ ಅಡ್ರೆಸ್ಸನ್ನು ಹುಡುಕಿಕೊಂಡು ಬಂದು ಛೀಮಾರಿ ಹಾಕಿದರೆ ಅದೆಷ್ಟು ಭಂಗ!"

"'ಆಕೆ' ಹಾಗೆ ಮಾಡಲಾರಳೆಂದು ನನಗೆ ಆತ್ಮವಿಶ್ವಾಸವಿದೆ. ಹಾಗೆ ಮಾಡುವಂತಿದ್ದರೆ ನನ್ನ ಕಾಗದವನ್ನು ತೆಗೆದುಕೊಳ್ಳುತ್ತಿರಲೇ ಇರಲಿಲ್ಲ. ತೆಗೆದುಕೊಂಡರೂ ನನ್ನ ಮುಖಕ್ಕೆ ಎಸೆದು ಸಿಟ್ಟುಮಾಡಿ ಮುಖ ಗಂಟಿಕ್ಕಿಕೊಂಡು ಹೋಗುತ್ತಿದ್ದಳು. ಆದರೆ ಹಾಗೆ ಮಾಡಲಿಲ್ಲ" ಎಂದೆ.

" ಅಂತೂ ನೀವು ಮೇಲೆ ಬಿದ್ದು ಇಲ್ಲದ ಸಂಕಟ ಹೆಚ್ಚಿಕೊಳ್ಳುತ್ತಿದ್ದೀರಿ. ಪರೀಕ್ಷೆ ಬೇರೆ ಹತ್ತಿರ ಬರುತ್ತಿದೆ........ಈ ಬಾರಿ ದೇವರೇ ನಿಮ್ಮನ್ನು ಉದ್ಧಾರ ಮಾಡಬೇಕು " ಎಂದರು ಶ್ರೀಧರ್.

ದಾರಿಯಲ್ಲಿ ಸ್ನೇಹಿತರ ಮಾತುಗಳನ್ನು ಮೆಲುಕುಹಾಕುತ್ತಾ ಬರುತ್ತಿದ್ದೆ. 'ಕಾಗದ ಕೊಡುವ ಮುನ್ನ ಅವರನ್ನೂ ಒಂದು ಮಾತು ಕೇಳಬೇಕಿತ್ತು' ಎಂದು ಒಂದೆರಡು ಬಾರಿ ಅನ್ನಿಸದೆ ಹೋಗಲಿಲ್ಲ.

ಶ್ರೀಕಾಂತನ್ ಮಾತ್ರ ನನ್ನ ಕಾರ್ಯವನ್ನು ಮೆಚ್ಚಿಕೊಂಡಿದ್ದರು. ಆದರೆ ಬಾನಾಡಿಗೆ ನನ್ನ ಕಥೆ ಕೇಳಿ ಮಂಕು ಮುಚ್ಚಿತ್ತು. ಆಗೊಂದು ಮಾತು ಈಗೊಂದು ಮಾತು ಆಡುತ್ತಿದ್ದರು.

ರಾತ್ರಿ ಹಾಸ್ಟಲನ್ನು ಮುಟ್ಟುವಾಗ ಸಂಜೆ ಇದ್ದ ಉತ್ಸಾಹವಿರಲಿಲ್ಲ. ನಾಳೆ ಏನು ಉತ್ತರ ಬರುತ್ತೊ – ಏನೇನು ಸಂಭವಿಸುತ್ತೋ ? ಎನ್ನುವ ಕಳವಳ.

ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಹಾಸಿಗೆಯ ಮೇಲೆ ಹೊರಳಾಡಿದೆ. ನನ್ನ ಹಾಗೆಯೇ ಅಪ್ರೊಡೈಟಿಯೂ ರಾತ್ರಿಯನ್ನು ಜಾಗರಣೆಯಲ್ಲಿ ಕಳೆದಿರಬೇಕೆಂಬ ವಿಷಯ ನನ್ನ ಮನಸ್ಸಿಗೆ ಬಾರದೆ ಹೋಗಲಿಲ್ಲ.



# ಆಸೆ—ನಿರಾಸೆ

ಬೆಳಗಾಯಿತು. ಬೆಳಗಿನ ನೇಸರಿನ ಕಿರಣಗಳು ಚಾಮುಂಡಿಬೆಟ್ಟ ವನ್ನು ಸುವರ್ಣಗಿರಿಯನ್ನಾಗಿ ಮಾಡಿತ್ತು. ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಇದ್ದ ನನಗೆ ಒಂದು ತರಹ ಆಲಸಿಕೆ ಉಂಟಾಗಿತ್ತು. ಸ್ನಾನಮಾಡಿದರೆ ಆಲಸಿಕೆ ಹೋಗಬಹುದೆಂದು ನೋಡಿದೆ! ಓದಲು ತೊಡಗಿದಾಗ ಮನಸ್ಸು ಎಲ್ಲೆಲ್ಲೋ ಹಾರುತ್ತಿತ್ತು. ಅಂತಹ ಓದಿನಲ್ಲಿ ಪ್ರಯೋಜನವಿಲ್ಲವೆಂದು ವಾಚನಾಲಯ, ಗೆಳೆಯರ ಕೊಠಡಿಗಳಿಗೆ ಹೋಗಿಬಂದೆ.

ಶ್ರೀಧರ್ ಕಾಲೇಜಿಗೆ ಹೋಗುವ ಮುನ್ನ ನನ್ನನ್ನು ಕಂಡುಹೋಗಲು ಬಂದರು...."ರಾತ್ರಿಯೆಲ್ಲಾ ಅಪ್ರೊಡೈಟಿಯ ಧ್ಯಾನದಲ್ಲಿ ಜಾಗರಣೆಯಾಯಿ ತೆಂದು ತೋರುತ್ತೆ?" ಎಂದರು ನನ್ನ ಮುಖನೋಡುತ್ತಲೇ.

"ಕಾಲೇಜಿಗೆ ಬರುತ್ತೀರಾ? ....ಇಲ್ಲವೋ?"

"ಮೊದಲನೆಯ 'ಪಿರೀಡ್' ನಲ್ಲೇ ಅಪ್ರೊಡೈಟಿಯ ದರ್ಶನ ವಾಗುತ್ತದೆ. 'ಆಕೆ' ಪದೇ ಪದೇ ನನ್ನ ಕಡೆ ನೋಡಿ ಗುಲ್ಲೆಬ್ಬಿಸಿದರೆ, ನೋಟ ದಿಂದಲೇ ತೇಜೋವಧೆ ಮಾಡಿಬಿಟ್ಟರೆ, ಎನ್ನುವ ಹೆದರಿಕೆ. ನನಗೆ ಒಳಗಿನ, ಉದ್ವೇಗವನ್ನು ಅದುಮಿ ಹಿಡಿಯುವ ಶಕ್ತಿ ಈಗ ಇಲ್ಲವಾಗಿದೆ. ತರಗತಿಯಲ್ಲಿ ಒಂದು ತರಹ ಮುಖಮಾಡಿಕೊಂಡು ಕುಳಿತರೆ ನೋಡಿದವರು ಏಕೆಂದು ಕೆದಕಿ ಕೇಳುತ್ತಾರೆ. ಅವರಿಗೆ ಯಾವುದಾದರೂ ಉತ್ತರಕೊಡಬೇಕಾಗುತ್ತದೆ ....ಆದುದರಿಂದ ಇಂದು ತರಗತಿಗೆ ಬಾರದಿರುವುದೇ ಒಳ್ಳೆಯದು" ಎಂದೆ.

"ನಿಮಗೆ ಹೇಗೆನಿಸುವುದೋ ಹಾಗೆಯೇ ಮಾಡಿ. ಒಂದು ವೇಳೆ ನಾವು ಹೇಳಿದರೂ ನಮ್ಮ ಮಾತು ಎಲ್ಲಿ ನಡೆಯುತ್ತದೆ!" ಕೊಂಚ ಅಣಕಿಸುವ ಧ್ವನಿಯಲ್ಲಿ ಹೇಳಿದರು.

ಅಂದು ನಾನು ಕಾಲೇಜಿಗೆ ಹೋಗದೆ ಹಾಸ್ಟಲಿನಲ್ಲೇ ಇದ್ದುಬಿಟ್ಟೆ.

ಸಾಯಂಕಾಲ ಗೆಳೆಯರು ಕಾಲೇಜಿನಿಂದ ಬಂದವರೇ ಹೇಳಿದರು.

'ನೀವೂ ಬರಬೇಕಾಗಿತ್ತು. ಅಪ್ರೊಡೈಟೆಯೂ ಬಂದಿದ್ದಳು." ಎಂದು ಬಾನಾಡಿ ಹಾಸ್ಯಮಾಡಿದರು.

ಅಪ್ರೊಡೈಟ ನನ್ನ ಗೆಳೆಯರನ್ನು ಕಂಡ ಈಗ ಒಂದು ವಿಧವಾದ ಮಂದ ಸ್ಮಿತವದನ ಮಾಡಿಕೊಂಡಳಂತೆ!

ಸಾಯಂಕಾಲ ಎಂದಿನಂತೆ ವಿಹಾರಕ್ಕೆ ಹೊರಟೆವು. ನಾವು ಮಾತಿನಲ್ಲಿ ಮಗ್ನರಾಗಿ ಜಗನ್ಮೋಹನ ಚಿತ್ರಶಾಲೆಯ ರಸ್ತೆಯಲ್ಲಿ ಬರುತ್ತಿದ್ದೆವು. ಶ್ರೀಕಾಂತನ್ ತನ್ನ ಕೈಗಡಿಯಾರದ ಗಾಜನ್ನು ಎಲ್ಲೋ ಕೆಡವಿಕೊಂಡರು. ಅದಕ್ಕಾಗಿ ಬಾನಾಡಿ ಮತ್ತು ಶ್ರೀಕಾಂತನ್ ಹುಡುಕುತ್ತಿದ್ದರು. ನಾನು ಮತ್ತು ಶ್ರೀಧರ್ ರಸ್ತೆಯ ಅಂಚಿನಲ್ಲಿ ನಿಂತಿದ್ದೆವು. ಹಿಂತಿರುಗಿ ನೋಡುತ್ತಿದ್ದ ಶ್ರೀಧರ್ ತಟಕ್ಕನೆ ನುಡಿದರು.

"ಅಗೊಳ್ರಿ! ಅವರು ಬರುತ್ತಿದ್ದಾರೆ!"

"ಯಾರು?" ಎಂದೆ.

"ಅದೇ ನಿಮ್ಮ ಅಪ್ರೊಡೈಟ! ಯಾರ ಜತೆಗೋ ಬರ್‍ತಿದ್ದಾರೆ!"

ಶ್ರೀಧರ್‌ರಾಯರ ಮಾತುಗಳನ್ನು ಕೇಳಿ 'ಹ್ಯಾಮ್‌ಲೆಟ್' ನಾಟಕದಲ್ಲಿ ಹ್ಯಾಮ್‌ಲೆಟನು ತಂದೆಯ ಭೂತವನ್ನು ಕಂಡು ಬೆಚ್ಚಿಬೀಳುವಂತೆ ನಾನೂ ಬೆಚ್ಚಿಬಿದ್ದೆ. ನನ್ನ ಎದೆಯಲ್ಲಿ ತಳಮಳವೆದ್ದಿತು. ಹೃದಯ ಡವಡವನೆ ಹೊಡೆದುಕೊಂಡಿತು. ಕಾಲುಗಳು ರೇಸು ಕುದುರೆಯಂತೆ ನಿಂತಲ್ಲಿ ನಿಲ್ಲದೆ ಪುಟಿಸುತ್ತಿದ್ದುವು. "ಅಪ್ರೊಡೈಟ ಬಂದುಬಿಟ್ಟಳು" ಎಂದು ನನ್ನ ಬಾಯಿ ಒಂದೇ ಸಮನೆ ಒದರಿಕೊಂಡಿತು.

"ಕಾಲೇಜಿಗೆ ಬೇರೆ ತಪ್ಪಿಸಿಕೊಂಡಿದ್ದೆ. ಈಗ ನಿಮ್ಮೊಂದಿಗೆ ಇರುವುದನ್ನು ಕಂಡರೆ 'ಆಕೆ' ಏನಾದರೂ ತಿಳಿಯಬಹುದು. ಬನ್ನಿ, ಮುಂದಕ್ಕೆ ಹೋಗೋಣ. ಅಥವಾ ಎಲ್ಲಾದರೂ ಮರೆಯಾಗೋಣ. ಆದರೆ ಹೀಗೆ ನಿಂತಿರುವುದು ಬೇಡ. 'ಆಕೆ' – ತನಗೋಸ್ಕರ ಏನನ್ನೋ ಕಳೆದುಕೊಂಡವರಂತೆ ನಟಿಸುತ್ತಾ ನಿಂತಿದ್ದಾರೆ – ಎಂದುಕೊಳ್ಳುತ್ತಾಳೆ. ಬನ್ನಿ ಇಲ್ಲಿಂದ ಮಾಯವಾಗೋಣ" ಎಂದೆ. ಆದರೆ ಶ್ರೀಧರ್ ಅಲ್ಲಿಂದ ಒಂದು ಹೆಜ್ಜೆ ಮುಂದಿಡಲೇ ಇಲ್ಲ. "ನಮ್ಮ ಪಾಡಿಗೆ ನಾವು ನಿಂತಿರೋಣ. ಆಕೆಯ ಪಾಡಿಗೆ 'ಆಕೆ' ಹೋಗುತ್ತಾಳೆ. ಅಷ್ಟು ಹೊತ್ತಿನಿಂದ ನಿಂತಿದ್ದು ಈಗ

ಅವರಿಬ್ಬರನ್ನು ಹಿಂದುಳಿಸಿ ಅವಸರ ಅವಸರವಾಗಿ ಹೋಗಿಬಿಟ್ಟರೆ 'ಆಕೆ' ನಗುತ್ತಾಳೆ. ತುಂಬಾ ಹೆದರುವ ಜಾತಿಯೆಂದು ಹಾಸ್ಯಮಾಡುತ್ತಾಳೆ. ಆಕೆಯ ಕಣ್ಣಿನಲ್ಲಿ ನೀವು ತುಂಬಾ ಕೀಳಾಗಿಬಿಡುತ್ತೀರಿ.... ಬೇಡ.... ನಾವು ಇಲ್ಲಿಂದ ಹೊರಡುವುದು ಬೇಡ" ಎಂದುಬಿಟ್ಟರು ಶ್ರೀಧರ್.

ಅಪ್ರೊಡೈಟಿಯೂ, ಆಕೆಯ ಗೆಳತಿಯೂ ಬಂದೇಬಿಟ್ಟರು! ಬಾನಾಡಿ ಮತ್ತು ಶ್ರೀಕಾಂತನ್ ಕ್ಷಣಕಾಲ ಹುಡುಕುವುದನ್ನು ಮರೆತು ನನ್ನ ಮತ್ತು ಅಪ್ರೊಡೈಟಿಯನ್ನು ಎವೆಯಿಕ್ಕದೆ ನೋಡುತ್ತಾ ನಿಂತರು.

ಅಪ್ರೊಡೈಟಿ ದೂರದಿಂದಲೇ ತನ್ನ ಗೆಳತಿಗೆ ಕೈಸನ್ನೆಯಿಂದ ನನ್ನನ್ನು ತೋರಿಸುತ್ತಾ, ಏನನ್ನೋ ಪಿಸುಮಾತಿನಲ್ಲಿ ಹೇಳುತ್ತಾ ಬಂದಂತಿತ್ತು. ನಿನ್ನೆ ಕಾಗದ ಕೈಗಿತ್ತು ಇಂದು ಕಾಲೇಜಿಗೆ ತಪ್ಪಿಸಿಕೊಂಡ 'ಪ್ರಾಣಿ' ಇವನೇ ಎಂದೋ ಏನೋ? ನನಗೆ ಆಕೆಯನ್ನು ನೋಡಲು ಧೈರ್ಯ ವಾಗಲಿಲ್ಲ. ಆಕೆಗೆ ಸಹಜವಾಗಿ ಇರಬೇಕಾಗಿದ್ದ ನಾಚುಕೆ ನನಗೆ ಬಂದಿತ್ತು. ನಾನು ತಲೆತಗ್ಗಿಸಿಕೊಂಡು ನಿಂತುಬಿಟ್ಟೆ. ಆದರೂ ನನ್ನನ್ನು ಕಂಡು ಆಕೆಯ ಮುಖದಲ್ಲಿ ಯಾವ ಭಾವನೆಯುಂಟಾಗುತ್ತದೆ ಎಂದು ತಿಳಿಯುವ ಕುತೂಹಲ! ಇದನ್ನು ಓರೆನೋಟದಿಂದ ತಿಳಿದು ತೃಪ್ತಿಪಡಿಸಿಕೊಂಡೆ. ನಾನು ಕಂಡಂತೆ ಆಕೆಯ ಮುಖದಲ್ಲಿ ಯಾವ ಬದಲಾವಣೆಯಾದಂತೆ ತೋರಲಿಲ್ಲ. ಅದು ಎಂದಿನಂತೆಯೇ ಶಾಂತವಾಗಿ ನಿರುದ್ವಿಗ್ನವಾಗಿತ್ತು. ಆದರೆ ಕಿರುನಗೆಯೊಂದು ಆಗೊಮ್ಮೆ ಈಗೊಮ್ಮೆ ಆಕೆಯ ತುಟಿಗಳ ಮೇಲೆ ಮೂಡಿ ಮಾಯ ವಾಗುತ್ತಿತ್ತು.

ಅವರು ನಾವಿದ್ದ ಸ್ಥಳಕ್ಕೆ ಬಂದಾಗ ಹಠಾತ್ತಾಗಿ ಮಾತನ್ನು ನಿಲ್ಲಿ ಸಿದರು. ಆಗ ಆಕೆಗೆ ಕೊಂಚ ಲಜ್ಜೆಯುಂಟಾಗಿರಬೇಕು! ತಲೆ ತಗ್ಗಿಸಿ ಕೊಂಡು ಮುಂದಕ್ಕೆ ನಡೆದುಬಿಟ್ಟಳು. ನಮ್ಮಿಂದ ಸುಮಾರು ಒಂದು ಫರ್‌ಲಾಂಗ್ ದೂರ ಹೋದಮೇಲೆ ಮತ್ತೊಮ್ಮೆ ಹಿಂತಿರುಗಿ ನೋಡಿದಳು. ಆಕೆಯ ಗೆಳತಿ ಕ್ಷಣಕಾಲ ನಿಂತಲ್ಲೇ ನಿಂತು ನಮ್ಮನ್ನು ಕಣ್ಣು ತುಂಬಾ ನೋಡಿದಳು.

ಅವರು ಕಣ್ಮರೆಯಾದ ಮೇಲೆ ನಾನು ಶ್ರೀಕಾಂತನ್ನ ಬೈದುಬಿಟ್ಟೆ "ನೀವು ಗ್ಲಾಸು ಕಳೆದುಕೊಂಡು ನನಗೆ 'ತಿಥಿ' ಮಾಡಿಬಿಟ್ಟಿರಿ!"

"ನಿಮ್ಮ ಅಪ್ರೊಡೈಟ ಇತ್ತ ಬರುವಳೆಂದು ನನಗೇನು ಕನಸು ಬಿದ್ದಿತ್ತೆ?"

"ನನಗಿನ್ನೂ ಜೀವರುತ್ತಿದೆ, ಮೈ·ಕಂಪನ ಹೋಗಿಲ್ಲ" ಎಂದೆ.

"ಯು ಆರ್ ಅನ್‌ಫಿಟ್ ಟು ಬಿ ಎ ಲವರ್" (ನೀವು ಪ್ರೇಮಿಯಾಗಲು ನಾಲಾಯಖ್ಖು) ಎಂದರು ಶ್ರೀಕಾಂತನ್ ನನ್ನ ಮಾತನ್ನು ಕಿವಿಗೆ ಹಾಕಿಕೊಳ್ಳದೆ.

"ಯಾಕ್ರಿ?"

"ಪ್ರಣಯಿನಿ ಇಷ್ಟು ಸಮೀಪದಲ್ಲಿ ಹೋದರೂ ಒಂದು ಮಾತನಾಡಿಸ ಲಿಲ್ಲ. ಬೇಡಾ....ಒಂದು ಮುಗುಳುನಗೆ, ಇಲ್ಲಾ – ಕಣ್‌ಸನ್ನೆಯಿಂದಾದರೂ ಪರಸ್ಪರ ಮಾತಾಡಲಿಲ್ಲ!"

"ಇದು ಕಣ್ವಾಶ್ರಮವಲ್ಲ. ಅಯ್ಯರ್ ಭವನ. ರಾಮಚಂದ್ರ ವಿಲಾಸ್ – ವಾಂಗಾಯ್ ದೋಸೆಯ ಹೋಟಲು" ಎಂದೆ ನಾನು – ಹೋಟ ಲನ್ನು ಪ್ರವೇಶಿಸುತ್ತಾ.

ದೇವರಾಜಾ ಮಾರ್ಕೆಟ್ಟಿನ ಬಳಿ ನಾನು ಹಳೆಯಪುಸ್ತಕಗಳನ್ನು ನೋಡುತ್ತಿರುವಾಗ ಗೆಳೆಯರು ಮೂವರೂ ನನ್ನನ್ನು ಬಿಟ್ಟು ಎಲ್ಲಿಗೋ ಹೋಗಿಬಿಟ್ಟರು. ಅವರ ಆತುರಕ್ಕೆ ನಾನು ಬಾರದಿದ್ದುದರಿಂದ ಅವರ ಕೈಗೆ ನಾನು ಸಿಕ್ಕಲಿಲ್ಲ. ಅವರನ್ನು ಹುಡುಕುತ್ತಾ ನಾನು ಮಾರ್ಕೆಟ್ ದ್ವಾರದ ಬಳಿ ಠಳಾಯಿಸುತ್ತಿದ್ದೆ. ಆಗ ಅಂಗಡಿಯೊಂದರಲ್ಲಿ 'ಜರಡಿ' ಕೊಂಡು ಕೊಳ್ಳುತ್ತಿದ್ದ ಅಪ್ರೊಡೈಟ ಕಣ್ಣಿಗೆ ಬಿದ್ದಳು. 'ಆಕೆ' ತನ್ನ ಗೆಳತಿಗೆ ನನ್ನ ಕಡೆ ಕೈತೋರಿಸಿ ಏನನ್ನೋ ವಿವರಿಸುತ್ತಿದ್ದಳು. ಅಲ್ಲದೆ ನನ್ನನ್ನು ಹಲವಾರು ಬಾರಿ ಕುತೂಹಲ ದೃಷ್ಟಿಯಿಂದ ದಿಟ್ಟಿಸುತ್ತಿದ್ದಳು. ಬಹುಶಃ ನಾನು ಅಲ್ಲೇ ನಿಂತಿದ್ದರೆ 'ಆಕೆ' ಮಾತನಾಡಿಸುತ್ತಿದ್ದಳೋ ಏನೋ? ಆದರೆ ಅಲ್ಲಿ ನಿಲ್ಲಲು ನನ್ನಿಂದ ಆಗದೆಹೋಯಿತು. ಗೆಳೆಯರು ಸಿಕ್ಕದಿದ್ದರೆ ಬೇಡಾ ಎಂದೆನುತ್ತಾ ರಸ್ತೆಗುಂಟಾ ನಡೆದುಬಿಟ್ಟೆ.

ಸಾಯಂಕಾಲ ಅಪ್ರೊಡೈಟೆಯ ದರ್ಶನದಿಂದ ಒಳ್ಳೆಯ ಪರಿಣಾಮವೇ ಉಂಟಾಯಿತು. ಕಾಲೇಜಿನಲ್ಲಿ ಮೊಟ್ಟಮೊದಲು ಕಂಡಿದ್ದರೆ ನನ್ನ ವರ್ತನೆ ವಿಚಿತ್ರವಾಗುತ್ತಿತ್ತು. ಈಗ ಆಗಬೇಕಿದ್ದ ಎಲ್ಲಾ ಅನಾಹುತ (!) ಕಾಲೇಜಿನ

ಹೊರಗೇ ಆಗಿಹೋದುದರಿಂದ, ನಾನು ನಿಶ್ಚಿಂತೆಯಿಂದ ಕಾಲೇಜಿಗೆ ಬರಲ ಅವಕಾಶವಾಯಿತು.

ಮಾರನೆಯ ದಿನ ತರಗತಿಗೆ ಹೋದೆ. ನಾನು ಬರುತ್ತಲೇ ಅಪ್ರೊಡೈಟೆಯ ಕಣ್ಣಿನಲ್ಲಿ ಮಿಂಚು ಹೊಳೆಯಿತು. ಮುಖದಲ್ಲಿ ಮಲ್ಲಿಗೆಯ ಮೊಗ್ಗು ಆಗತಾನೇ ಅರಳಿದಂತೆ ಇದ್ದ ನಗು. ಆಕೆಯ ಪಕ್ಕದಲ್ಲಿ ಕುಳಿತಿದ್ದ – ಸುಲೋಚನದಾಕೆ ನನ್ನನ್ನು ನೋಡಿ ಅಪ್ರೊಡೈಟೆಯ ಕಿವಿಯಲ್ಲಿ ಏನನ್ನೋ ಊದಿದಳು.

ನಾನು ಅಪ್ರೊಡೈಟೆಯಲ್ಲಿ ಆಗುವ ಮಾರ್ಪಾಡುಗಳನ್ನು, ಅವರು ವರ್ತಿಸುವ ಬಗೆಯನ್ನು ಗಮನಿಸುತ್ತಾ ಗ್ಯಾಲರಿಯಲ್ಲಿ ಕುಳಿತಿದ್ದೆ. 'ಆಕೆ' ಎಂದಿನಂತೆಯೇ ಪಾಠದಲ್ಲಿ ಮಗ್ನಳಾಗಿದ್ದಳು. ವಿರಾಮ ದೊರೆತಾಗ ನನ್ನ ಕಡೆ ನೋಡಲೆಳಸುವಳು. ನಾನು ಆಕೆಯನ್ನೇ ನೋಡುತ್ತಿದ್ದುದರಿಂದ 'ಆಕೆ' ನಾಚಿಕೆಯಿಂದ ತಲೆತಗ್ಗಿಸಿಬಿಡುವಳು. ಇದಕ್ಕೂ ಹೆಚ್ಚಿನ ವ್ಯಾಪಾರ ನಡೆಯಲಿಲ್ಲ.

ದಿನಗಳು ಕಳೆದುವು. 'ಅಪ್ರೊಡೈಟೆ ನನಗೆ ಯಾವುದಾದರೊಂದು ಜವಾಬು ಕೊಡುತ್ತಾಳೆ. ನಾನು ಕೊಟ್ಟಿದ್ದ ಕಾಲೇಜು ಹಾಸ್ಟಲಿಗೆ ಕಾಗದ ಬರೆಯುತ್ತಾಳೆ. ಅಥವಾ ಮನೆಯ ಹಿರಿಯರನ್ನು ಕಳುಹಿಸಿ ಯಾವ ವಿಷಯ ವನ್ನೂ ತಿಳಿಸುತ್ತಾಳೆ' ಎಂದು ನಾನು ಕಾದೆ. ಆದರೆ ಎಂಟು ಹತ್ತು ದಿನಗಳಾದರೂ ಆಕೆಯಿಂದ ನನಗೆ ಯಾವ ಸುದ್ದಿಯೂ ಬರಲಿಲ್ಲ.

'ಆಕೆ ಯಾಕೆ ಬರೆಯಲಿಲ್ಲ' ಎಂದು ಯೋಚಿಸುವುದೇ ನನ್ನ ಕೆಲಸ ವಾಯಿತು. 'ಆಕೆ' ಕಾಲೇಜಿನಲ್ಲಿ ದಿನವಹಿ ಸಿಕ್ಕುತ್ತಿದ್ದಳು. ಆಕೆಯ ಮುಖದ ಭಾವ – ಎಂತಹ ಬಂಡೆ ಎಸೆದರೂ ಅದನ್ನು ನುಂಗಿ ಮೊದಲಿನಂತೆ ಸ್ತಬ್ಧಗೊಳ್ಳುವ ಕೊಳದಂತೆ ನಿರ್ವಿಕಲ್ಪವಾಗಿತ್ತು. ಆಕೆಯ ಮನಸ್ಸಿನಲ್ಲಿ ಏಳುತ್ತಿದ್ದ ಯಾವ ಆಲೋಚನಾತರಂಗವನ್ನು, 'ಆಕೆ' ಯಾವ ರೀತಿಯಲ್ಲೂ ತಿಳಿಸಿಕೊಡಲಿಲ್ಲ. 'ಮುಖಭಾವ ಮನಸ್ಸಿನ ದರ್ಪಣ' ಎನ್ನುವ ಮಾತು ಆಕೆಯ ವಿಷಯದಲ್ಲಿ ಸುಳ್ಳಾಯಿತು. 'ಆಕೆ' ಸ್ಥಿರಪ್ರಜ್ಞಳಾಗಿದ್ದರೆ ಆ ಮಾತು ಬೇರೆ. ಆಕೆಗೂ ನಮ್ಮಂತೆ ಆಸೆ, ಹಠ, ಛಲ, ಕೋಪಗಳಿತ್ತು. ನನ್ನ ಪ್ರಣಯಪತ್ರವನ್ನು ಓದಿಕೊಂಡೂ 'ಆಕೆ' ಚಿತ್ತಸ್ವಾಸ್ಥತೆಯನ್ನು ಕಳೆದು

ಕೊಳ್ಳದೆಯಿದ್ದ ಸಂಗತಿ ನಿಜವಾಗಿಯೂ ನನಗೆ ವಿಸ್ಮಯಗೊಳಿಸಿತು "ಬಹುಶಃ 'ಆಕೆ' 'ಕೋಲ್ಡ್ ಸೆಕ್ಸ್' (ನಿರುದ್ವೇಗದ ಹೆಣ್ಣು) ಎಂದ. ಕಾಣುತ್ತೆ" ಎಂದುಕೊಂಡೆ ಆಕೆಯ ನಿರಾತಂಕಗೊಂಡ ಮನಸ್ಸನ್ನು ನೋಡಿ.

"ಬಹುಶಃ ಆಕೆ ಕೌಮಾರ್ಯದ ಪಟ್ಟದಿಂದ ತಾರುಣ್ಯದ ಪಟ್ಟಕ್ಕೇರಿಲ್ಲ ವೇನೋ...." ಎಂದರು ಬಾನಾಡಿ ಆಕೆಯ ಮುಗ್ಧ ಎಳೆಯ ಮುಖನೋಡಿ - ಒಂದು ದಿನ. ಆಕೆಯ ವಿಷಯದಲ್ಲಿ ಎಲ್ಲವೂ ನಿಜ. ಹೆಣ್ಣಿನ ಮನಸ್ಸು, ಬ್ರಹ್ಮನ ಮನಸ್ಸು ಇಬ್ಬರ ಮನಸ್ಸನ್ನು ತಿಳಿಯುವುದು ಕಠಿಣವಂತೆ! ಈ ಮಾತು ಹುಟ್ಟುವಂತೆ ಮಾಡಿದವರು ಅಪ್ರೊಡೈಟ ಅಂತಹವರೇ ಇರಬೇಕು!!

ಆಕೆಯ ನೋಟವನ್ನು, ಕುತೂಹಲಕಾರಿಯಾದ ಮುಖಭಂಗಿಯನ್ನು ಸಮ್ಮತಿಯೆಂದು ತಿಳಿಯಬೇಕೋ, ಅಸಮ್ಮತಿಯೆಂದು ತಿಳಿಯಬೇಕೋ ಯಾವುದೂ ನನಗೆ ಬಗೆಹರಿಯದ ಸಮಸ್ಯೆಯಾಯಿತು. ಆಕೆಯ ನೋಟ ಪ್ರೋತ್ಸಾಹಕಾರಕವೂ ಅಲ್ಲ, ತಿರಸ್ಕಾರಪೂರಕವೂ ಅಲ್ಲ.

ನಾನು ಆಕೆಯ ಈ ನೋಟವನ್ನು ಭೇದಿಸಲಾರದೆ ಹೋದೆ. ಈಗ ನಾನು ಚಿಂತಾಂಗನೆಯ ಕೇಳಿಗೆ ಎಡೆಕೊಟ್ಟಿದ್ದೆ.

ಗೆಳೆಯರು ನನ್ನನ್ನು ಸಮಾಧಾನಗೊಳಿಸಲು ಹತ್ತು ರೀತಿಯಲ್ಲಿ ಪ್ರಯತ್ನಿಸಿದರು. ಹಂಗಿಸಿ ಆಡಿದರು. ಭಂಗಿಸಿ ನೋಡಿದರು. ನಾನು ಮಾತ್ರ ಇದ್ದಂತೆ ಇದ್ದೆ. ಅವರ ವಾಗ್ಬಾಣಗಳು ನನ್ನ ಮೇಲೆ ನಡೆಯಲಿಲ್ಲ. ಯಾವಾಗಲೂ ನಗುನಗುತ್ತಿದ್ದ ನಮ್ಮ ಗುಂಪಿನಲ್ಲಿ ನನ್ನ ಕಾರಣದಿಂದ ಈಗ ಮ್ಲಾನತೆಯ ಮುಸುಕು. ನನ್ನನ್ನು ದಾರಿಗೆ ಹಚ್ಚಲು ಗೆಳೆಯರೆಲ್ಲ ಸೇರಿಕೊಂಡು ಒಂದು ಹಂಚಿಕೆ ಹೂಡಿದರು. ಆದರೆ ಅದು ಕಾರ್ಯಗತ ವಾಗುವ ಮೊದಲೇ ಬಯಲಾಯಿತು.

ನನಗೊಂದು ಪತ್ರ ಬರೆಯಬೇಕು. ಹೆಂಗಸರು ಬರೆಯುವಂತೆ ಬರೆದು, ಅಪ್ರೊಡೈಟೆಯ ಮನೆಯ ಕಡೆ ಟಪಾಲು ಪೆಟ್ಟಿಗೆಗೆ ಅದನ್ನು ಹಾಕಬೇಕು. ಪತ್ರದಲ್ಲಿ ಅಪ್ರೊಡೈಟೆಯೇ ಬರೆದಂತೆ ನಾಲ್ಕು ಸಾಲು ಹಿತನುಡಿ 'ಈ ವಿಷಯ ದಲ್ಲಿ ತನಗೆ ಆಸಕ್ತಿಯಿದ್ದರೂ, ತಾವಿಬ್ಬರೂ ಪರೀಕ್ಷೆಗೆ ಕೂತುಕೊಳ್ಳುವುದರಿಂದ ಈ ವಿಷಯವನ್ನು ಆಲೋಚಿಸಲು ಇದು ತಕ್ಕ ಸಮಯವಲ್ಲ, ಯಾವುದನ್ನೂ ಪರೀಕ್ಷೆಯು ಮುಗಿದನಂತರ ಮಾತನಾಡಿ ನಿರ್ಧರಿಸೋಣ' - ಇವೇ ಮೊದ

ಲಾದ ಕಣ್ಣೊರೆಸುವ ಮಾತುಗಳು. ಈ ಪತ್ರವನ್ನು ಓದಿಕೊಂಡು ನಾನು ಅಪ್ರೊಡೈಟಿಯ ವಿಷಯವನ್ನು ಅಷ್ಟು ಹಚ್ಚಿಕೊಂಡು ಹೋಗದೆ – ವ್ಯಾಸಂಗಕ್ಕೆ ಮನಸ್ಸನ್ನು ಹಾಕುತ್ತೇನೆ – ಎಂದೆಲ್ಲಾ ಗೆಳೆಯರು ಭಾವಿಸಿದ್ದರು. ಆದರೆ ಅವರ ಯಾವ 'ಉಪಾಯವೂ' ಕೃತಿಗೆ ಇಳಿಯಲೇ ಇಲ್ಲ.

"ನೀವು ಹಾಗೆ ಮಾಡಿದ್ದರೆ ನಾನು ಈ ಕಾಗದದ ಪ್ರಸ್ತಾಪ ಆಕೆಯೊಂದಿಗೆ ಮಾಡುತ್ತಿದ್ದೆ. ಇದರಿಂದ ಮತ್ತಷ್ಟು ಗೊಂದಲವೇಳುತ್ತಿತ್ತು" ಎಂದೆ ಅವರ ಹಂಚಿಕೆಯೆಲ್ಲಾ ಬಯಲಾದಮೇಲೆ.

"ನಿಮಗೆ ಸಂಶಯ ಬಂದಿದ್ದರೆ ತಾನೆ?........ ಆ ಕೆಲಸ. ಆಕೆಯ ಅಕ್ಷರ ಹೇಗಿದೆಯೆಂದು ನಿಮಗೆ ಗೊತ್ತಿಲ್ಲ. ಹೆಂಗಸರು ಬರೆಯುವಂತೆ ಬಿಡಿಸಿ ಬಿಡಿಸಿ ಬರೆದು ಹಾಕಿದ್ದರೆ! ನೀವು ಮೀನಿನಂತೆ ಬಲೆಯಲ್ಲಿ ಬಿದ್ದು ಬಿಡುತ್ತಿದ್ದಿರಿ" ಎಂದರು ಶ್ರೀಧರ್.

"ನಿಮ್ಮಲ್ಲಿ ಅಷ್ಟೊಂದು ಜಾಣ್ಮೆ ಇದ್ದಿದ್ದರೆ ಕೆಲಸಮಾಡುವ ಮುನ್ನವೇ ನಿಮ್ಮ ಗುಟ್ಟು ರಟ್ಟಾಗುತ್ತಿರಲಿಲ್ಲ" – ಎಂದು ನಾನು ಅವರನ್ನು ಹಂಗಿಸದೆ ಇರಲಿಲ್ಲ.

ಈಗ ಎಂದಿನಂತೆ ಅಪ್ರೊಡೈಟ ತರಗತಿಯಲ್ಲೂ ಸಿಕ್ಕುವಳು; ಸಂಚಾರ ಕಾಲದಲ್ಲಿಯೂ ಸಿಕ್ಕುವಳು. ಒಬ್ಬರನ್ನೊಬ್ಬರು ಸಂಧಿಸಿದಾಗ ಪರಸ್ಪರ ದೃಷ್ಟಿಮಿಲನ, ಮೈಯಲ್ಲಿ ವಿದ್ಯುತ್ ಸಂಚಾರ, ಪುಳಕ, ರೋಮಾಂಚನ – ಇವುಗಳು ಉಂಟಾಗುತ್ತವೆ. ಕೆಲವು ಬಾರಿ 'ಆಕೆ' ಮಾತನಾಡಿಸಲು ಇಚ್ಛೆ ಇರುವಂತೆ ತೋರಿಸಿಕೊಳ್ಳುತ್ತಾಳೆ. ಆದರೆ ಮಾತನಾಡಿಸುವ ಪ್ರಯತ್ನ ಮಾತ್ರ ಇಲ್ಲ. ನಾನು ಮೇಲು ಬಿದ್ದು ಆಕೆಯನ್ನು ಮಾತನಾಡಿಸಲು ಹೋಗಲಿಲ್ಲ.

ಈ ಗೆಳೆಯರಿಗೆಲ್ಲಾ – ಎಲ್ಲರಿಗಿಂತ ಹೆಚ್ಚಿಗೆ – ಶ್ರೀಕಾಂತನ್, ಬಾನಾಡಿಗೆ ನಿರಾಶೆ. ಅಪ್ರೊಡೈಟ ನನ್ನ ಪ್ರೇಮವನ್ನು ಖಂಡಿತವಾಗಿಯೂ ತಿರಸ್ಕರಿಸಿ ಬಿಟ್ಟಿದ್ದಾಳೆ. ಕಾಲೇಜಿನಲ್ಲಿರುವ ಸಾವಿರ ಪ್ರಣಯಿಗಳಂತೆ ಇವನೂ ಸಂಯಮ ರಹಿತನಾಗಿ ತನಗೆ ಪತ್ರ ಬರೆದುಬಿಟ್ಟಿದ್ದಾನೆ ಎಂದು ಉದಾಸೀನ ಮಾಡಿಬಿಟ್ಟಿದ್ದಾಳೆ – ಎಂದೆಲ್ಲಾ ನನ್ನ ಮುಂದೆ ಅಂದುಕೊಳ್ಳತೊಡಗಿದರು. ಅವರ ಈ ಮಾತುಗಳಿಗೆ ಶ್ರೀಧರ್ ಪುಷ್ಟಿ ಕೊಡುತ್ತಿದ್ದರು. ಅವಳು ಬೇಕೆಂದೇ ತರಗತಿಗೆ

ತಡವಾಗಿ ಬಂದು ಹುಡುಗಿಯರ ಹಿಂದೆ ಕುಳಿತುಕೊಂಡು, ನನ್ನ ಮತ್ತು ಅಪ್ರೊಡೈಟಿಯಲ್ಲಾಗುವ ಮುಖಭಾವದಿಂದ, ಆಕೆ ನನ್ನಲ್ಲಿ ಅನುರಕ್ತೆ ಅಹುದೋ ಅಲ್ಲವೋ ಎಂದು ತಿಳಿಯಲು ನೋಡಿದರು. ಆದರೆ ಅಪ್ರೊಡೈಟಿಯ ಶಾಂತ, ಗಂಭೀರವಾದ, ಕಳಂಕರಹಿತ ಮುಖ ಶ್ರೀಧರ್‌ಗೆ ಯಾವ ಅಭಿಪ್ರಾಯ ಹೊಂದಲು ಅವಕಾಶ ಕೊಡಲಿಲ್ಲ. ಅವರೂ ತಮಗೆ ತೋಚಿದಂತೆ ಊಹೆ ಮಾಡಿಕೊಳ್ಳಬೇಕಾಯಿತು.

"ನಿಮ್ಮದು ಒದ್ದೆ ಪಠಾಕಿ ಆಯಿತು. ನೀವು ಗೆದ್ದಿರಿ. ಎಲ್ಲಿ 'ಆಕೆ' ನಿಮ್ಮನ್ನು ಜಿಗಣೆಯಂತೆ ಅಂಟಿಬಿಡುವಳೋ ಎಂದು ಹೆದರಿದ್ದೆ. ಆದರೆ ದೇವರು ನಿಮ್ಮನ್ನು ಪಾರುಮಾಡಿದ........ಇನ್ನಾದರೂ ನಮ್ಮ ಮಾತು ಕೇಳಿಕೊಂಡು ಆಕೆಯನ್ನು ಮರೆತು ಓದತೊಡಗಿ" ಎಂದರು ಶ್ರೀಧರ್.

"ಪ್ರತಿಕ್ರಿಯೆ ಬಾರದ ಪ್ರೇಮ ನಿಷ್ಪ್ರಯೋಜನ" ಎಂದು ಮಣಮಣಿಸಿದರು ಶ್ರೀಕಾಂತನ್. ಅವರು ಹೇಳುವುದೆಲ್ಲಾ ಕೇಳಿಕೊಂಡು ಕಡೆಗೆ ನಾನೆಂದೆ "ಇನ್ನು ನಾಲ್ಕುದಿನ ನನಗೆ ಅವಧಿಕೊಡಿ. ಈ ಅವಧಿಯಲ್ಲಿ ಆಕೆಯ ಯಾವುದೊಂದು ಅಭಿಪ್ರಾಯವನ್ನು ನಿಮಗೆ ತಿಳಿಸುತ್ತೇನೆ".

"ಹಾಗಾದರೆ ಮತ್ತೊಂದು ಬಾಂಬು ಹಾಕುತ್ತೀರಾ?"

"ಇಲ್ಲ ಹಿಂದೆ ಹಾಕಿದ್ದ ಬಾಂಬೇ, ಸಿಡಿಯುವ ಸೂಚನೆಗಳಿವೆ."

ಅಂದೇ ಅಂತಹ ಸೂಚನೆ ಬಂದಿತ್ತು. ಕೊನೆಯ 'ಪಿರೀಡ್' ಅಪ್ರೊಡೈಟಿಗೆ ಇತ್ತು. ಉಪಾಧ್ಯಾಯರು ಇನ್ನೂ ಬಂದಿರಲಿಲ್ಲ. ನಾನು ಸ್ನೇಹಿತನೊಬ್ಬನೊಡನೆ ಯಾವುದೋ ಕೆಲಸಕ್ಕಾಗಿ ಆಕೆಯ ತರಗತಿಯ ಬಳಿ ಸುಳಿಯುತ್ತಿದ್ದೆ. ನನ್ನನ್ನು ಕಂಡು ಮಾತನಾಡಿಸಲು, 'ಆಕೆ' ಒಂದೆರಡು ಬಾರಿ ಮುಂದೆ ಬಂದು ಹಿಂತಿರುಗಿದಂತೆ ಕಂಡಿತು. ಕೆಲಸದ ಆತುರದಲ್ಲಿ ನಾನು ಅದಕ್ಕೆ ಗಮನಕೊಡಲಿಲ್ಲ.

ಇದಾದ ಮಾರನೆಯ ದಿನ ಆಕೆಯನ್ನು ನಾನೇ ಕಂಡುಬರಬೇಕೆಂದು ನಿಶ್ಚಯಿಸಿದೆ. ಈ ವಿಷಯವನ್ನು ಗೆಳೆಯರಿಗೆ ಪೂರ್ವಭಾವಿಯಾಗಿ ತಿಳಿಸಲಿಲ್ಲ.

ಕಾಲೇಜು ಮುಗಿಯುವವರೆಗೂ ಕಾದು, 'ಆಕೆ' ಮನೆಗೆ ಹಿಂತಿರುಗುವಾಗ ನಾನು ಪತ್ರಕೊಟ್ಟ ರಸ್ತೆಯಲ್ಲಿಯೇ ಆಕೆಯನ್ನು ಸಂದರ್ಶಿಸಿದೆ.

ಇಂದು 'ಆಕೆ' ಒಂಟಿಯಾಗಿರಲಿಲ್ಲ. ಜತೆಯಲ್ಲಿ ಆ ಸುಲೋಚನದಾಕೆ ಇದ್ದಳು. ಆಕೆಗೂ ನಾನು ಅಪ್ರೊಡೈಟಿಗೆ ಒಲುವಿನ ಓಲೆ ಬರೆದಿರುವ ವಿಷಯ ಗೊತ್ತಿತ್ತು. ನನ್ನನ್ನು ಕಂಡೊಡನೆಯೇ ಆಕೆ ತನ್ನ ಮಾತನ್ನು ಪಕ್ಕನೆ ನಿಲ್ಲಿಸಿಬಿಟ್ಟು ತನ್ನ ಮನೆಯ ಹಾದಿ ಹಿಡಿದು ಹೊರಟುಹೋದಳು. ಹೋಗುವಾಗ ಆಕೆ ತನ್ನೊಳಗೇ ನಗುತ್ತಿದ್ದಳು.

ಅಪ್ರೊಡೈಟಿಗೆ ನನ್ನನ್ನು ನೋಡಿದಕೂಡಲೇ ಮುಖ ಅರಳಿತು. ಮುಖದ ಬಿಳುಪು ನಾಚಿಕೆಯಿಂದಲೂ, ಬಿಸಿಲಿನ ಪ್ರಖರಣ ಕಿರಣಗಳಿಂದಲೂ ಕೆಂಪಾಯಿತು. 'ಆಕೆ' ಕೊಂಚ ಅಧೀರಳಾದಳು. ನಾನೇ ಮಾತಿಗೆ ತೊಡಗಿದೆ. ಅಲ್ಲೀ ನಿಂತು ಮಾತನಾಡಿದರೆ ಯಾರಾದರೂ ತಪ್ಪುತಿಳಿಯಲು ಅವಕಾಶವಿದೆಯೆಂದು ನಿಧಾನವಾಗಿ ಹೆಜ್ಜೆಹಾಕುತ್ತಾ ಸಂಭಾಷಿಸುತ್ತಾ ನಡೆದೆವು.

"ನಾನು ನಿಮಗೆ ಕಾಗದ ಬರೆದ ವಿಷಯ ಮರೆತಿಲ್ಲವೆಂದು ತೋರುತ್ತೆ.... ಕಾಗದಕ್ಕೆ ನಿಮ್ಮಿಂದ ಯಾವ ಉತ್ತರವೂ ಬರಲಿಲ್ಲ....ನಾನು ಈವರೆವಿಗೂ ಕಾದುನೋಡಿ, ಕಡೆಗೆ ನಾನೇ ಬರಬೇಕಾಯಿತು" ಎಂದೆ. ಮೊದಮೊದಲು ಮಾತು ಸರಾಗವಾಗಿ ಬರಲಿಲ್ಲ.

"ನಾನು ನಿಮಗೆ ಕಾಗದ ಬರೆಯುವ ಮನಸ್ಸಿತ್ತು. ಆದರೆ ಹಾಸ್ಟಲು ವಿಳಾಸಕ್ಕೆ ಬರೆಯಲು ನನಗೆ ಧೈರ್ಯವಾಗಲಿಲ್ಲ. ಕಾಗದ ನಿಮಗೆ ಸಿಕ್ಕುವ ಬದಲು ಬೇರೆಯವರ ಕೈಗೆ ಸಿಕ್ಕಿಬಿಟ್ಟರೆ ಎಂದು ಹೆದರಿದೆ....ಹಾಸ್ಟಲು ಸಮಾಚಾರ ಹೇಳುವುದಕ್ಕೆ ಬರುವುದಿಲ್ಲ" ಎಂದಳು.

"ನೀವು ಕಾಗದ ನನ್ನ ವಿಳಾಸಕ್ಕೆ ಬರೆದಿದ್ದರೆ ಅದು ಖಂಡಿತ ನನಗೆ ತಲಪುತ್ತಿತ್ತು. ನನ್ನ ಪತ್ರಗಳನ್ನು ಯಾರೂ ಒಡೆಯುವುದಿಲ್ಲ. ಒಂದು ವೇಳೆ ಒಡೆದರೂ ಆ ನನ್ನ ಮಿತ್ರರು ಮೂವರು – ಒಡೆಯಬೇಕು. ಅವರು ಕಾಗದ ಒಡೆದರೆ ಏನೂ ಬಾಧಕವಿಲ್ಲ. ಅವರಿಗೆ ನಾನೇ ತೋರಿಸುತ್ತಿದ್ದೆ. ನಾನು ನಿಮ್ಮ ವಿಷಯದಲ್ಲಿ ಯಾವುದನ್ನೂ ಬಚ್ಚಿಟ್ಟುಕೊಳ್ಳದೆ ಅವರಿಗೆ ಹೇಳಿದ್ದೇನೆ."

"ಏನು....ಅವರಿಗೂ ಹೇಳಿಬಿಟ್ಟದ್ದೀರಾ?" ಆಕೆಯ ಮುಖ ವಿವರ್ಣವಾಯಿತು. ನನ್ನ ಮಾತನ್ನು ಕೇಳಿ 'ಆಕೆ' ಗಾಬರಿಗೊಂಡಳು.

" ನೀವು ಭಯಪಡುವ ಕಾರಣವಿಲ್ಲ. ಅವರು ನನ್ನ ಪ್ರಾಣಸ್ನೇಹಿತರು–ನನ್ನ ಆಪ್ತಗೆಳೆಯರು. ' ಅವರು ಬೇರೆಯಲ್ಲ, ನಾನು ಬೇರೆಯಲ್ಲ ' ಎನ್ನುವ ಭಾವನೆ ನಮ್ಮನಮ್ಮಲ್ಲಿದೆ." ನಾನು ಸಮಾಧಾನ ಮಾಡಿದೆ.

" ಹಾಗಾದರೆ ನೀವು ಕೂಸು ಹುಟ್ಟುವುದಕ್ಕಿಂತ ಮುಂಚೆ ಸಕ್ಕರೆ ಹಂಚಿದರು ಅನ್ನುವಂತೆ ಮಾಡಿದ್ದೀರಿ...." ಎಂದು ನಗೆಯಾಡಿದಳು.

" ನನ್ನ ಪತ್ರದ ಬಗ್ಗೆ ನೀವು ಏನೂ ತಪ್ಪು ತಿಳಿಯಲಿಲ್ಲವಷ್ಟೆ ? "

ಆಕೆ ತಲೆಯಲ್ಲಾಡಿಸಿ ನಕ್ಕಳು.

" ಏನೋ ಹುಚ್ಚು ಹುಚ್ಚಾಗಿ ಬರೆದುಬಿಟ್ಟದ್ದೆ. ಆದರೂ ಅದು ನಿಮ್ಮ ಬಗ್ಗೆ ನನಗಿರುವ ಭಾವನೆಗಳನ್ನು ಪ್ರತಿಬಿಂಬಿಸಲು ಸಾಕು....ಇರಲಿ, ಅದರ ವಿಷಯ ಏನುಮಾಡಿದಿರಿ ? ನನಗೆ ಯಾವುದನ್ನೂ ತಿಳಿಸಿಬಿಟ್ಟರೆ ತುಂಬಾ ಉಪಕಾರ ಮಾಡಿದಹಾಗೆ ಆಗುತ್ತದೆ. ನನಗೆ ಪತ್ರ ಬರೆದಲಾಗಾಯಿತೂ, ಓದು ಸಾಗುತ್ತಿಲ್ಲ – ಯೋಚನೆಯಿಂದ. ಪರೀಕ್ಷೆಗಳು ಹತ್ತಿರ ಬರುತ್ತಿವೆ...."

" ಹಾಗಾದರೆ ಈ ವಿಷಯವನ್ನು ತಲೆಗೆ ತುಂಬಾ ಹಚ್ಚಿಕೊಂಡು ಬಿಟ್ಟಿದ್ದೀರಿ. ನೀವು ಹಾಗೆ ಮಾಡಬಾರದಾಗಿತ್ತು. ಅದೂ ಈ ಹೊತ್ತಿನಲ್ಲಿ...."

" ಏನು ಮಾಡುವುದು. ಆ ಕೆಲಸ ನನ್ನ ಕೈಮಿಂಚಿಹೋಯಿತು. ನಿಮ್ಮ ವಿಷಯವಾಗಿ ನಾನು ಅಷ್ಟೊಂದು ತಲೆ ಕೆಡಿಸಿಕೊಳ್ಳಬಾರದಿತ್ತು. ಎಲ್ಲಾ ವಿಷಯದಲ್ಲಿ ಸಂಯಮದಿಂದ ವರ್ತಿಸುತ್ತಿದ್ದ ನನಗೆ ಈ ವಿಷಯದಲ್ಲಿ ಸಂಯಮ ಉಳಿಯದೆ ಹೋಯಿತು. ಒಳಗೆ ಅಡಗಿಸಿದ್ದ ಭಾವನೆಗಳ ಪ್ರವಾಹದ ಹೊಡೆತಕ್ಕೆ ಸಂಯಮದ ಕಟ್ಟೆ ನಿಲ್ಲದೆ ಹೋಯಿತು. ನನಗೆ ಈಗ ಅನ್ನಿಸುತ್ತದೆ – ನಿಮ್ಮಲ್ಲಿ ನಾನು ಇಲ್ಲದ ಹೊಂಗನಸನ್ನು ಕಾಣಬಾರದಿತ್ತು ಎಂದು. ಆದರೆ ಇದನ್ನು ನಾನು ತಿಳಿಯುವ ಹೊತ್ತಿಗೆ ತುಂಬಾ ಆಳಕ್ಕೆ ಇಳಿದುಬಿಟ್ಟದ್ದೆ...."

" ನೀವು ಇಷ್ಟೆಲ್ಲಾ ಹಚ್ಚಿಕೊಂಡಿದ್ದೀರಿ ಎಂದು ನಾನು ಅಂದುಕೊಂಡಿರಲಿಲ್ಲ. ಇಲ್ಲದಿದ್ದರೆ ಈ ಮೊದಲೇ ಬರೆದಾದರೂ ತಿಳಿಸುತ್ತಿದ್ದೆ. ನೀವು ಯಾಕೆ ಸಾವಕಾಶಮಾಡಿದಿರಿ ? ....ಕಾಗದ ಕೊಟ್ಟ ಮಾರನೆಯ ದಿನ ನೀವು ಉತ್ತರಕ್ಕಾಗಿ ಬಂದು ಕೇಳುವಿರಿ ಎಂದು ಭಾವಿಸಿದ್ದೆ. ಆದರೆ ನೀವು ಇತ್ತ

ಸುಳಿಯಲಿಲ್ಲ. ಎಲ್ಲೋ ಈ ವಿಷಯ ಮರೆತುಬಿಟ್ಟಿದ್ದಾರೆ ಎಂದು ಅಂದು ಕೊಂಡು ನಾನು ಸುಮ್ಮನಾದೆ....ನೀವು....ಇಷ್ಟೊಂದೂ....ಹೀಗೇ...." ಆಕೆ ಮಾತು ಪೂರೈಸುವ ಮುನ್ನ ನಾನು ಬಾಯಿಹಾಕಿದೆ. ಆಕೆಯ ಮಾತನ್ನು ಪೂರ್ತಿ ಕೇಳುವಷ್ಟು ಸಮಾಧಾನವಿದ್ದರೆ ತಾನೆ?

"ಯಾವುದನ್ನೂ ಈಗಲಾದರೂ ಹೇಳಿಬಿಡಿ...."

"ನಿಂತ ಹೆಜ್ಜೆಯಲ್ಲಿ ಹೇಳೆಂದರೆ........ನಾನು ಏನು ಹೇಳಲಿ?" ಅಪ್ರೊಡೈಟೆ ಒಂದು ಬಗೆಯ ಮುಖಮಾಡಿ ಹೇಳಿದಳು.

"ಯಾಕೆ? ನೀವು ಆಲೋಚಿಸಲಿಲ್ಲವೆ? ಇಷ್ಟು ದಿನಗಳವರೆಗೂ?"

'ಆಕೆ' ನನ್ನ ಮಾತನ್ನು ಕೇಳಿ ದುಗುಡಗೊಂಡ ಧ್ವನಿಯಲ್ಲಿ ಹೇಳಿದಳು. "ಇದು ಇಷ್ಟು ಗಹನವಾಗುತ್ತದೆಂದು ನಾನು ತಿಳಿದಿರಲಿಲ್ಲ" ಎಂದು ಹೇಳಿ ಮತ್ತೇನನ್ನೋ ಹೇಳಲು ನೋಡಿದಳು. ಆದರೆ ಬಾಯಿ ಕಟ್ಟಿತ್ತು.

"ನೀವು ಏನೂ ಯೋಚಿಸಬೇಡಿ, ನನ್ನ ಪ್ರಶ್ನೆಗೆ ಆಗಲಿ – ಇಲ್ಲ ಎಂದು ಎರಡು ಮಾತುಗಳಲ್ಲಿ ಹೇಳಿಬಿಟ್ಟರೆ—ನಿಮ್ಮ ವಿಷಯದಿಂದ ಮನಸ್ಸನ್ನು ಕೀಳಲು ಪ್ರಯತ್ನಿಸುತ್ತೇನೆ."

ಆಕೆ ಒಂದು ಚಣಕಾಲ ಆಲೋಚಿಸಿದಳು. ನನ್ನ ಪ್ರಶ್ನೆ 'ಆಗಲಿ–ಇಲ್ಲ' ಗಳಿಂದ ಉತ್ತರ ಹೇಳುವಷ್ಟು ಸುಲಭದ ಪ್ರಶ್ನೆಯಾಗಿರಲಿಲ್ಲ. ಅದು ಬದುಕಿನ ಪ್ರಶ್ನೆ!

"ನೀವು ಏನನ್ನೋ ಹೇಳಲು ಹಿಂತೆಗೆಯುತ್ತಿದ್ದೀರಿ. ಬಹುಶಃ ನೀವು ಸ್ವತಂತ್ರ ವ್ಯಕ್ತಿಯಲ್ಲದಿರಬಹುದು, ಅಥವಾ ಬೇರೊಬ್ಬರ ಮೇಲೆ ಮನಸ್ಸಿರಬಹುದು. ಇಲ್ಲಾ, ನಿಮ್ಮದೇ ಬೇರೆ ಜಾತಿಯಾಗಿರಬಹುದು. ಈ ವಿಷಯಗಳನ್ನು ಹೇಗೆ ಹೇಳುವುದೆಂದು ನೀವು ಹಿಂದು ಮುಂದು ತುಳಿಯುತ್ತಿರಬೇಕು. ಆದರೆ ಈ ವಿಷಯದಲ್ಲಿ ಸಂಕೋಚಕ್ಕೆ ಕಾರಣವಿಲ್ಲ...."

"ಹಾಗೇನೂ ಇಲ್ಲ....ನಾನೂ ನಿಮ್ಮ ಜಾತಿಯೇ—"

"ಹಾಗಾದರೆ ಯೋಚನೆಯ ಕಾರಣ?"

'ಆಕೆ' ಮಾತನಾಡಲಿಲ್ಲ. ದೃಷ್ಟಿ ನೆಲದಲ್ಲಿ ನೆಟ್ಟಿತ್ತು. ಅಂಗುಷ್ಠ ನೆಲವನ್ನು ಕೊರೆಯುತ್ತಿತ್ತು.

"ನಾವು ಚಿಕ್ಕವರು – ಈ ವ್ಯವಹಾರದಲ್ಲಿ ತೊಡಗಿರುವೆವೆಂದೆ?

ನೀವೇನೂ ಆಲೋಚಿಸಬೇಡಿ. ನಿಮ್ಮ ಒಪ್ಪಿಗೆಯೊಂದು ದೊರೆತರೆ ಮುಂದೆ, ಪರೀಕ್ಷೆಗಳು ಮುಗಿದನಂತರ ದೊಡ್ಡವರ ಮೂಲಕ ಈ ವಿಷಯ ಪ್ರಸ್ತಾಪ ಸರಿಯಾದ ರೀತಿಯಲ್ಲಿ ಮಾಡಿಸೋಣ !" ಎಂದೆ.

"ಹೂಂ, ಹಾಗೆಯೇ ಮಾಡೋಣ. ಆದರೆ ನಮ್ಮ ತಂದೆಯವರು ಒಂದು ತರಹ ಕಂದಾಚಾರದವರು. ಅವರು ತುಂಬಾ ಸೂಕ್ಷ್ಮ. ಈ ಕೆಲವು ವಿಷಯಗಳಲ್ಲಿ....ನಮ್ಮ ಅಜ್ಜಿಯೂ ಅಷ್ಟೇ ಪೂರ್ವಕಾಲದವರು. ನಮ್ಮ ಸುದ್ದಿ ತಿಳಿದರೆ- ಅವರು ತಪ್ಪು ತಿಳಿಯುತ್ತಾರೆ....ಹೀಗಾಗಿ ನಾನು ನಿಮ್ಮ ಪತ್ರವನ್ನು ತಂದೆಯವರಿಗೆ ಕಳುಹಿಸಿ ಕೊಡಲಿಲ್ಲ...." ಎಂದಳು ರಾಗವಾಗಿ.

"ಹಾಗಾದರೆ ನಿಮ್ಮ ತಂದೆಯವರು ಇಲ್ಲಿಲ್ಲ....?"

"ಇಲ್ಲ, ಹನಿಗಿರಿಯಲ್ಲಿದ್ದಾರೆ. ಅದೇ ನಮ್ಮ ಸ್ಥಳ.

"ಹೆಸರು ?"

"...............ರಾಯರು"

"ಕೆಲಸ ?"

"ಅಲ್ಲಿನ ಹೈಸ್ಕೂಲಿನಲ್ಲಿದ್ದಾರೆ.........ಹಿರಿಯರು - ಹಿರಿಯರು ಬೇಕಾದರೆ ಈ ವಿಷಯದಲ್ಲಿ ಮಾತನಾಡಿಕೊಳ್ಳಲಿ. ಪತ್ರವ್ಯವಹಾರ ನಡೆಸಲಿ. ನಾವು ಬರೆಯುವುದು ಬೇಡ. ಇದು ಅಷ್ಟು ಚೆನ್ನಾಗಿರುವುದಿಲ್ಲ........"

"ಹಾಗಾದರೆ ನಿಮ್ಮ ವಾಸ ?"

"ನಮ್ಮಜ್ಜಿಯ ಮನೆಯಲ್ಲಿ— ನಮ್ಮ ಸೋದರತ್ತೆಯ ಮನೆಯಲ್ಲಿ ಓದಿ ಕೊಂಡಿದ್ದೇನೆ."

"ನಿಮ್ಮ ಮನೆಯ ಪತ್ತೆ ?"

"ಇಲ್ಲಿಂದ ಬಲದ ರಸ್ತೆಗೆ ತಿರುಗಿಕೊಂಡರೆ....ರಸ್ತೆ ನಿಮಗೆ ಗೊತ್ತಾ ?"

"ಇಲ್ಲ, ಇಲ್ಲಿನ ರಸ್ತೆಗಳ ಪರಿಚಯ ನನಗಿಲ್ಲ."

"ಹೋಗಲಿ, ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದಾರಲ್ಲಾ........ಅವರ ಮನೆ ಗೊತ್ತಿದೆಯೇ ? ಅವರ ಬೀದಿಯಲ್ಲಿಯೇ ನಮ್ಮ ಮನೆ........ಮಹಡಿಯ ಮನೆ........"

"ನಿಮ್ಮನ್ನು ತುಂಬಾ ಹೊತ್ತು ನಿಲ್ಲಿಸಿಕೊಂಡೆ. ನಾನಿನ್ನು ಬರು ತ್ತೇನೆ......." ಎಂದು ಹೊರಡಲು ಅನುವಾದೆ.

"ಒಂದು ನಿಮಿಷ.......ನಿಮ್ಮಲ್ಲಿ ನಿಮ್ಮ ಪುಸ್ತಕ. ಯಾವುದು ಅದು .......ವಿಜಯ ಯಾತ್ರೆಯ ಪ್ರತಿ ಇದೆಯೇ?"

"ಹೂಂ."

"ಇದ್ದರೆ ತಂದುಕೊಡುತ್ತೀರಾ? ಓದಿಕೊಡುತ್ತೇನೆ."

"ಆಗಲಿ, ತಂದುಕೊಡುತ್ತೇನೆ. ನಾಳೆ ಕಾಲೇಜಿನಲ್ಲಿ ಸಿಗುತ್ತೀರಾ?"

"ಎಲ್ಲಿ?"

"ಯೂನಿವರ್ಸಿಟಿ ಲೈಬ್ರೆರಿಯಲ್ಲಿ. ಎರಡನೆಯ 'ಪೀರೀಡ್' ನನಗೆ ವಿರಾಮವಿದೆ. ಆಗ ನೋಡುತ್ತೇನೆ".

"ನಮಸ್ತೆ"

ನನ್ನ ಹೃದಯ ಹೂವಿನಷ್ಟು ಹಗುರವಾಗಿತ್ತು. ಗಾಳಿಯಲ್ಲಿ ಹಾರಿ ಕೊಂಡು ಕೊಠಡಿಗೆ ಬಂದು ಬಿದ್ದೆ.

ಅಂದಿನ ನನ್ನ ಉತ್ಸಾಹ, ಸಂತೋಷ, ಸಂಭ್ರಮಕ್ಕೆ ಎಣೆಯೇ ಇರಲಿಲ್ಲ. ಆ ಕ್ಷಣಕ್ಕೆ ಜಗತ್ತಿನಲ್ಲೆಲ್ಲಾ ನಾನೇ ಭಾಗ್ಯಶಾಲಿ. ಪುಣ್ಯಪುರುಷ ನೆಂದು ಭಾವಿಸಿದೆ.

ಗೆಳೆಯರಿಗೆ ಈ ಸುದ್ದಿ ತಿಳಿದಾಗ ಎಲ್ಲರಿಗೂ ಮೈ ಉಬ್ಬಿತು.

"ಇದೊಂದು ಆದರ್ಶ ಜೋಡಿ!" ಎಂದರು ಶ್ರೀಕಾಂತನ್—ನನ್ನ ಕಥೆಯನ್ನೆಲ್ಲಾ ಕೇಳಿದಮೇಲೆ.

ಅಂತೂ ಮೂರು ದಿನಗಳಲ್ಲಿ ಯಾವ ನಿಶ್ಚಯ ತಿಳಿಸುವುದಾಗಿ ಹೇಳಿದ್ದ ನನ್ನ ಮಾತು ಈಗ ನಿಜವಾಯಿತು.

"ಅಂತೂ ಮೂರ್ತಿಗೆ ಒಬ್ಬ 'ಲಿಪಿ'ಗಾರಳು ಸಿಕ್ಕಿದಹಾಗಾಯಿತು. ಇನ್ನು ಬರೆದ ಬರಹಗಳನ್ನು ಪ್ರತಿ ಮಾಡುವ ಕೆಲಸವನ್ನು 'ಆಕೆ' ಮಾಡು ತ್ತಾಳೆ" ಎಂದರು ಬಾನಾಡಿ.

"ಓಹೋ ಬೇಷಕ್ಕಾಗಿ. ಆಕೆಯ ಕೈ ಬರಹ ಸುಂದರವಾಗಿದೆ— ಶ್ರೀಧರ್‌ರಾಯರ ಬರಹ ಇದ್ದಂತೆ!"

"ನನಗೆ ದೊಡ್ಡ ತಾಪತ್ರಯ ಕಳೆದುಹೋಯಿತು" ಎಂದರು ಬಾನಾಡಿ

ಚೋದ್ಯಮಾಡುತ್ತಾ. ಈವರೆವಿಗೂ ನನ್ನ ಎಲ್ಲಾ ಬರಹಗಳನ್ನು ಅವರೇ ಪ್ರತಿ ಮಾಡಿಕೊಡುತ್ತಿದ್ದರು.

"ಪರವಾಗಿಲ್ಲ. ಒಳ್ಳೆಯ ಹಿಂದಿ ಮೇಷ್ಟ್ರು ಮೂರ್ತಿಗೆ ಸಿಕ್ಕಿಹೋದರು. ಮೂರು ತಿಂಗಳಲ್ಲಿ ಹಿಂದಿ ಕಲಿಸಿಬಿಡುತ್ತಾರೆ." —ಶ್ರೀಕಾಂತನ್ ಬಾಯಿ ಹಾಕಿದರು.

"ಅಂದರೆ ?"

"ಆಕೆಯ 'ಐಚ್ಛಿಕಭಾಗ' ಹಿಂದಿ ಕಾಣ್ರಿ. ನಿಮಗೆ ಹೇಗೂ ಹಿಂದಿ ಬರೊಲ್ಲ. ಕಲಿಬೇಕೂಂತ ನಾಲ್ಕು ಬಾರಿ ಪ್ರಯತ್ನಿಸಿ ಅರ್ಧಕ್ಕೆ ಕೈಬಿಟ್ಟರಿ. ಈಗ ಹಿಂದಿ ಮೇಡಂ ಮನೆಯಲ್ಲಿದ್ದ ಮೇಲೆ! ದಿನಾಗಲೂ 'ಆಕೆ' ತಿದ್ದಿಹಾಕಿ, ಹೊಡೆದು ಕಲಿಸಿಕೊಡುತ್ತಾಳೆ! 'ಐ ಮೀನ್' (ಅಂದರೆ) ಯಾರೂ ಇಲ್ಲದೆ ಇರುವಾಗ - ಮುದ್ದಿಗಾಗಿ" ಎಂದರು ಶ್ರೀಕಾಂತನ್.

"ಓ ! ಎಂತಹ ಸವಿಗನಸು ಶ್ರೀಕಾಂತನ್" ಎಂದೆ ನಾನು.

"ಮಜಾ ಮಾಡಿ ಸಾರ್, ನನಗಂತೂ ಅಂತಹ ಅವಕಾಶ ಸಿಗಲಿಲ್ಲ. ನೀವಾದರೂ ಸುಖವಾಗಿರಿ"

"ಏನು ? ಯಾವಾಗಲಿಂದ ನಿಮ್ಮ 'ಕಂಜೈಂಡ್ ಸ್ಟಡಿ'" ಬಾನಾಡಿ ನಗುತ್ತಾ ಪ್ರಶ್ನಿಸಿದರು.

"'ಆಕೆ' ತುಂಬಾ ಘಾಟಿ ಹುಡುಗಿ ಕಾಣ್ರಿ. ಮನೆಗಲ್ಲಿ ಬಂದು ಹೋಗು ತ್ತೀನೋ ಅಂತ ಮುನ್ನೆಚ್ಚರಿಕೆ ಕೊಟ್ಟಿದ್ದಾಳೆ. ನಮ್ಮಜ್ಜಿ ತುಂಬಾ ಹಳೇ ಕಾಲ್ದೋರು ಅಂತ........ಇದರರ್ಥ ಏನ್ಗೊತ್ತೆ ? ನೀವು ಮನೆಗೆ ಬಂದರೆ ಅವರು ಅಪಾರ್ಥ ಮಾಡಿಕೊಳ್ಳುತ್ತಾರೆ. ನಮಗೆ ತೊಂದರೆಯಾಗುತ್ತೆ ಬರ ಬೇಡಿ ಅಂತ........"

"ಹಾಗಾದರೆ ತುಂಬಾ ಬುದ್ಧಿವಂತಿಕೆ ಹುಡುಗಿ ಕಾಣ್ರಿ !"

"ನಾನು ಈ ವಿಚಾರಾನ ಅಷ್ಟು 'ಸೀರಿಯಸ್' ಆಗಿ ತಗೊಂಡು ಓದೋಕೆ ತೊಂದ್ರೆ ಮಾಡಿಕೊಳ್ಳಬಾರ್ದಿತ್ತು ಅಂತ - ನನಗೆ ಬುದ್ಧಿ ಹೇಳಿದ್ದಲ್ಲರಿ !"

"ಭೇಷ್ ಹಾಗಾದ್ರೆ......ನಿಮ್ಮ ಕಿವಿ ಹಿಂಡಲು ಯೋಗ್ಯ ಆಸಾಮಿನೇ ಸಿಕ್ಕಿದ ಹಾಗಾಯಿತು !" ಎಂದರು ಬಾನಾಡಿ.

ನನ್ನ ಸಂತೋಷ ಗೆಳೆಯರ ಸಂತೋಷವಾಯಿತು. ಶ್ರೀಧರ್ ಮಾ
"ಹೋಗಲಿ, ಈಗಲಾದರೂ ಆ ವಿಷಯವನ್ನ ಒಂದುಕಡೆ ಹಾಕಿಬಿಟ್ಟು ಓ
ಕಡೆ ಗಮನಕೊಡಿ. ಪರೀಕ್ಷೆ ಆದಮೇಲೆ ಮತ್ತೆ ಅದರಲ್ಲಿ ಮುಳುಗಿಮೀ

ಅವರ ಮಾತು ನನ್ನ ಕಿವಿತನಕ ಬರಲೇ ಇಲ್ಲ. ನಾನು ಭೂಮಿ
ಮೇಲೆ ಇದ್ದರೆ ತಾನೆ? ಸಪ್ತಮ ಸ್ವರ್ಗದಲ್ಲಿದ್ದೆ!

ಈ ಸುದ್ದಿಯನ್ನು ಅನಂತ್ ಅವರಿಗೆ ಅಂದೇ ತಿಳಿಸಿದೆ. "ನೀ
ಅದೃಷ್ಟವಂತರು. ಗ್ರಹಗತಿ ಚನ್ನಾಗಿದೆ" ಎಂದು ತಮ್ಮ ಆಸೆ ಸಫಲಗೊ
ಡಷ್ಟೇ ಪರಮಾನಂದ ಹೊಂದಿದರು.

ಆದರೆ ಈ ವೇಳೆಗೆ ನನ್ನ ಹಿಗ್ಗು ಅರ್ಧ ಇಳಿದಿತ್ತು. ಕಾರಣ: ಅಕ್ಕ
ನನ್ನ ತಲೆಯನ್ನು ಹೊಕ್ಕಿದ್ದಳು. ಸಂತೋಷಪಡುವ ಹೊತ್ತಿನಲ್ಲಿ ಪೆಚ್ಚಾಗಿರ
ವುದನ್ನು ಕಂಡು ಅನಂತ್ ಹೇಳಿದರು. "ಯಾಕೆ ಸಪ್ಪಗಿದ್ದೀರಿ. ಮನಸ್ಸಿನಲ್ಲಿ
ಏನೋ ಯೋಚಿಸುತ್ತಿದ್ದೀರಲ್ಲಾ?"

"ಏನೂ ಇಲ್ಲ. ಇದೇನೋ ಒಂದು ರೀತಿಯಲ್ಲಿ ನಿರ್ಧರಿಸಿದಂ
ಆಯಿತು. ಆದರೆ ಮುಂದೆ, ನಮ್ಮ ತಂದೆಯವರು ಒಪ್ಪದೆ ಹೋದರೆ!"

"ನಾನು ಮಧ್ಯಸ್ಥಿಕೆ ವಹಿಸಿ ಅಪ್ರೊಡೈಟಿಯ ತಂದೆಯನ್ನು ಪರೀಕ್ಷೆ
ಯಾದಮೇಲೆ ಕಂಡುಬರುತ್ತೇನೆ. ನಿಮ್ಮ ತಂದೆ ಒಂದು ವೇಳೆ ಅಸಹಕರಿಸಿದರೆ
ನಾನೇ ನಿಂತು ಮದುವೆ ನಡೆಸಿಕೊಡುತ್ತೇನೆ. ನನ್ನ ಬಾಳಿನಲ್ಲಿ ದೊರೆಯದ
ಹರಕೆ ನಿಮ್ಮ ಬಾಳಿನಲ್ಲಿ ಕೈಗೂಡಿತಲ್ಲಾ, ನನ್ನ ತಪಸ್ಸಿನ ಫಲ ನಿಮಗಾದರೂ
ಸಿಕ್ಕಿತಲ್ಲಾ ಎಂದು – ನನಗೆ ಈಗ ಎಷ್ಟು ಹಿಗ್ಗು ಗೊತ್ತೇ.... ಈ ಬಗ್ಗೆ
ನೀವೇನೂ ಯೋಚಿಸಬೇಡಿ."

"ಈ ವಿಷಯ ಹೇಗೋ ಆಗುತ್ತದೆ. ಆದರೆ ನಾಳೆ ಅಕ್ಕನ ಮಗಳು
ಬೇಡಾ ಅಂದರೆ, ಅದರ ಬೆನ್ನಿಗೆ ಅವರು ಕೊಟ್ಟಿರುವ ಹಣ ಕೊಟ್ಟು
ಬಿಡಬೇಕಲ್ಲಾ. ತಂದೆಯವರು ನನ್ನೊಡನೆ ಸಿಟ್ಟುಮಾಡಿಕೊಂಡರೆ ಈ
ಹಣ ತೀರಿಸುವ ದಾರಿ? ಇಷ್ಟೊಂದು ಹಣ ನನಗೆ ಯಾರು ಕೊಡುತ್ತಾರೆ?"

"ಇಷ್ಟೇ ತಾನೆ? ಇದನ್ನೂ ನಾನು ವ್ಯವಸ್ಥೆಮಾಡುತ್ತೇನೆ. ನಾನೇ
ಹಣ ಕೊಟ್ಟು ಆ ಸೆರೆಯಿಂದ ನಿಮ್ಮನ್ನು ಬಿಡಿಸುತ್ತೇನೆ. ನನಗೆ ಹೇಗೂ
ಕೊಂಚ ಹಣ ಬರುವುದಿದೆ – ಮುಂದಿನ ಜೂನ್ ಹೊತ್ತಿಗೆ. ನಿಮ್ಮ

ಭಾವನವರ ಹೆಸರಿಗೆ ಆ ಹಣಕ್ಕೆ ಚಕ್ಕು ಕಳುಹಿಸಿಕೊಡುತ್ತೇನೆ. ಅಲ್ಲಿಯವರೆಗೆ ಅವರು ತಡೆಯಲಾರರಾ ?"

"ಬಹುಶಃ ತಡೆಯಬಹುದೆಂದು ತೋರುತ್ತೆ. ಆದರೆ ನಿಮ್ಮ ಸಂಸಾರ ನಿಮಗೆ ಹೊರುವಷ್ಟು ಇರುವಾಗ ನಾನು ಇನ್ನಷ್ಟು ಹೊರೆ ಹೊರಿಸುವುದು ಹೇಗೆ ?"

"ಇದನ್ನು ನಾನು 'ಹೊರೆ' ಎಂದು ತಿಳಿಯುವುದೇ ಇಲ್ಲ. ಗೆಳೆಯನೊಬ್ಬನನ್ನು ಮನುಷ್ಯನನ್ನಾಗಿ ಮಾಡಲು ಗೆಳೆಯನ ಕರ್ತವ್ಯವೆಂದು ತಿಳಿಯುತ್ತೇನೆ. ನಿಮ್ಮ ಸುಖವೇ ನನ್ನ ಸುಖ – ನೀವು ದಂಪತಿಗಳು ಅನ್ಯೋನ್ಯವಾಗಿದ್ದರೆ ನಿಮ್ಮನ್ನು ನೋಡುತ್ತಿರುವುದೇ ಆನಂದ. ನನ್ನ ಹಣಕ್ಕಾಗಿ ನನಗೆ ಭಯವಿಲ್ಲ. ಮುಂದೆ ನೀವು ಸಂಪಾದಿಸುವ ಕಾಲಕ್ಕೆ ತೀರಿಸುತ್ತೀರೆನ್ನುವ ನಂಬಿಕೆ ನನಗಿದೆ."

"ನಿಮ್ಮ ಸಹಾಯಕ್ಕೆ ಪ್ರತ್ಯುಪಕಾರ ಯಾವ ರೀತಿಯಾಗಿ ಮಾಡಿ ಋಣಮುಕ್ತನಾಗಲಿ ?"

"ನಿಮ್ಮ ಒಲಿದ ಹೃದಯಗಳು ಒಂದಾದರೆ ಅದನ್ನು ನೋಡುವುದಕ್ಕಿಂತಲೂ ಹೆಚ್ಚಿನ ಪ್ರತ್ಯುಪಕಾರ ನನಗೆ ಬೇಕಿಲ್ಲ" ಎಂದರು ಅನಂತ್.

ರಾತ್ರಿ ಕಳೆದು ಹಗಲು ಬಂತು. ಒಂದು ರಾತ್ರಿಯಲ್ಲೇ ನಾನು ಹೊಸಮನುಷ್ಯನಾಗಿದ್ದೆ. ಚಿಂತೆಯ ಕಪ್ಪುಹೊದಿಕೆಯನ್ನು ನಿಶಾದೇವಿಗೆ ಅರ್ಪಿಸಿಬಿಟ್ಟು ಸುಪ್ರಭಾತದ ಬೆಳಕಿನಲ್ಲಿ ಹೊಸ ಮೂರ್ತಿಯಾಗಿದ್ದೆ.

ಎರಡನೆಯ 'ಪಿರೀಡ್' ನನಗೆ ವಿರಾಮ. ನಾನು ಅಪ್ರೊಡೈಟಿಯ ಬರುವಿಗಾಗಿ 'ವಿಜಯ ಯಾತ್ರೆ' ಯನ್ನೂ, ಆ ತಿಂಗಳ 'ಪುಸ್ತಕ ಪ್ರಪಂಚ' ವನ್ನೂ ತೆಗೆದುಕೊಂಡು – ಯೂನಿಯನ್ ಹತ್ತಿರ ಸುತ್ತುತ್ತಿದ್ದೆ. ಪುಸ್ತಕ ಪ್ರಪಂಚದಲ್ಲಿ ನನ್ನದೊಂದು ಬರಹ ಅಚ್ಚಾಗಿ ಬಂದಿತ್ತು.

'ಆಕೆ' ಹನ್ನೊಂದೂವರೆಗೆ ಬರುವುದಾಗಿ ಹೇಳಿದ್ದವಳು ಹನ್ನೆರಡಾದರೂ ಬರಲಿಲ್ಲ. ಹನ್ನೆರಡೂ ಮುಕ್ಕಾಲಾಯಿತು. ಆಕೆಯು ಎಲ್ಲೋ ಮರೆತು ಬಿಟ್ಟಿರಬೇಕು, ಅಥವಾ ಬೇರೆ ಸ್ಥಳದಲ್ಲಿ ನನಗಾಗಿ ಕಾದು ಹಿಂತಿರುಗಿರಬಹುದು, ಎಂದುಕೊಂಡು ಕಾಲೇಜಿನ ಹೆಂಗಸರ ಕೊಠಡಿಯ ಬಳಿಗೆ ಬಂದೆ— ಅಲ್ಲಾದರೂ ಕಾಣಿಸುತ್ತಾಳೋ ಎಂದು.

ನಾನೆಂದೂ ಆ ಕಡೆ ಈ ಮೊದಲು ಹೋದವನೇ ಅಲ್ಲ. ಈ
ಕಾರ್ಯಭಾರದಿಂದ ಆ ಕೆಲಸಮಾಡಬೇಕಾಗಿತ್ತು. ಆಕೆ 'ಕಾರಿಡಾರ್'ನ
ಇರಲಿಲ್ಲ. ಕೋಣೆಯನ್ನು ಸೇರಿದ್ದಳು. ಹೇಗೆ ಆಕೆಯನ್ನು ಕರೆಯುವುದು
ನನಗೆ ತೋಚಲಿಲ್ಲ. ಏನೇ ಆಗಲಿ ಕರದೇ ಬಿಡೋಣವೆಂದು ಆ ಕೋಣೆಯ
ಬಾಗಿಲನ್ನು ಮುಂದುಮಾಡಿದೆ. ನನ್ನ ಮುಖವನ್ನು ಕಂಡು ಅಲ್ಲಿ
ಹರಟುತ್ತಾ ಕುಳಿತಿದ್ದ ಅಪ್ರೊಡೈಟ ಹೊರಬಂದಳು; ಬಂದು ತೀರ
ಸನಿಯದಲ್ಲಿ ನಿಂತುಕೊಂಡಳು.

"ನೀವು ಇಂದು ಸಿಗುವುದಾಗಿ ಹೇಳಿದ್ದಿರಿ. ಬಹುಶಃ ಮರೆತಿ
ಬೇಕೆಂದಿದ್ದೆ...." 'ಆಕೆ' ನನ್ನ ಮಾತನ್ನು ಗಮನಿಸಿದಂತೆ ತೋರಲಿಲ್ಲ.

"ನೀವೇನೂ ತಿಳಿಯದೆ ಇದ್ದರೆ – ಒಂದು ವಿಷಯ ಹೇಳಬೇಕೆಂದಿ
ದ್ದೇನೆ....ನಿನ್ನೆ ಯಾವುದಾದರೂ ನಿರ್ಧಾರ ಹೇಳಿಬಿಡಲು ಒತ್ತಾಯಪಡಿಸಿ
ದ್ದಿರಿ....ನಾನು ನಿನ್ನೆ ಎಲ್ಲಾ ವಿಷಯ ಆಲೋಚಿಸಿದೆ. ಕಡೆಗೆ ಈ ವಿಷಯ
ವನ್ನು ಇಲ್ಲಿಗೇ ಕೈಬಿಡಲು ನಿಶ್ಚಯಿಸಿದ್ದೇನೆ......." ಎಂದಳು ಇಂಗ್ಲೀಷಿನಲ್ಲಿ.

ನಾನು ಮಾತನಾಡಲು ಪ್ರಯತ್ನಿಸಿದೆ.

'ಆಕೆ' ಕರುಣಾಪೂರಿತ ದೃಷ್ಟಿಯಲ್ಲಿ "ದಯವಿಟ್ಟು....ದಯವಿಟ್ಟು
ನಾವು ಈ ವಿಷಯ ಇಲ್ಲಿಗೇ ಮರೆತುಬಿಡೋಣ...." ಎಂದಳು.

ಆಕೆಯ ಮಾತುಗಳನ್ನು ನನ್ನ ಕಿವಿ ನಂಬದಾದವು. ನಿನ್ನೆ ಹಾಗೆಂದಿದ್ದ
ವಳು ಇಂದು ಹೀಗೆ! ಇದು ಕನಸೋ ನನಸೋ! ನನಸಾಗಿದ್ದರೆ ಯಾರೋ
ನನಗಾಗದವರು ಹೀಗೆಂದು ಹೇಳುತ್ತಿದ್ದಾರೆ. ಅಪ್ರೊಡೈಟ ಹೇಳುತ್ತಿಲ್ಲ—
ಎಂದುಕೊಂಡೆ. ನನ್ನ ಮನಸ್ಸು ಚಿಕ್ಕದಾಯಿತು. ಮುಖ ಬಿಳಿಚಿಕೊಂಡಿತು.

"ನಿನ್ನೆ ನೀವು ಏನೆಲ್ಲಾ ಹೇಳಿದ್ದಿರಿ!"

"ದಯವಿಟ್ಟು ಅವುಗಳನ್ನು ಮರೆಯಿರಿ. ನಾವು ಈ ವಿಷಯವನ್ನು
ಇಲ್ಲಿಗೇ ಮರೆತುಬಿಡೋಣ!"

ಮತ್ತೆ ಅದೇ ಕರ್ಕಶವಾದ ಮಾತುಗಳು!

ನಾನು ಮನಸ್ಸನ್ನು ಹತೋಟಿಯಲ್ಲಿರಿಸಿಕೊಂಡು ಹೀಗೆಂದೆ. "ನೀವು
ದುಡುಕಬೇಡಿ. ಚನ್ನಾಗಿ ಆಲೋಚನೆ ಮಾಡಿ. ವಿಚಾರಮಾಡಲು ಇನ್ನೂ
ಅವಕಾಶವಿದೆ."

ಆಕೆಯು ಮೌನವಾಗಿದ್ದಳು. ನಾನೂ ಮೌನ. ಆಕೆಯ ದೃಷ್ಟಿ ನನ್ನ ಕೈಯಲ್ಲಿದ್ದ ಪುಸ್ತಕಗಳ ಕಡೆಗೆ ಹರಿಯಿತು.

"ನೀವು ತರುವುದಕ್ಕೆ ಹೇಳಿದ ಪುಸ್ತಕ...." ಎಂದು ಆಕೆಯ ಕೈಗಿತ್ತೆ. 'ಆಕೆ' ಸಂತೋಷದಿಂದ ತೆಗೆದುಕೊಂಡಳು.

"ಯಾವುದನ್ನೂ ಆಲೋಚಿಸಿ, ಪುಸ್ತಕ ಹಿಂತಿರುಗಿಸುವ ವೇಳೆಯಲ್ಲಿ ತಿಳಿಸಿಬಿಡಿ" ಎಂದೆನ್ನುತ್ತಾ ಅಲ್ಲಿ ನಿಲ್ಲದೆ ಕೊಠಡಿಗೆ ಬಂದುಬಿಟ್ಟೆ. ತಲೆ ಸುತ್ತುತ್ತಿತ್ತು. ಚಪ್ಪಡಿಯೊಂದನ್ನು ಹೇರಿದಷ್ಟು ತಲೆ ಭಾರವಾಗಿತ್ತು. ಎಂತಹ ವಿಚಿತ್ರ? ನಿನ್ನೆ ಹಾಗೆ! ಇಂದು ಹೀಗೆ! ನಿನ್ನೆ ಆಸೆ! ಇಂದು ನಿರಾಶೆ!! ನಿನ್ನೆ ಸುಖಿ; ಇಂದು ದುಃಖಿ! ತಲೆ ಬಿಸಿಯಾಗುತ್ತಾ ನಡೆದಿತ್ತು.

ಬಂದವನೇ ಮಂಚದಮೇಲೆ ಮಲಗಿಬಿಟ್ಟೆ—ಮಧ್ಯಾಹ್ನ ಚರಿತ್ರೆಯ ತರಗತಿಗೆ ಹೋಗಲೇ ಇಲ್ಲ........



# ನಾಲ್ವರು ಗೆಳೆಯರ ಮೂರಾಬಟ್ಟೆ

ಈ ಸುದ್ದಿ ನನ್ನ ಮೇಲೆ ಆಗುವುದಕ್ಕಿಂತಲೂ ಹೆಚ್ಚಿನ ಪರಿಣಾಮ ಗೆಳೆಯರ ಮೇಲೆ ಉಂಟಾಯಿತು. ಅವರು ಮೊದಲು ನಂಬದಾದರು. ಒಂದೇ ರಾತ್ರಿಯಲ್ಲಿ ಇಷ್ಟೊಂದು ಬದಲಾವಣೆಯೇ ಎಂದು ಚಕಿತರಾದರು. ಈ ಹೃದಯವಿದ್ರಾವಕ ಸುದ್ದಿ ಮೊದಲು ಶ್ರೀಧರ್‌ಗೆ ತಿಳಿಯಿತು. ಆತ ನನ್ನ ಜೋಲುಮೋರೆಯನ್ನು ಕಂಡೇ "ಏನಾಯಿತ್ರೀ? ಅಪ್ರೋಡೈಟಿಯನ್ನು ಕಂಡಿದ್ದಿರಾ?" ಎಂದರು.

"ಕಂಡಿದ್ದೆ, ನನ್ನೆಲ್ಲಾ ಆಸೆ ನೆಗೆದುಬಿತ್ತು" ಎಂದು ವಿಷಾದಪೂರ್ಣ ನಗೆ ನಕ್ಕು ಹೇಳಿದೆ.

ಶ್ರೀಧರ್ ಎಲ್ಲವನ್ನೂ ಸವಿಸ್ತಾರವಾಗಿ ಕೇಳಿ ಉಲ್ಲಾಸಗೊಂಡು ಹೇಳಿದರು: "ನೀವು ಈ ಇಲ್ಲದ ವ್ಯವಹಾರದಲ್ಲಿ ತೊಡಗಿ ನಿಮ್ಮ ಓದಿಗೆ ವಿಘ್ನ ತಂದುಕೊಳ್ಳುವುದರ ಜತೆಗೆ ಆಕೆಯ ಓದಿಗೂ ಭಂಗ ತರುತ್ತಿದ್ದಿರಿ. ಆದರೆ ದೇವರೇ ಆಕೆಗೆ ಸದ್ಬುದ್ಧಿಯನ್ನು ದಯಪಾಲಿಸಿ ಮುಂದಾಗುವ ಅನಾಹುತಗಳನ್ನು ತಪ್ಪಿಸಿದ."

ನನಗೆ ಆ ಹೊತ್ತಿನಲ್ಲಿ ಬೇಕಾದುದು ಹೃದಯಸ್ಪರ್ಶಿಯಾದ ಮೃದು ಮಾತು; ಮರ್ಮಸ್ಪರ್ಶಿಯಾದ ಕಿಡಿ ಮಾತಲ್ಲ. ತಲೆಗೆ ಬುದ್ಧಿವಾದವಲ್ಲ. ಹೃದಯಕ್ಕೆ ಸಹಾನುಭೂತಿ. ಶ್ರೀಧರ್ ಅವರ ಮಾತುಗಳು ನನಗೆ ಕರ್ಣ ಕಠೋರವೆನಿಸಿತು. ಅದನ್ನು ಕೇಳಿ, "ನನ್ನ ವಿಷಯದಲ್ಲಿ ನಿಮಗೆ ಸಹಾನುಭೂತಿಯಿಲ್ಲ....ಸಹಾನುಭೂತಿಯಿಲ್ಲ" ಎಂದು ಒದರಿದೆ.

ಶ್ರೀಧರ್ ಮಾತಿಲ್ಲದಾದರು.

ಈ ಸುದ್ದಿಯನ್ನು ಅನಂತ್ ತಿಳಿದಾಗ ಸಿನಿಕಲ್ (ನಿರಸನಿ) ಆಗಿ ಹೇಳಿದರು. "ಈ ಜಗತ್ತು ನಾವೆಂದುಕೊಳ್ಳುವಷ್ಟು ಸುಖದ ಬೀಡಲ್ಲ. ಮೋಸ, ವಂಚನೆ, ಕಾರ್ಪಣ್ಯಗಳಿಲ್ಲದೆ ಇಲ್ಲಿ ಕಾಲಬರುವುದಿಲ್ಲ. ಒಳ್ಳೆಯತನ, ಋಜುಮಾರ್ಗ, ನ್ಯಾಯಧರ್ಮಗಳೆಂದು ಹೋಗುವ ಮಂದಿಗೆ ಈ ಅಸುರೀ

ಜಗತ್ತು ಮಣ್ಣುಮುಕ್ಕಿಸುತ್ತದೆ. ನನ್ನ ಬಾಳಿನ ಉಷೆಯನ್ನು ಕದ್ದೊಯ್ದೀ ಜಗತ್ತೇ – ವಿಧಿಯೇ – ನಿಮ್ಮ ಅಪ್ರೌಢ್ಯೆಟಿಯ ಮನಸ್ಸನ್ನು ಮಾರ್ಪಡಿಸಿದೆ. ನಾವು ಬಂದುದನ್ನು ಬಂದಂತೆ ಬರಮಾಡಿಕೊಳ್ಳಬೇಕು. ಏಕೆ?....ಹೇಗೆ? ಎಂದು ಪ್ರಶ್ನಿಸುವ ಹಕ್ಕು ನಮಗಿಲ್ಲ......."

"ನಿಮ್ಮದು ದಾರುಣ ದುರಂತ! ಅತ್ತ ನಿರ್ಬಂಧದ ಮದುವೆಯ ಭೂತ, ಇತ್ತ ಒಲುವಿನ ಕೊಲೆಯ ಭೂತ – ಇವುಗಳ ಕಾಲು ತುಳಿತಕ್ಕೆ ಸಿಕ್ಕಿ ಎಲ್ಲಿ ಜರ್ಝರಿತರಾಗುವಿರೋ ಎನ್ನುವ ಚಿಂತೆ ನನಗೆ" ಎಂದರು ಬಾನಾಡಿ. ಅವರ ಕಣ್ಣು ಹನಿಗೂಡಿತ್ತು.

ಶ್ರೀಕಾಂತನ್ ಈ ಸುದ್ದಿ ಕೇಳಿ ಒಂದೇ ಸಮನೆ ಒದ್ದಾಡಿಬಿಟ್ಟರು. "ನನಗೆಂತಹ ನಿರಾಶೆ, ನಾನು ನಿಮ್ಮದೂ ಶಶಿಭೂಷಣನದಂತೆ ಆದರ್ಶಜೋಡಿ ಯಾಗುತ್ತೆ ಎಂದುಕೊಂಡಿದ್ದೆ. ಆದರೆ ಎಂತಹ ಭಯಂಕರ ಸುದ್ದಿ" ಎಂದು ಹೌಹಾರಿದರು.

ಈಗ ಅವರ ಕಣ್ಣುಮುಂದೆ ಶಶಿಭೂಷಣ್ ದಂಪತಿಗಳ ಪ್ರಣಯ ಪ್ರಸಂಗದ ಚಲನಚಿತ್ರ!

ಶಶಿಭೂಷಣ್ ಒಂದು ಜಾತಿ; ಅವನು ಪ್ರೇಮಿಸಿದ್ದ ಹುಡುಗಿ ಮತ್ತೊಂದು ಜಾತಿ. ಆತ ಬಿ.ಎ. ವಿದ್ಯಾರ್ಥಿ. ಆಕೆ ಇನ್ನೂ ಹಾಲುಗಲ್ಲದ ಹುಡುಗಿ; ಪರಕಾರವೋ, ಸೀರೆಯೋ ಎಂದು ಆಲೋಚಿಸುತ್ತಿದ್ದ ವಯಸ್ಸು. ಸುಮಾರು ಪತ್ತು ಹನ್ನೆರಡು ವರ್ಷದ ಮುಗ್ಧೆ. ಆದರೇನು? ಶಶಿಭೂಷಣ ಅವಳಲ್ಲಿ ತನ್ನ ಆದರ್ಶ ಪ್ರಣಯಿನಿ, ಸತಿಯನ್ನು ಕಂಡುಕೊಂಡ; ಕಾಲೇಜಿನಲ್ಲಿ ತಾನು ಕಾಣದಿದ್ದ ರೂಪರಾಶಿಯನ್ನೂ, ಆಕರ್ಷಣೆಯನ್ನೂ ಗುಣನಡತೆಯನ್ನೂ ಅವಳಲ್ಲಿ ಕಂಡು ಮಾರುಹೋದ. ತಾನು ಬೇರೆ ಜಾತಿ ಹೀಗಾಗಿ ತನ್ನ ಪ್ರೇಮ ನಿರರ್ಥಕವಾಗಬಹುದೆಂಬ ಶಂಕೆ ಕಾಡಲಿಲ್ಲ. ಅವಳನ್ನು ನೋಡಿದ ಪ್ರಥಮ ದರ್ಶನದಲ್ಲಿಯೇ ಸಹಜವಾಗಿ ಅವನಲ್ಲಿ ಪ್ರೇಮ ಉಂಟಾಯಿತು.

"ಬರ್ತೀಯಾ ನನ್ನ ಜತೆಗೆ – ವಾಕಿಂಗಿಗೇ!" ಎಂದು ಹುಡುಗಿಯನ್ನು ಕರೆದ. ಇದು ಅವಳೊಂದಿಗೆ ಮೊದಲಮಾತು. ಜೀವನದ ವಿಹಾರದಲ್ಲಿ ಜತೆಗಾತಿಯಾಗಿ ಬರುತ್ತೀಯಾ ಎಂದು ಕೇಳುತ್ತಿರುವಂತೆ ಶಶಿಭೂಷಣನಿಗೆ

ಭಾಸವಾಯಿತು. "ಹೂಂ, ಬರ್ತೀನೆ" ಹುಡುಗಿ ಹಿಂದುಮುಂದು ತುಳಿಯ
ಹೇಳಿದಳು. ಹುಡುಗಿ ತಾನು ಹೋಗುವ ವಿಷಯವನ್ನು ತಾಯಿಗೆ ತಿ
ಬರಲು ಹೋದಳು. ತಾಯಿಗೆ ಶಶಿಭೂಷಣನ ಬಗ್ಗೆ ತುಂಬಾ ಒಳ್ಳೆ
ಅಭಿಪ್ರಾಯವಿತ್ತು – ಯೋಗ್ಯ, ಸಂಭಾವಿತ, ಬುದ್ಧಿವಂತನೆಂದು. ಅಲ್ಲ
ತಾವಿದ್ದ ಮನೆಯ ಮಾಲೀಕ ಅವನೇ. ಅವನ ಬಗ್ಗೆ ಅವರ ಮನೆಯ
ಸಾಕಷ್ಟು ಮಾತುಕಥೆ ನಡೆದಿತ್ತು. ಬೇಸರ ಕಳೆಯಲು ಸುತ್ತಾಟಕ
ಕರೆದಿದ್ದಾನೆ, ಹೋಗಿ ಬರಲಿ ಎಂದು ಒಮ್ಮನಸ್ಸಿನಿಂದ ಮಗಳನ್ನು
ಕಳುಹಿಸಿಕೊಟ್ಟಳು.

ಶಶಿಭೂಷಣ ಆ ಊರಿಗೆ ರಜಕ್ಕೆಂದು ಬಂದಿದ್ದ. ಸಾಮಾನ್ಯವಾಗಿ
ಅವನಿಗೆ ಆ ಊರಿನಲ್ಲಿ ಹೊತ್ತುಹೋಗುತ್ತಿರಲಿಲ್ಲ. ಆದರೆ ಈ ಬಾರಿ ಇದ್ದ
ರಜ ಸಾಲದಾಯಿತು. ಕಾಲೇಜು ಮತ್ತೆ ತೆರೆದಾಗ ಮನಸ್ಸಿಲ್ಲದ ಮನಸ್ಸಿಂದ
ಹೋಗಬೇಕಾಯಿತು.

ಕಾಲಚಕ್ರ ಉರುಳಿತು. ಕಿಶೋರಿಯಾಗಿದ್ದ ಹುಡುಗಿ ಈಗ ನವ
ಯೌವನ ತರುಣಿ. ಮನೆಯಲ್ಲಿ ಅವಳ ಮದುವೆಯ ಮಾತುಕತೆ ಹುರುಪಿ
ನಿಂದ ಸಾಗಿತ್ತು. ಶಶಿಭೂಷಣನ ವಿನಃ ತಾನು ಯಾರನ್ನೂ ಮದುವೆಯಾಗು
ವುದಿಲ್ಲವೆಂದು ಹುಡುಗಿ ತಂದೆತಾಯಿಗಳಿಗೆ ತಿಳಿಸಿಬಿಟ್ಟಳು. ತಂದೆ ಕೊಂಚ
ಸಾಂಪ್ರದಾಯಕ ಶರಣರು. ತಾವು ಬೇರೊಂದು ಜಾತಿಯ ವರನಿಗೆ ಮಗಳನ್ನು
ಕೊಟ್ಟು ಸಂಬಂಧ ಬೆಳೆಸಿದರೆ ಮಠದ ಸ್ವಾಮಿಗಳು ಬಹಿಷ್ಕಾರ ಹಾಕುತ್ತಾರೆ
ಎಂದು ಹೆದರಿಸಿದರು.

"ಮನುಷ್ಯರು ಎಲ್ಲಾ ಒಂದೇ ಜಾತಿ" ಎಂದು ತಿಳಿಯುವಷ್ಟು ಉದಾರ
ಮನಸ್ಸು ತಾಯಿಯದು.

'ಹುಡುಗ, ಹುಡುಗಿ ಒಬ್ಬರನ್ನೊಬ್ಬರು ಮೆಚ್ಚಿ, ಪ್ರೀತಿಸುತ್ತಿದ್ದಾರೆ.
ಅವರನ್ನು ಬೇರ್ಪಡಿಸಿದರೆ – ಅವರಿಗೆ ಕಡೆಯ ತನಕ ಕೊರಗು; ಅಲ್ಲದೆ ದೇವರ
ಕಣ್ಣಿನಲ್ಲಿ ನಾವು ಪಾಪಿಗಳಾಗುತ್ತೇವೆ' ಎಂದು ಹೇಳಿ ಗಂಡನನ್ನು ಈ
ಮದುವೆಗೆ ಉಪಾಯಾಂತರವಾಗಿ ಒಲಿಸಿಕೊಂಡರು. "ವರ ಸಿಗುವುದು
ಕಷ್ಟವಾಗಿರುವ ಕಾಲದಲ್ಲಿ ತಾನು ಮದುವೆಯಾಗುತ್ತೇನೆ ಎಂದು ವರ
ಬಂದರೆ, ಜಾತಿ – ಗೀತಿ ಅಂತ ಅವನನ್ನು ಹೊರಗಟ್ಟುವುದು, ಬುದ್ಧಿ

ವಂತರು ಮಾಡುವ ಕೆಲಸವಲ್ಲ." ಹೆಂಡತಿಯ ಬೋಧನೆ ಗಂಡನಿಗೆ ಹಿಡಿಯಿತು. ಆದರೆ ಶಶಿಭೂಷಣನ ಚಿಕ್ಕಪ್ಪ ಚಿಕ್ಕಮ್ಮ — ಸಾಕಿದ ತಂದೆತಾಯಿಗಳು — ಇಷ್ಟು ಬೇಗ ಹದಕ್ಕೆ ಬರಲಿಲ್ಲ. ಅವರಿಗೆ ಶಶಿಭೂಷಣ ಸ್ವಜಾತಿಯಲ್ಲದ ಮನೆಯಲ್ಲಿ ಮದುವೆಯಾಗುವುದು 'ಸುತರಾಂ' ಇಷ್ಟವಿರಲಿಲ್ಲ. ಹೇಳಿ ನೋಡಿದರು, ಆಡಿ ನೋಡಿದರು, ಗದರಿಸಿ ನೋಡಿದರು. ಶಶಿಭೂಷಣ ಹಿಡಿದ ಹಠ ಬಿಡಲಿಲ್ಲ. 'ಅವಳೇ ನನ್ನ ಬಾಳ ಗೆಳತಿ' ಎಂದುಬಿಟ್ಟ.

"ಪ್ರಾಣ ಹೋದರು ಅವಳನ್ನು ಬಿಟ್ಟು ಬೇರೆ ಹುಡುಗಿಯನ್ನು ಮದುವೆಯಾಗುವುದಿಲ್ಲ".

ಸಾಕು ತಂದೆ ಮಗನನ್ನು ಹೊರಗೆ ಹಾಕುವುದಾಗಿ ಹೆದರಿಸಿದರು. ಆದರೆ ಗೃಹತ್ಯಾಗಕ್ಕೆ ಅವನು ಎಂದೋ ಸಿದ್ಧನಾಗಿದ್ದ. ಹುಡುಗಿಯ ಬಗ್ಗೆ ಅವನ ಪ್ರೇಮ ಅಷ್ಟು ಉಜ್ವಲವಾಗಿತ್ತು. ತಮ್ಮ ಪ್ರೇಮಯಾತ್ರೆಯಲ್ಲಿ ಎಂತಹ ವಿಘ್ನಗಳು ಬಂದರೂ ಅದನ್ನು ಧೈರ್ಯದಿಂದ ಎದುರಿಸಿ ಮುನ್ನುಗ್ಗಬೇಕೆಂಬ ಕೆಚ್ಚೆದೆ ಅವನದು. ಅವನ ಹೃದಯದಲ್ಲಿ, ನಾಲ್ಕಾರು ವರ್ಷಗಳಲ್ಲಿ ಬೆಳೆದು ಬಲವಾಗಿ ಬೇರು ಬಿಟ್ಟಿದ್ದ ಆ ಪ್ರೇಮವೃಕ್ಷ – ಸಣ್ಣಪುಟ್ಟ ಕೊಡಲಿ ಪೆಟ್ಟಿಗೆ ಕಡಿದುಬೀಳದಷ್ಟು ಬಲವಾಗಿ ಬೆಳೆದಿತ್ತು. ಆ ಹುಡುಗಿ ಶಶಿಭೂಷಣನ ಭಾಗಕ್ಕೆ ದೇವತೆ. ದೇವರ ಚಿತ್ರಗಳ ಸಾಲಿನಲ್ಲೇ ಅವಳ ಚಿತ್ರಕ್ಕೂ ಸ್ಥಳ ಕೊಟ್ಟು – ಅದಕ್ಕೂ ಹೂವಿನಹಾರ ಹಾಕಿ ಅಲಂಕರಿಸಿ, ಪೂಜೆಮಾಡಿದ್ದ. ಅವಳ ಮಧುರಸ್ಮರಣೆ ಅವನನ್ನು ಯಾವ ಮಹತ್ಕಾರ್ಯಕ್ಕೂ ಪ್ರೇರೇಪಿಸುತ್ತಿತ್ತು. ಅವಳು ಸ್ಫೂರ್ತಿದಾಯಿನಿ, ಚೈತನ್ಯಮಯಿ. ಯಾವುದೋ ಕ್ಷುಲ್ಲಕ ಕಾರಣಗಳಿಗಾಗಿ ತನ್ನ ಹೃದಯಮಂದಿರದ ದೇವತೆಯನ್ನು ಹೊರಗಟ್ಟುವುದೆ? ತನ್ನ ಆದರ್ಶ, ಬಾಳಿನ ಕನಸನ್ನು ಮಣ್ಣುಗೂಡಿಸಿ ಬಾಳುವ ಬಾಳು ಬಾಳಲ್ಲ: ಜೀವನ್ಮೃತ ಬಾಳು ಅದು. ಅಂತಹ ಬಾಳನ್ನು ಬದುಕುವುದಕ್ಕಿಂತ ಪ್ರೇಮಾರಾಧನೆಯಲ್ಲಿ ಮಡಿಯುವುದು ಲೇಸು! ಇಂತಹ ಉಚ್ಚಾದರ್ಶಗಳ ಶಶಿಭೂಷಣ ತನ್ನ ಮಾತಿಗೆ ಸಗ್ಗುವವನಲ್ಲವೆಂದು, ಅರಿತುಕೊಂಡು ಚಿಕ್ಕತಂದೆ – ತನ್ನಂತಹವನು ಮಾಡಬಾರದ ಹೇಯಕೃತ್ಯಕ್ಕೂ ಕೈಹಾಕಿದರು. ತನ್ನ ಸ್ವಂತ ಮಗುವಿನ ವಿರುದ್ಧವಾಗಿ ಸಲ್ಲದ ಅಪವಾದ ಹೊರಿಸಿ ಹುಡುಗಿಯ ತಂದೆಗೆ ಪತ್ರ ಬರೆದು

ಅವರ ಮನಸ್ಸನ್ನು ಕೆಡಿಸಲು ನೋಡಿದರು. ಆದರೆ ಅವರ ಕೃತ್ಯ ಬಯ
ಯಿತು. ಚಿಕ್ಕತಂದೆಯೆಂಬ ಎಲ್ಲಾ ಭಾವನೆ, ಇದರಿಂದ ತೊಡೆದುಹಾಕಿದಂ
ಯಿತು. ಶಶಿಭೂಷಣ ಅವರ ಮನೆಯನ್ನು ತೊರೆದು, ಅವರ ವಿರೋಧವ
ಮದುವೆಯ ತಯಾರಿ ನಡೆಸಿದ. ಮದುವೆಯ ವೆಚ್ಚಕ್ಕೆಂದು ತನ್ನ ಮನೆಯನ
ಮಾರಿದ. ಹೆಣ್ಣಿನ ಕಡೆಯವರೇ ವಧೂವರರ ಬೇಗರಾಗಿ ಮಂಗಳಕಾರ್ಯ
ವನ್ನು ನಡೆಸಿಕೊಟ್ಟರು. ಇಬ್ಬರ ಹೃದಯಗಳು ಒಂದಾಯಿತು. ಶಶಿಭೂಷಣ
ಪ್ರೇಮ ದೇವರಿಗೆ ಸೇರಿತು. ಅವನು ಅವರನ್ನು ಆದರ್ಶ ಸತಿಪತಿಗಳಾಗಿ
ವಂತೆ ಹರಸಿದ. ಇಂತಹ ಆದರ್ಶಪ್ರೇಮ ಪ್ರಸಂಗವನ್ನು ಕಣ್ಣಾರೆ ಕಂಡಿ
ಶ್ರೀಕಾಂತನ್‌ಗೆ ನನ್ನ ಮತ್ತು ಅಫ್ರೊಡೈಟಿಯ ಪ್ರೇಮ ಇಂತಹದೆ
ಮತ್ತೊಂದು ಪ್ರಸಂಗವಾಗಿ ತೋರಿತು. ಆದರೆ ಶಶಿಭೂಷಣನ ಪ್ರೇಮ
ಪುರಸ್ಕಾರಯೋಗ್ಯವಾಯಿತು; ನನ್ನದು ತಿರಸ್ಕರಿಸಲ್ಪಟ್ಟಿತು. ಒಂದು ದೇವ
ಮನಸ್ಸಿಗೆ ಬಂತು; ಮತ್ತೊಂದು ಬರಲಿಲ್ಲ.

"ಬಹುಶಃ ಆಕೆಯ ಮನಸ್ಸಿನ ಮೇಲೆ ನಾನು ಅಷ್ಟೊಂದು ಪ್ರಭಾವ
ಶಾಲಿ ವ್ಯಕ್ತಿಯಾಗಿಲ್ಲ" ಎಂದೆ ಮೌನ ಒಡೆದು.

"ನೀವು ಅಷ್ಟೊಂದು ಹೃದ್ಗತಪಡಿಸದೆ ಇದ್ದುದರಿಂದಲೇ 'ಆಕೆ' ಹೀಗೆ
ವರ್ತಿಸಿದುದು" ಎಂದರು ಶ್ರೀಧರ್.

"ಇವರು ಹೃದ್ಗತಪಡಿಸದೆ ಇದ್ದಿದ್ದರೆ 'ಆಕೆ' ನಿನ್ನೆಯಾಕೆ ಅವಕಾಶ
ಕೊಟ್ಟು ಮಾತನಾಡಿದಳು? ಈ ವಿಷಯದಲ್ಲಿ ನಿನ್ನೆ ಖಡಾಖಂಡಿತವಾಗಿ
'ಒಲ್ಲೆ' ಎಂದು ಹೇಳಬಹುದಿತ್ತು. ಆದರೆ ಹಾಗೆ ಹೇಳದೆ ದೊಡ್ಡವರ
ಮೂಲಕ ಈ ಪ್ರಸ್ತಾಪ ಬಂದರೆ ಚನ್ನ ಎಂದು, ತನ್ನ ಒಪ್ಪಿಗೆಯನ್ನು ಪರೋಕ್ಷ
ವಾಗಿ ತಿಳಿಸಿದಳು. ಇಂತಹದರಲ್ಲಿ ಹೃದ್ಗತಪಡಿಸಲಿಲ್ಲವೆಂದರೆ ಏನರ್ಥ"
ಎಂದರು ಶ್ರೀಕಾಂತನ್.

"ಹಾಗಾದರೆ ಇಂದು, ನಿನ್ನೆ ಇದ್ದ ಸಮ್ಮತಿ ಎಲ್ಲಿಹೋಯಿತು? ನಿನ್ನೆ
ಹೇಳಿದ ಮಾತು ಇಂದು ಎಲ್ಲಿ ಹಾರಿತು?" — ಎಂದು ಶ್ರೀಧರ್
ಪ್ರಶ್ನಿಸಿದರು.

"ನಿನ್ನೆ ಇವರನ್ನು ಕಂಡನಂತರ ಈ ವಿಷಯವನ್ನು 'ಆಕೆ' ದೀರ್ಘವಾಗಿ
ಆಲೋಚಿಸಿರಬೇಕು. ತಾವು ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳು, ಈಗ

ಂತಹ ವಿಷಯಗಳಲ್ಲಿ ತಲೆಹಾಕಿದರೆ ಪರೀಕ್ಷೆಯ ವೇಳೆಯಲ್ಲಿ ಅಭ್ಯಾಸದಲ್ಲಿ ಶೈತಿಕೆಡಬಹುದು – ಎಂದು ಆಲೋಚಿಸಿ ಈ ವಿಷಯ ಇಲ್ಲಿಗೇ ಬಿಡಲು ಶ್ಚಯಿಸೋಣ ಎಂದಿರಬಹುದು. 'ಈ ಸದ್ಯದ ಮಟ್ಟಿಗೆ' ಎಂದು ೀರಿಸಿಕೊಂಡರೆ ಆಕೆಯ ಮನಸ್ಸಿನ ಅರ್ಥ ಸ್ಫುಟವಾಗುತ್ತದೆ" ಎಂದರು ್ರೀಕಾಂತನ್. ಅವರ ಮಾತು ನನಗೆ ಕೊಂಚ ಬೆಳಕು ಹಾಯಿಸಿತು. ನಾನು ಅವರ ಸಂಭಾಷಣೆಯನ್ನು ಆಲಿಸುತ್ತಾ ಕುಳಿತೆ.

"'ಈ ಸದ್ಯದ ಮಟ್ಟಿಗೆ' ಎಂದೇ ಏಕೆ ಸೇರಿಸಿಕೊಳ್ಳಬೇಕು? 'ಈ ಿಷಯಕ್ಕಿಲ್ಲೇ ಕೊನೆ ಮುಟ್ಟಿಸೋಣ' ಎಂದೇಕೆ ಆಕೆಯ ಮನಸ್ಸಿನ ಅರ್ಥವಿರಬಾರದು? ....ನನಗೆ ಅನಿಸುವುದು ಇಷ್ಟು. ನಿನ್ನೆ 'ಆಕೆ' ದುಡುಕಿ ಒಪ್ಪಿರಬಹುದು. ಅಥವಾ ಒಪ್ಪಿಗೆ ಇದ್ದಂತೆ ತೋರಿಸಿರಬಹುದು. ಇದು ಅಷ್ಟು ಮಹತ್ವದ್ದಲ್ಲ. ಯಾಕೆಂದರೆ ಮೂರ್ತಿಯ ಎದುರಿನಲ್ಲಿ ಏನನ್ನೋ ಹೇಳಲು ಹೋಗಿ, ಮತ್ತೇನೋ ಹೇಳಿರಬಹುದು. ತನ್ನ ಮನಸ್ಸಿನಲ್ಲಿದ್ದ ಯಾವ ಅಭಿಪ್ರಾಯಗಳನ್ನು ಹೇಳಲು ಸಾಧ್ಯವಿಲ್ಲದೆ ಹೋಗಿರಬೇಕು. 'ಸನ್ನಿವೇಶದ' ಕಾರಣದಿಂದ ಅವುಗಳನ್ನು ಹೊರಹಾಕಲು 'ಆಕೆ' ಅಸಮರ್ಥೆಯಾಗಿರಬೇಕು. ಆದರೆ ರಾತ್ರಿಯೆಲ್ಲಾ ಆ ವಿಷಯವನ್ನು 'ಆಕೆ' ಕೂಲಂಕಷವಾಗಿ ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದು, ಕಟ್ಟಕಡೆಯ ತೀರ್ಪಾಗಿ ಇಂದು ಹಾಗೆ ಹೇಳಿದ್ದಾಳೆ. ಇದೇ ಮುಖ್ಯವೇ ಹೊರತು ನಿನ್ನಿನ ಮಾತು ಮುಖ್ಯವಲ್ಲ. ಒಂದು ಮಾತು ಹೇಳುವುದಾದರೆ ಮೂರ್ತಿ ತನ್ನ ಒಲುವಿನ ಯಾವ ಪ್ರಭಾವ ಮುದ್ರೆಯನ್ನೂ ಆಕೆಯ ಮನಸ್ಸಿನ ಮೇಲೆ ಒತ್ತಿಲ್ಲ" ಎಂದರು ಶ್ರೀಧರ್ ಮಾತು ಮುಗಿಸುತ್ತಾ.

"ಎಂದಿಗೂ ಇಲ್ಲ, ಮೂರ್ತಿಯ ಬಗ್ಗೆ ಆಕೆಗೆ ಆಸಕ್ತಿ ಇರದೆ ಇದ್ದರೆ ಇವರ ಪುಸ್ತಕಗಳನ್ನು ತರುವುದಕ್ಕೆ 'ಆಕೆ' ಹೇಳುತ್ತಲೇ ಇರುತ್ತಿರಲಿಲ್ಲ — ಅಲ್ಲದೆ ಇಂದು ಅದನ್ನು ತೆಗೆದುಕೊಳ್ಳುತ್ತಲೇ ಇರುತ್ತಿರಲಿಲ್ಲ" ಎಂದರು ಶ್ರೀಕಾಂತನ್.

"'ಆಕೆ' ಕೇಳಿ ತೆಗೆದುಕೊಂಡಳೋ – ಅಥವಾ ಇವರಾಗಿ ಇವರೇ ಕೊಟ್ಟರೋ ಯಾರಿಗೆ ಗೊತ್ತು" ಎಂದರು ನಗುತ್ತಾ.

ನಾನು ಆ ಬಗ್ಗೆ ವಿವರಣೆ ಕೊಟ್ಟು, ಅವರ ಸಂದೇಹ ನಿವಾರಿಸಿದೆ.

"ನಿಜವಿರಬಹುದು. 'ಆಕೆ' ಪುಸ್ತಕ ತೆಗೆದುಕೊಂಡುದು ಮೂ ಯಲ್ಲಿ ಇದ್ದ ಆಸಕ್ತಿಗಾಗಿ ಅಲ್ಲ–ಪುಸ್ತಕದಲ್ಲಿದ್ದ ಆಸಕ್ತಿಯಿಂದ" ಎಂದ ಶ್ರೀಧರ್.

"ಪುಸ್ತಕದಲ್ಲಿ ಆಸಕ್ತಿ ತೋರಿಸುವಾಕೆಗೆ ಅದರ ಕರ್ತೃವಿನ ಬಗ್ಗೆ ಆಸ ತೋರಿಸದಿರುವಳೆ?"

"ಈಗಂತೂ ಇಲ್ಲ. ಮುಂದೆ ಕೃತಿಯ ದೆಸೆಯಿಂದ ಕರ್ತೃವಿನ ವಿಷ ದಲ್ಲಿ ಸದಭಿಪ್ರಾಯ ಮೂಡಬಹುದು. ಆಗ ಮಾತ್ರ ಮೂರ್ತಿ ಪ್ರಣ ಸ್ವೀಕಾರದಲ್ಲಿ ಕೃತಕೃತ್ಯರಾಗಬಹುದು".

"ಹಾಗಾದರೆ ಇನ್ನೂ ಒಂದು ಆಶಾಕಿರಣ ಉಂಟಲ್ಲ" ಎಂದರ ಶ್ರೀಕಾಂತನ್.

"ಉಂಟು–ಮೂರ್ತಿಯ ಪತನಕ್ಕೆ ಅದು ಒಂದು ಹೆಜ್ಜೆ ಅಷ್ಟೇ ಎಂದರು ಒರಟಾಗಿ ಶ್ರೀಧರ್.

"ಎಂದಿಗೂ ಇಲ್ಲ, ಎಂದೆಂದಿಗೂ ಇಲ್ಲ" ಎಂದರು ಶ್ರೀಕಾಂತನ್.

ಆ ಮಾತು ನನ್ನ ಹೃದಯಾಂತರಾಳದಲ್ಲಿ ಪಿಸುಗುಟ್ಟುತ್ತಿದ್ದ ಸೂಕ್ಷ್ಮ ಶಬ್ದ. ಅದನ್ನು ಶ್ರೀಕಾಂತನ್ ತನ್ನ ಬಾಯಿಂದ ಪ್ರತಿಧ್ವನಿಸುತ್ತಿರುವಂತೆ ತೋರಿತು. ನಾನು ಯೋಚಿಸುತ್ತಾ, ದೃಷ್ಟಿಯನ್ನು ತಾರಸಿಯ ಮೂಲೆಯಲ್ಲಿ ನಟ್ಟು–ಮೌನಿಯಾಗಿ ಕುಳಿತಿದ್ದೆ. ಆಗ ನನ್ನ ಭಾಗಕ್ಕೆ ಬರೀ ಶೂನ್ಯ!

"ರೀ! ಮೂರ್ತಿ" ಎಂದರು ಶ್ರೀಧರ್. ನಾನು ಸಮಾಧಿಯಿಂದ ಎಚ್ಚೆತ್ತೆ. "ನಿಮ್ಮ ಬಗ್ಗೆ ಸಹಾನುಭೂತಿಯಿಲ್ಲವೆಂದು ಹೇಳುತ್ತೀರಿ, ಖಂಡಿತ ವಾಗಿ ನನ್ನೆಲ್ಲಾ ಸಹಾನುಭೂತಿ ನಿಮ್ಮೆಡೆಗೇ ಇದೆ — ಗೆಳೆಯಾ! — ನಿಮ್ಮ ಶ್ರೇಯಸ್ಸನ್ನೇ ನಾನು ಸದಾ ಕೋರುತ್ತಿರುವುದು. ನನ್ನ ಮಾತುಗಳನ್ನು ನೀವು ಅನ್ಯಥಾ ಭಾವಿಸಬಾರದು. ಅಪ್ರೊಡೈಟಿಯನ್ನು ನೀವು ಪ್ರೀತಿಸು ತ್ತಿದ್ದೀರಿ, ದಿಟ. ಅಷ್ಟೇ ಪ್ರೀತಿ ನಿಮ್ಮ ಮೇಲೆ ಆಕೆಯೂ ಹರಿಸದೆ ಇದ್ದರೆ ನಿಮ್ಮ ಪ್ರೀತಿಯಿಂದ ಏನು ಪ್ರಯೋಜನ? ನಿಮ್ಮದು ಸುವಾಸನೆಯನ್ನು ಅನುಭವಿಸುವವರು ದಿಕ್ಕಿಲ್ಲದ ಕಾನನದ ಮಲ್ಲಿಗೆಯ ಪರಿಮಳದಂತಾಗುತ್ತದೆ. 'ಇಗೊಯಿಸ್ಟ್' (ಆತ್ಮಜೀವಿ) ಕಾದಂಬರಿಯಲ್ಲಿ ಬರುವ 'ಡಿಕ್ರೀ' ಹೇಳುವಂತೆ 'ಪ್ರಣಯ ಪ್ರಬಂಧ' ರಚನೆಯಲ್ಲಿ ನಿಮ್ಮ ಪಾಲಿನ ಕೆಲಸವನ್ನು ನೀವು

ಪೂರೈಸಿದ್ದೀರಿ. ಉಳಿದ ಭಾಗವನ್ನು 'ಆಕೆ' – ನಿಮ್ಮ–ಅಪ್ರೊಡೈಟೆ ಪೂರೈಸಬೇಕು. ಆದರೆ 'ಆಕೆ' ಈ ಬಗ್ಗೆ ಉದಾಸೀನಳೂ ನಿರ್ಲಕ್ಷ್ಯೆಯೂ ಆಗಿದ್ದಾಳೆ. ಹೀಗಿರುವಲ್ಲಿ ನೀವು ಕೊರಗುತ್ತಾ ಕುಳಿತರೆ ನಿಮ್ಮ ಪ್ರೇಮದ ಪುರುಷಾರ್ಥ, ಅಂದರೆ ಆಕೆಯನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳುವ ಕಾರ್ಯದಲ್ಲಿ ಯಶಸ್ವಿಯಾಗುತ್ತೀರಾ !........ನೀವೂ ಆಕೆಯೂ ಒಂದೇ ಬೀದಿಯಲ್ಲಿದ್ದು, ಅನೇಕ ವರ್ಷಗಳ ಪರಿಚಯ ನಿಮಗಿದ್ದು, ಪರಸ್ಪರ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು – ದೈನಂದಿನ ವ್ಯವಹಾರದಲ್ಲಿ ತೊಡಗಿದ್ದರೆ ಆ ಮಾತು ಬೇರೆಯಾಗುತ್ತಿತ್ತು. ಆಗ ನಿಮ್ಮದು ಪ್ರೇಮ ವಿವಾಹವಾಗುತ್ತಿತ್ತು. ಆದರೆ ಈಗ? ನೀವಿಲ್ಲಿ – 'ಆಕೆ' ಅಲ್ಲಿ. ನಿಮ್ಮಿಬ್ಬರ ನಿಕಟ ಸಂಪರ್ಕ, ಪರಿಚಯ – ಸೊನ್ನೆ. ಕಾಲೇಜಿನಲ್ಲಿ ಒಂದೆರಡು ತಾಸು, ದೂರದಿಂದ ಕಂಡಮಾತ್ರಕ್ಕೆ ಅದು ಪರಿಣಾಮಕಾರಿಯಾದ ಪರಿಚಯವಾಗದು. ಇನ್ನು ಆಕೆಯ ಬಗ್ಗೆ ನಿಮಗೆ ತಿಳಿದಿರುವ ವಿಷಯ – ಎಲ್ಲಾ ನಿಮ್ಮ ಕಲ್ಪನೆ. ಆಕೆಯ ಮನೆಯವರ ನಡವಳಿಕೆ, ಗುಣ, ಸ್ವಭಾವ ನಿಮಗೇನು ತಿಳಿದಿದೆ, ಹೇಳಿ? ಊಹೆಗೂ ವಾಸ್ತವ ವಿಷಯಗಳಿಗೂ, ಕನಸಿಗೂ, ನನಸಿಗೂ ವ್ಯತ್ಯಾಸ ಉಂಟೆಂಬುದನ್ನು ಮರೆಯಬೇಡಿ. ಇನ್ನು ನಿಮ್ಮ ಬಗ್ಗೆ ಆಕೆಗೆ ಏನು ಗೊತ್ತಿದೆ? ನಿಮ್ಮ ಪತ್ರದಲ್ಲಿ ನೀವು ತಿಳಿಸಿಕೊಟ್ಟಿರುವ ಅಂಶಗಳಲ್ಲದೆ ಆಕೆಗೆ ಬೇರೇನೂ ತಿಳಿಯದು. ಹೀಗಿರುವಲ್ಲಿ ಹಠಾತ್ತಾಗಿ 'ಆಕೆ' ನಿಮ್ಮನ್ನು ಪ್ರೀತಿಸಬೇಕೆಂದರೆ ಹೇಗಾದೀತು?"

"ಮೊದಲ ನೋಟದಲ್ಲೇ ಅನುರಾಗದ ಆವಿರ್ಭವ!" ಎಂದರು ಶ್ರೀಕಾಂತನ್ ನಡುವೆ ಬಾಯಿಹಾಕಿ.

"ಮೂರ್ತಿಯ ವಿಷಯದಲ್ಲಿ ಇದು ಸತ್ಯ. ಆದರೆ ಅಪ್ರೊಡೈಟೆಯ ವಿಷಯದಲ್ಲಿ ಇದು ಸತ್ಯವಾಗಬೇಕಲ್ಲಾ (ನನ್ನ ಕಡೆ ನೋಡಿ – ) ನೀವೇನು ತಿಳಿದರೂ ಸರಿ ಮೊದಲ ನೋಟದ ಅನುರಾಗದ ಹಣೆಬರಹ ನನಗೆ ಗೊತ್ತು. ಮೊದಲಿನ ನೋಟದಲ್ಲಿರುವ ಪ್ರೇಮ ಕಡೆಯ ತನಕ ಇರುವುದಿಲ್ಲ. ಮೊದಲಿನ ನೋಟದಲ್ಲೇ ಅದು ಪರ್ಯವಸಾನ ಹೊಂದುತ್ತದೆ."

"ನನ್ನ ವಿಷಯವೂ ಹೀಗೆನ್ನುತ್ತೀರಾ?" ಎಂದೆ ನಾನು ಆತಂಕಗೊಂಡ ಧ್ವನಿಯಲ್ಲಿ.

"ನಿಜವೆಂದರೆ ನೀವು ಸಿಟ್ಟಾಗಬಹುದು. ಆದರೆ ಮೊದಲ ನೋ ದಲ್ಲೇ ಉದ್ಭವಿಸಿದ ಪ್ರೇಮ – ಮೆರಗುಕೊಟ್ಟ ಮಿಥ್ಯಪ್ರೇಮ. ನಿಜವಾ ಪ್ರೇಮ – ಪರಸ್ಪರ ಅರ್ಥಮಾಡಿಕೊಂಡು, ಒಬ್ಬರಿಗೊಬ್ಬರು ಆತ್ಮ ನಿವೇದಿ ಕೊಂಡಾಗ ಬರುವ ಪ್ರೇಮ. ಇದು ಸಾಮಾನ್ಯವಾಗಿ ವಿವಾಹದ ಎರಕದ ಎರಡು ಹೃದಯಗಳು ಬೆಸೆಯಲ್ಪಡುವಾಗ ಸಿದ್ಧಿಸುತ್ತದೆ. ಅಲ್ಲಿಯವರೆಗೆ.... ಶ್ರೀಧರ್ ಮಾತು ತಡೆದು, ಆಡಿದರು "ಅಲ್ಲಿಯವರೆಗೆ ಪ್ರೇಮದ ಸೋಗಿನಿಂ ನರ್ತಿಸುವ ಪ್ರೇಮ....ಪ್ರೇಮವಲ್ಲ. ಕಾಮದ ಸುಂದರ ಮುಖವಾಡ ಅದು ಎಂದರು.

ನಾನು ಈ ಮಾತನ್ನು ಕೇಳಿ ಎಚ್ಚರ ತಪ್ಪುವಂತಾಯಿತು.

"ನಿಮಗೆ ನಿಮ್ಮ ಪ್ರೇಮದ ಸ್ಪಷ್ಟ ಚಿತ್ರಣ ಸಿಕ್ಕಿಲ್ಲ. ನಿಮ್ಮ ಭಾವನೆ ಗಳ ನಿಚ್ಚಳರೂಪ ಎಂತಹದೆಂದು ನೀವು ಇನ್ನೂ ಕಂಡುಕೊಂಡಿಲ್ಲ. ನೀವು ಭಾವನಾಜೀವಿಗಳು. ಅಲ್ಲದೆ ಪೂರ್ವಯೌವ್ವನದ ಆಸೆ, ಆಕಾಂಕ್ಷೆಗಳನ್ನು ಸುಪ್ತ ಚೇತನದಲ್ಲಿ ಹಿಂಗಿಸಿದ ನಿಮಗೆ ಈಗ ಪೂರ್ಣಯೌವ್ವನದಲ್ಲಿ ಆ ಭಾವಗಳು ವಿಚಿತ್ರ ಅನುಭವಗಳಾಗಿ ತೋರುತ್ತಿವೆ. ಇವು ನಿಮ್ಮನ್ನು ದಿಕ್ಕು ತಪ್ಪಿಸಿವೆ.... ನಿಮ್ಮನ್ನು ವಿಚಾರಶೂನ್ಯರನ್ನಾಗಿ ಮಾಡಿವೆ. ಹೀಗಾಗಿ ನಿಮ್ಮ ಕೃತ್ಯದ ವಿಮರ್ಶೆ ನಿಮ್ಮಿಂದ ಸಾಧ್ಯವಾಗದೆ ಹೋಗಿದೆ....ನಿಮ್ಮ ಆಲೋಚನೆ, ನಿಮ್ಮ ದಾರಿ ಎಲ್ಲಾ ಸರಿಯೆಂದೇ ನಿಮ್ಮ ಅನಿಸಿಕೆ. ಆದರೆ ಎತ್ತ ಜಗ್ಗಿದರತ್ತ ಬಗ್ಗುವ ಅಸಹಾಯಕ ಸ್ಥಿತಿಯಲ್ಲಿ ನೀವಿದ್ದೀರಿ....ಆದುದರಿಂದ ಗೆಳೆಯರ ಮಾತನ್ನು ಆಲಿಸಿ ನೀವು ಆಕೆಯನ್ನು ಮರೆತುಬಿಡಿ. ಇದರಿಂದ ನಿಮಗೆ ಕಲ್ಯಾಣವಾಗುತ್ತದೆ. ನಿಮ್ಮ ಮೇಲಿನ ಹೊರೆಯೂ ಇಳಿಯುತ್ತದೆ" ಎಂದರು ಶ್ರೀಧರ್.

ನಾನು ಅವರ ಮಾತುಗಳನ್ನು ಆಲಿಸುತ್ತಾ ಕುಳಿತಿದ್ದವನು ಅವರ ವಿಚಾರಧಾರೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ.

ಕಾಲೇಜು ಮುಚ್ಚಲು ಇನ್ನು ಹದಿನೈದು ದಿನಗಳು ಉಳಿದಿದ್ದವು. ವಿದ್ಯಾರ್ಥಿಗಳೆಲ್ಲಾ ಮುಂದೆ ಬರಲಿರುವ ಪರೀಕ್ಷೆಯಲ್ಲಿ ಜಯಶಾಲಿಗಳಾಗಲು ಸಿದ್ಧರಾಗುತ್ತಿದ್ದರು. ಈಗಿನಿಂದಲೇ ಹಣಕೊಟ್ಟು 'ಪ್ರಬಂಧ' ಗಳನ್ನು ಬರೆಯಿಸಿಕೊಂಡಿದ್ದ ಮಂದಮತಿಗಳು ಅವುಗಳನ್ನು ಹಾಗೆಹಾಗೆಯೇ ನುಂಗುವ

ಸಾಹಸದಲ್ಲಿದ್ದರು. ಮೊದಲಿನಿಂದಲೂ ಇತರ ಚಟುವಟಿಕೆಯಲ್ಲಿ ಕಾಲ ಕಳೆಯುತ್ತಿದ್ದ ವಿದ್ಯಾರ್ಥಿಗಳು ಈಗ ವ್ಯಾಸಂಗಮಾಡುವ ಭರಾಟೆಯಲ್ಲಿ ಇದ್ದರು. ಹಾಸ್ಟಲಿನ ದೀಪಗಳು ಸಮರಾತ್ರಿಯವರೆಗೆ ಉರಿಯುವುದು-ಸರ್ವೆ ಸಾಧಾರಣವಾಯಿತು. ರಾತ್ರಿ ಓದುವ ವಿದ್ಯಾರ್ಥಿಗಳ ಅನುಕೂಲಕ್ಕೆಂದು ಈಗ ಹಾಸ್ಟಲಿನಲ್ಲಿ 'ಟೀ' ಕೊಡುವ ಏರ್ಪಾಡು ಮಾಡಿದ್ದರು. ಎಲ್ಲೆಲ್ಲೂ ಉತ್ಸಾಹ, ಅಭ್ಯಾಸದ ಗಡಿಬಿಡಿ!

ಆದರೆ ಗೆಳೆಯರು ನಾಲ್ವರು ಮಾತ್ರ ಇನ್ನೂ ನಿರುತ್ಸಾಹದಲ್ಲೇ ಇದ್ದರು ಬೇರೆ ಬೇರೆ ವಿಷಯಗಳು ಅವರ ಮನಸ್ಸನ್ನು ಕದಡಿಸಿದ್ದವು.

ನಾನು ಪ್ರೇಮದ ಜ್ವಾಲೆಯೊಂದಿಗೆ ಸರಸವಾಡಿ-ಮೈಸುಟ್ಟುಕೊಂಡ ಪತಂಗದಂತಿದ್ದೆ.

ಅಲ್ಲೋಲಕಲ್ಲೋಲವಾಗಿ ಪ್ರಳಯ ಘರ್ಜನೆ ಮಾಡುತ್ತಿದ್ದ ಕ್ಷೋಭೆಗೊಂಡ ಸಮುದ್ರದಲ್ಲಿ, ಒಂಟಿಯಾಗಿ ಗಾಳಿಹೊಡೆದತ್ತ ಹೋಗುತ್ತಿದ್ದ ನಾವೆಯ ನಾವಿಕನಂತಾಗಿತ್ತು ನನ್ನ ಪಾಡು. ದೈವ ಪ್ರಯತ್ನದಿಂದಲೋ ಎಂಬಂತೆ, ಅದು ಸಾಗರದ ಎಡರು ತೊಡರುಗಳನ್ನು ಹಾದು ಶಾಂತಿಸಮುದ್ರದ ಸುಂದರ ದ್ವೀಪ ಒಂದನ್ನು ಸುರಕ್ಷಿತವಾಗಿ ಸೇರಿತು. ನಯನಮನೋಹರ ಉಪವನಗಳಿಂದಲೂ, ಲತಾಕುಂಜಗಳಿಂದಲೂ ಸೌಧಪ್ರಾಸಾದಿಗಳಿಂದಲೂ ಆ ದ್ವೀಪ ಸ್ವರ್ಗೀಯವಾಗಿತ್ತು. ಅದು ಆನಂದದ, ಸುಖದ ನೆಲೆಬೀಡಾಗಿತ್ತು. ಅಪ್ಸರೆಯರು ನರ್ತಿಸುವ ತಾಣದಂತಿತ್ತು. ಇಂತಹ ಸುಂದರ ದ್ವೀಪದ ತೀರವನ್ನು ಸೇರಿ ಲಂಗರು ಹಾಕಿ ದಡ ಸೇರಬೇಕು, ಎನ್ನುತ್ತಿರುವಾಗಲೇ ಎತ್ತಲಿಂದಲೋ ಕಪ್ಪು ಮೋಡ ಮುತ್ತಿ ಬಂತು. ಮರೀಚಿಮಾಲಿಯು ಸಮುದ್ರ ರಾಜನ ಮೇಲೆ ಸಿಟ್ಟುಗೊಂಡು ತನ್ನ ಸಕಲ ಪರಿವಾರದೊಡನೆ ಯುದ್ಧಕ್ಕೆ ಬಂದನು. ಅವನ ಅಬ್ಬರಕ್ಕೆ, ರಣ ಗರ್ಜನೆಗೆ, ಸಿಕ್ಕಿ ದೋಣಿಯು ತರಗೆಲೆಯಂತೆ ತತ್ತರಿಸುತ್ತಾ, ಗಾಳಿ ತೂರಿದತ್ತ ಹಾರಿ ಹೋಗಿ ದೂರದ ಕರ್ಬಂಡೆಗಳಿಗೆ ಅಪ್ಪಳಿಸಿತು. ನಾವೆ ಪುಡಿಪುಡಿಯಾಯಿತು. ಅದರಲ್ಲಿದ್ದ ನಾನು ನೀರಿಗೆ ಬಿದ್ದೆ. ಸುತ್ತಲೂ ಕವಿದಿದ್ದ ಕಡಲಿನ ಮತ್ತು ಆಗಸದ ಮಸಿಯಲ್ಲಿ ಮಸಿಯಾಗಿಬಿಟ್ಟೆ — ಹೀಗಾಗಿತ್ತು ನನ್ನ ಸ್ಥಿತಿ.

ಬಾನಾಡಿ ಈಚೆಗೆ ಒಂದು ತರಹ ವ್ಯಕ್ತಿಯಾಗಿಬಿಟ್ಟಿದ್ದರು. ಊಟ

ತಿಂಡಿ ವಿಷಯಗಳಲ್ಲಿ ಮೊದಲಿನ ಆಸಕ್ತಿ ಈಗಿಲ್ಲವಾಗಿತ್ತು. ಸದಾ ಏನನ್ನೊ ಯೋಚಿಸುತ್ತಾ ಕುಳಿತುಬಿಡುವರು. ಕೂತರೆ ಕೂತೇ ಇರುವರು ಮಲಗಿದ ಮಲಗೇ ಇರುವರು. ಒಮ್ಮೊಮ್ಮೆ ನಿಟ್ಟುಸಿರು ಬಿಡುವರು. ಏನೇನೊ ಕನವರಿಸುವರು. ಅವರ ಚಿಂತೆ ಇಂಥದೆಂದು ಯಾರಿಗೂ ತಿಳಿಯದು. ಕೆಲವು ಗೆಳೆಯರು ಪರೀಕ್ಷೆಗೆ ಅಭ್ಯಾಸ ಸಾಲದೆಂದು ಬಹುಶಃ ತಲೆಕೆಡಿಸಿ ಕೊಂಡಿರಬೇಕೆಂದು ಧೈರ್ಯದ ಮಾತನಾಡಿ ಹುರಿತುಂಬಿಸಲೆತ್ನಿಸಿದರು. ಇದರಿಂದ ಯಾವ ಪರಿಣಾಮವೂ ಆಗಲಿಲ್ಲ. ಗೆಳೆಯ ಶ್ರೀಕಾಂತನ್ ಬಾನಾಡಿಯ ಮೌನಕ್ಕೆ, ನಿರುತ್ಸಾಹಕ್ಕೆ, ತಮ್ಮದೇ ಆದ ಕಾರಣ ಹುಡುಕಿದರು.

ಬಾನಾಡಿ ನನ್ನ ವಿಷಯದಲ್ಲಿ ಎಲ್ಲರಿಗಿಂತ ಹೆಚ್ಚಿನ ಆಸಕ್ತಿ ವಹಿಸಿದ್ದರು. ಅಪ್ರೊಡೈಟಿಯ ಶೋಧನೆಯಲ್ಲಿ ಎಲ್ಲರಿಗಿಂತಲೂ ಹೆಚ್ಚಿನ ಮುತುವರ್ಜಿ ಅವರದು. ಸ್ವಭಾವತಃ ಭಾವಜೀವಿಗಳಾದ ಅವರು ನನ್ನ ಪ್ರಣಯ ಪ್ರಸಂಗದಿಂದ, ತಮ್ಮ ಒಲವಿನ ಕನಸುಗಳನ್ನು ಮರುಕಳಿಸಿಕೊಂಡು, ಹೀಗೆ ಅಸುಖಿಯಾಗಿರುವರೆಂದು ಶ್ರೀಕಾಂತನ್ ಬಗೆದರು. ಇದನ್ನು ನಿವಾರಿಸಲು ಬಾನಾಡಿಯ ನಲ್ಲೆಯಿಂದ ಪತ್ರ ಒಂದನ್ನು ಬರೆಸಲು ಪ್ರಯತ್ನಿಸಿದರು. ಆದರೆ ಬಾನಾಡಿಯ ಬೇಸರದ ಕಾರಣವೇ ಬೇರೆ. ಅವರು ತಮ್ಮ ಚಿತ್ರಕಲಾ ಸಾಂರಾಜ್ಞಿಯನ್ನು ಅರಸುತ್ತಾ ಮಾನಸಿಕವಾಗಿ ಕಂಗಾಲರಾಗಿದ್ದರು.

ಒಂದು ದಿನ ಮಧ್ಯಾಹ್ನ ಬಾನಾಡಿ ಹಾಸಿಗೆಯ ಮೇಲೆ ಮಲಗಿದ್ದರು. ಯಾರೋ ಕಲಾಮಂದಿರದ ಬಾಗಿಲನ್ನು ತಟ್ಟಿದ ಹಾಗಾಯಿತು. ಬಾನಾಡಿ ಪ್ರಶ್ನಿಸಿದರು "ಯಾರದು?"

"ನಾನು" ಧ್ವನಿ ಹೇಳಿತು.

"ಅಂದರೆ!"

"ಇಷ್ಟು ದಿನ ಯಾರನ್ನು ಅರಸುತ್ತಿದ್ದೆಯೋ ಆಕೆ!"

"ಯಾರು ನಮ್ಮ ಅಮ್ಮಯ್ಯನೇ?"

—ಅಮ್ಮಯ್ಯ ಬಾನಾಡಿಯ ನಾಲ್ಕೈದು ವರ್ಷದ ತಂಗಿ. ಇನ್ನೂ ಸಣ್ಣ ಹುಡುಗಿಯಾಗಿರುವಾಗಲೇ ಚರಂಡಿಗೆ ಬಿದ್ದು ಪ್ರಾಣಬಿಟ್ಟ ಕಂದಮ್ಮ.

ಧ್ವನಿ ನಕ್ಕು ನುಡಿಯಿತು "ಅಲ್ಲ—"

"ಹಾಗಾದರೆ ಮತ್ತೆ ಯಾರು—ಚಂದ್ರಮುಖಿಯೇ?"

—ಚಂದ್ರಮುಖಿ ಬಾನಾಡಿಯ ಹೈಸ್ಕೂಲಿನ ಗೆಳತಿ – ಇಬ್ಬರೂ ಒಂದೇ ತರಗತಿಯಲ್ಲಿ ಕಲಿಯುತ್ತಿದ್ದರು – ಆಕೆಯ ಬಗ್ಗೆ ಬಾನಾಡಿ ತುಂಬಾ ಅಭಿಮಾನ ತಳೆದಿದ್ದರು.

"ನನ್ನ ಮುಖನೋಡು – ನಾನು ಯಾರೆಂದು ಗೊತ್ತಾಗುತ್ತೆ!"

ಬಾನಾಡಿ ಕತ್ತೆತ್ತಿ ನೋಡಿದರು. ಆಕೆ ಚಂದ್ರಮುಖಿಯಲ್ಲ – ಆದರೂ ತುಂಬಾ ಪರಿಚಯದ ಮುಖ ಅದು.

"ನಿನ್ನನ್ನು ಎಲ್ಲೋ ಕಂಡಂತಿದೆ" ಎಂದರು ಬಾನಾಡಿ.

"ಇನ್ನೂ ನಿನಗೆ ತಿಳಿಯಲಿಲ್ಲವೇ. ನಾನು 'ಕಲಾಸುಂದರಿ' ನಿನ್ನ ಚಿತ್ರಕಲೆಯ ಅಧಿದೇವಿ!"

ಬಾನಾಡಿ ಸಂತೋಷದಿಂದ ಉಬ್ಬಿಹೋದರು.

"ದೇವಿ, ಇಷ್ಟುದಿನ ನೀನೇಕೆ ನಿರ್ದಯಿಯಾಗಿದ್ದೆ?"

"ನಿನ್ನ ಸಾಧನೆ ಸಾಲದಿತ್ತು!"

"ಇಂದಾದರೂ ನನ್ನ ಮೊರೆಯನ್ನು ಕೇಳಿ ಮೈದೋರಿದೆಯಲ್ಲ.... ಬಾ ದೇವಿ ಬಾ....ಈ ಹೃತ್ಕಮಲ ಪೀಠದಲ್ಲಿ ಸಾಂರಾಜ್ಞಿಯಾಗು"

ಬಾನಾಡಿ ಹಾಸಿಗೆಯಿಂದ ಚಂಗನೆ ಎದ್ದರು. ಕನಸೊಡೆಯಿತು. ಕಲಾಸುಂದರಿ ಕಲಾಮಂದಿರದಿಂದ ಮಾಯವಾಗಿದ್ದಳು........

ಈಗ ಬಾನಾಡಿ ಸದಾ ಕಲಾಸುಂದರಿಯ ಬೆನ್ನು ಹತ್ತಿದ್ದಾರೆ. ಕನಸಿನಲ್ಲಿ ಪಡೆದ ಆ ದಿವ್ಯದರ್ಶನವನ್ನು, ಕಾಗದದ ಮೇಲೆ, ಗೋಡೆಯ ಮೇಲೆ ಮೂಡಿಸಲು ಪ್ರಯತ್ನಿಸುತ್ತಿದ್ದಾರೆ.

ಬಾನಾಡಿಯ ತಲೆಯನ್ನು 'ಚಿತ್ರಕಲೆ' ತಿಂದಿದ್ದರೆ, ಶ್ರೀಕಾಂತನ್ ಅವರ ತಲೆಯನ್ನು 'ಮಿತ್ರಮೇಳ' ನುಂಗಿತ್ತು. ಅವರು ಕೈಲಾಸಂ ದಿನಾಚರಣೆ.... ಮಿತ್ರಮೇಳದ ವಾರ್ಷಿಕೋತ್ಸವ ಎಂದುಕೊಂಡು ತುಂಬಾ ಗಡಿಬಿಡಿಯಲ್ಲಿ ದ್ದರು. ಈಗ ಅವರು ಶಾಕುಂತಲ, ಕಾದಂಬರಿ ಕಾವ್ಯಗಳಿಗೆ ರಜೆ ಕೊಟ್ಟ ದ್ದರು. ಕಾಲೇಜಿನ ಸುವಾಸಿನಿಯರಲ್ಲೂ ಅವರ ಆಸಕ್ತಿ ಕಡಿಮೆಯಾಗಿತ್ತು. ಯಾಕೆಂದರೆ ಕಾಲೇಜಿನ ಹುಡುಗಿಯರ ಪೈಕಿ ಅವರು ಅತಿಯಾಗಿ ಹೊಗಳು ತ್ತಿದ್ದ ಆ 'ರೂಪರಾಣಿ ರವೇನ' ಈಗ ಅವರ ಭಾಗಕ್ಕೆ ಒಬ್ಬ 'ಕಿರಾತಿನಿ' ಎನಿಸಿಬಿಟ್ಟಿದ್ದಳು. ಅವಳ ನಡೆನುಡಿ, ಬೆಡಗು ಬಿನ್ನಾಣಗಳನ್ನು ಕಂಡು

ಉದ್ಗರಿಸುತ್ತಿದ್ದ ಶ್ರೀಕಾಂತನ್‌ಗೆ ಅವಳ ಹೆಸರನ್ನು ಎತ್ತಲೂ ಬೇಸರ ಕ
ಅವಳು ವಿಲಾಸಿನಿ — ಕಾಲೇಜಿನಲ್ಲಿ ತನ್ನ ಸಹಪಾಠಿಯೊಂದಿಗೆ ಅವಳು ತ
ಕಾಮಚೇಷ್ಟೆಗೆ ಆರಂಭಿಸಿದ್ದಳು. ಅವನೂ ಅಂತಹವನೇ. ಕಂತೆಗೆ ತ
ಬೊಂತೆ.

ತರಗತಿಗಳಿಗೆ ' ಚಕ್ಕರ್ ' ಕೊಟ್ಟು ಕಾರಿಡಾರ್‌ನಲ್ಲಿ ಹರಟೆ ಕೊಚ್ಚುತ
ನಿಲ್ಲುವರು. ರಜಾದಿನಗಳಲ್ಲಿ ಕೂಡಿ ಬೃಂದಾವನ, ಚಾಮುಂಡಿ ಬೆಟ್ಟಗ
ವಿಹಾರ ಹೋಗಿ ಬರುತ್ತಿದ್ದರು.......ಒಂದು ಬಾರಿ ಅವರು ವಿರಹತಾಪವನ
ತಡೆಯಲಾರದೆ ಕಾಲೇಜಿನ ಆವರಣದಲ್ಲೇ ಒಬ್ಬರನ್ನೊಬ್ಬರು ಅಪ್ಪಿ ಮು
ಸುತ್ತಿದ್ದ ದೃಶ್ಯವನ್ನು ಕಂಡು ಕಾಲೇಜಿನ ಅಧಿಕಾರಿಗಳು ಅವರಿ
' ಛೀಮಾರಿ ' ಹಾಕಿದರಂತೆ ! ಆದರೆ ಇದು ಅವರಿಗೆ ಏನು ಲೆಕ್ಕ ! ಬೇಕೆಂದ
ಕಾಲೇಜು ಮುಗಿದರೂ ಕಾಲೇಜಿನಲ್ಲಿ ಸಂಜೆ ಆರೂವರೆ ತನಕವಿದ್ದು ಕ್ರೀ
ಸುವರು. ಒಬ್ಬರನ್ನೊಬ್ಬರು ' ಚುಡಾಯಿಸಿ ' ಆನಂದಿಸುವುದು, ಒಬ್ಬ
ಪುಸ್ತಕವನ್ನು ಒಬ್ಬರು ಕಿತ್ತುಕೊಂಡು ಅದಕ್ಕೆ ಚುಂಬನದ ಮಳೆಗರೆದ
ಹಿಂತಿರುಗಿಸುವುದು – ಇಂತಹವೇ ನೂರೆಂಟು ಆಟಗಳು ! ಅವರಿಗೆ ಇಲ್ಲದ
ಮಾನ ಮರ್ಯಾದೆ ಹೇಳಿಕೊಟ್ಟರೆ ಬಾರದೆಂದು, ಅಧಿಕಾರಿಗಳು ಕಂಡರೂ
ಕಾಣದಂತೆ ಸುಮ್ಮನಿರುವುದನ್ನು ಕಲಿತರು. ಈ ಬಗೆಯ ನಡತೆಯನ್ನು
ಕಣ್ಣಾರೆ ಕಂಡ ಶ್ರೀಕಾಂತನ್‌ಗೆ ಆಕೆಯಲ್ಲಿ ಯಾವ ಅಭಿಮಾನ ಉಳಿದೀತು ?

" ಕೊಚ್ಚೆಯಲ್ಲಿನ ಕ್ರಿಮಿಗಳು. ಅಪ್ರೂಡೈಟಿಯ ಪಾದರೇಣುವಿನ
ಯೋಗ್ಯತೆಯಿಲ್ಲದ ಹುಳುಗಳು— " ಎಂದು ಬೈದು ಆಡಿದರು.

ಶ್ರೀಧರ್ ತನ್ನ ಸುಳಿಯೊಳಗೆ ತಾನು ಸಿಕ್ಕಿಬಿಟ್ಟಿದ್ದರು. ವೈದ್ಯನಿಗೇ
ವ್ಯಾಧಿ ಬಂದಂತಾಗಿತ್ತು – ಅವರ ಪಾಡು. ಈಗ ಅವರು ' ಸರಸ ಸಲ್ಲಾಪದ '
ವ್ಯಕ್ತಿಗೆ ತಲೆಯಲ್ಲಿ ಅವಕಾಶಕೊಟ್ಟಿದ್ದರು.

ಸರಸ ಸಲ್ಲಾಪದ ವ್ಯಕ್ತಿ – ಎಂದರೆ, ಶ್ರೀಧರ್ ಓದಲೆಂದು ಬಾಡಿಗೆಗೆ
ಹಿಡಿದಿದ್ದ ಕೊಠಡಿಯ ಹಿಂಬದಿಯಲ್ಲಿ ವಾಸವಾಗಿದ್ದ ಮನೆಯವಳು. ಆಕೆ
' ಇಂಟರ್ ' ಕಾಲೇಜಿನಲ್ಲಿ ಕಲಿಯುತ್ತಿದ್ದಳು. ನೋಡುವುದಕ್ಕೆ ಸ್ಫುರದ್ರೂಪಿ.
ಇನ್ನೂ ಮದುವೆಯಾಗಿರಲಿಲ್ಲ.

ಆ ಮನೆಯಾಕೆ ಶ್ರೀಧರನನ್ನು ತುಂಬಾ ವಿಶ್ವಾಸದಿಂದ ಕಾಣುತ್ತಿದ್ದರು.

ರ್ರೀಧರ್ ಆಕೆಯನ್ನು ತಾಯಿಯಂತೆ ಭಾವಿಸಿದ್ದರು. ಹುಡುಗ ರಾತ್ರಿಯೆಲ್ಲಾ ದುತ್ತಾನೆಂದು ಕಾಫಿ-ಮಗಳಿಗೆ ಮಾಡಿದ ಕಾಫಿಯನ್ನು ಅವರು ತಂದು ೊಡುತ್ತಿದ್ದರು. ಮನೆಯಲ್ಲಿ ಏನು ತಿಂಡಿ ಮಾಡಿದರೂ ಶ್ರೀಧರ್‌ಗೆ ಕೊಡದೆ ಂದರೆ ಅವರಿಗೆ ತೃಪ್ತಿಯಿಲ್ಲ. ಶ್ರೀಧರ್ ಮನೆಮುಂದಿ ಮಕ್ಕಳೊಡನೆ ತಮಾಷೆ ಯಾಗಿ ಮಾತನಾಡಿಕೊಂಡು ಕಾಲ ಕಳೆಯುತ್ತಿದ್ದರು. ಶ್ರೀಧರ್ ಇಲ್ಲದಿರು ಾಗ ಅವರ ಕೋಣೆಯನ್ನು ಗುಡಿಸಿ, ಸ್ವಚ್ಛಗೊಳಿಸುವುದು, ಸಿಗರೇಟು ತುಂಡುಗಳನ್ನು ತೆಗೆದುಹಾಕುವುದು-ಇವೇ ಮೊದಲಾದ ಸಣ್ಣಪುಟ್ಟ ಕೆಲಸ ಗಳಲ್ಲಿ ಆ ಹುಡುಗಿ ಶ್ರೀಧರ್‌ರ ಬಗ್ಗೆ ತನ್ನ ಆಸಕ್ತಿಯನ್ನು ತೋರಿಸುತ್ತಿದ್ದಳು.

"ಅವರು ಎಲ್ಲಾ ಸರಿಯೇ, ಆದರೆ ಸಿಗರೇಟು ತುಂಬಾ ಸೇದುತ್ತಾರೆ.... ಇದೊಂದು ದುರ್ಗುಣ ಇಲ್ಲದೆ ಹೋಗಿದ್ದರೆ, ಅವರಂತಹ ಒಳ್ಳೆಯವರು ಇಲ್ಲವೇ ಇಲ್ಲ"—ಇದು ಶ್ರೀಧರ್‌ರ ಬಗ್ಗೆ ಆಕೆಯ ಅಭಿಪ್ರಾಯ.

ಆ ಹುಡುಗಿಗೆ 'ಸರಸ ಸಲ್ಲಾಪದ ಹುಡುಗಿ' ಎಂದು ಹೆಸರು ಬರಲು ಕಾರಣ: ಆಕೆ ಒಂದು ದಿನ ಮನೆಯ ಮುಂದಿನ ಕಾಂಪೌಂಡಿನಲ್ಲಿ ನಿಂತು ಕೊಂಡು ತನ್ನ ಗೆಳತಿಯೊಂದಿಗೆ ಹರಟುತ್ತಿದ್ದಳು. ರಾತ್ರಿ ಸುಮಾರು ಹತ್ತೂವರೆ ಗಂಟೆ ಸಮಯ. ಹೊರಗೆ ಹಾಲು ಚೆಲ್ಲಿದಂತೆ ಬೆಳದಿಂಗಳು. ಓದಿ ಬೇಸರವಾಗಿ ಹೊರಗಿನ ತಂಗಾಳಿಗೆ ಮೈಯೊಡ್ಡಲು ಅವಳು ಹೊರಗೆ ಬಂದಿದ್ದಳು. ಅದೇ ಹೊತ್ತಿಗೆ ಎದುರು ಮನೆಯ-ಅವಳಷ್ಟೇ ವಯಸ್ಸಿನ ಹುಡುಗಿ-ಅವಳ ಸ್ನೇಹಿತೆ, ಹೊರಕ್ಕೆ ಬಂದಳು. ಇಬ್ಬರೂ ಕೆಲವು ಕಾಲ ಸರಸ ಸಂಭಾಷಣೆಯಲ್ಲಿ ಕಳೆದರು. ಆ ಹೊತ್ತಿನಲ್ಲಿ ನಿದ್ರೆಯ ಜೊಂಪಿನಿಂದ ಎಚ್ಚೆತ್ತ ಶ್ರೀಧರ್ ಅವರ ಮಾತುಕತೆಗಳನ್ನು ಸದ್ದಿಲ್ಲದೆ ಆಲಿಸಿದರು. ಅದು ರಸವತ್ತಾಗಿತ್ತು. ಅದರ ರುಚಿಯನ್ನು ನಮಗೆ ತೋರಿಸಲು ಅವರಲ್ಲಿಯ ಸಂಭಾಷಣೆಯನ್ನೆಲ್ಲಾ ಇದ್ದುದು ಇದ್ದಂತೆ ಬರೆದುಕೊಂಡುಬಿಟ್ಟರು.

ಅವರ ಸಂಭಾಷಣೆ ಹೀಗಿತ್ತು :

ಅವರು :—ನನಗೇನೋಮ್ಮ ಹೆದರ್ಕೇನೇ ಇಲ್ಲ. ರಾತ್ರಿ ಓದ್ತಾ ಕೂತಿ ರ್ತೀನಲ್ಲಾ, ಬಾಯಾರ್ಕೆ ಆಗುತ್ತೆ-ಅಡ್ಗೇ ಮನೇಲ್ಲೇ ನೀರಿರುತ್ತೆ. ಆದ್ರೂ ನಲ್ಲೀ ನೀರೇ ಕುಡ್ಯೋದು. ಒಳ್ಳೆ ಫ್ರೆಷ್ ಆಗಿರುತ್ತೆ. ಹೆದರ್ಕೆ ಯಾಕ್ರಿ? ನನಗೇನೋಮ್ಮ ಸ್ವಲ್ಪಾನೂ ಇಲ್ಲ........ನಿನ್ನೆ ರಾತ್ರಿ ಹತ್ತೂವರೆಗೆ ನಿದ್ರೆ

ಬಂತು, ಅದಕ್ಕೆ ಇಲ್ಲಿಗ್ಬಂದು ನಿಂತ್ಕೊಂಡೆ. ಸ್ವಲ್ಪ ಹೊತ್ತಾದ್ಮೇಲೆ ಹೋಗಿ ಒಂದು ಗಂಟೇವರ್ಗೂ ಓದ್ದೆ !

ಇವರು :—ಒಂದು ಗಂಟೆವರ್ಗೂ ?

ಅವರು :—ಹೂಂ, ಪರೀಕ್ಷೆ ಹತ್ರ ಬಂತು.

ಇವರು :—ಕಾಫಿ ಕುಡಿದ್ರೆ ನಿದ್ದೆ ಬರೋಲ್ಲ.

ಅವರು :—ಅಯ್ಯೋ ಎಲ್ರಿ ಕಾಫಿ ! ಮೊನ್ನೆ ನಮ್ಮಾಯಿ, ಲೋಟದಲ್ಲಿ ಹಾಲಿಟ್ಟಿದ್ರು. ಹೇಳ್ದೆಕೇಳ್ದೆ ಒಂದ್ಕಪ್ 'ಸ್ಟ್ರಾಂಗ್ ಕಾಫೀ' ಮಾಡಿಕೊಂಡ್ಕುಡ್ದು ಓದ್ತಾ ಕೂತ್ಕೊಂಡೆ........ಹ್ಹ ಹ್ಹ ಹ್ಹ ಹ್ಹ !!! ಅದಕ್ಕೆ........ಹ್ಹ ಹ್ಹ ಹ್ಹ ಹ್ಹ. ನಮ್ಮಾಯಿ "ಯಾವಾಗಂದ್ರೆ ಆವಾಗ ಕಾಫಿ ಮಾಡ್ಕೊಂಡ್ಕುಡಿಯೋಕೆ ನಿನಗೇನು ಧಾಡಿ !" ಅಂದ್ರು. ಅದಕ್ಕೆ ನಮ್ಮ ತಂದೆ ಇದ್ಕೊಂಡು "ನಿಮ್ಮಪ್ಪನ್ಮನೇ ಗಂಟೇನ್ಹೋಗೋದು. ಅಲ್ಲಿ ಕೊಡ್ತಿದ್ರೆ ಅಷ್ಟೇ ಹೋಯ್ತು, ಅವನಪ್ಪನ್ಮನೇಲಿ ಅನಳ್ಮಾಡ್ಕೊಂಡು ಕುಡೀಲಿ ಬಿಡು" ಅಂದ್ರು........ಹ್ಹ ಹ್ಹ ಹ್ಹ ಹ್ಹ !! (ನಗು)

ಇವರು :—[ಹೇಳಿದ್ದು ಕೇಳಿಸಲಿಲ್ಲ]

ಅವರು :—ನೋಡ್ರಿ ಮೂರ್ನ್‌ಲೈಟು ಎಷ್ಟು ಚನ್ನಾಗಿದೆ. ಒಳಗಡೆ ಬೆಳದಿಂಗಳು ಬೀಳೋದೆ ಇಲ್ಲ. ಇದನ್ನ ನೋಡಿದ್ರೆ ಈ ಗೋಡೆಮೇಲೆ ಕೂತ್ಕೊಂಡು ಊಟಮಾಡೋಣ ಅನ್ಸುತ್ತೆ.

ಇವರು :—(ಹೇಳಿದ್ದು ಕೇಳಿಸಲಿಲ್ಲ).

ಅವರು :—ಎಷ್ಟು ಚಳಿಯಾಗತ್ತಮ್ಮ ಈಚ್ಗೆ. ಓದೋಕ್ಕೂತ್ಕೊಂಡ್ರೆ ಮೈಯೆಲ್ಲಾ ನಡ್ಗುತ್ತೆ. ಹಾಗೇ ಹೊದ್ಕೊಂಡು ಮಲ್ಗೋಣಾಂತ ಅನ್ಸುತ್ತೆ. ಓದಕ್ಮನಸ್ಸೇ ಬರೋಲ್ಲ – ಚಳೀಲಿ. ಆದ್ರೂ ನಾನೇನೋ ಒಂದ್ಗಂಟೆವರ್ಗೂ ಓದುತ್ತಲೇ ಇರ್ತೀನಿ.

ಇವರು :—ಅದಕ್ಕಿಂತ ಬೆಳಗಿನ ಝಾವ ಎದ್ದು ಓದೋದು ಒಳ್ಳೆಯದು.

ಅವರು :—ಅಯ್ಯೋ ಕೂಕಡಿಕೆ ಬಂದ್ಬಿಡುತ್ತೆ. ಮನಸ್ಸೇನೋ ಶಾಂತವಾಗಿರುತ್ತೆ. ಒಳ್ಳೆ 'ಪ್ರೆಷಸ್ ಟೈಂ'. ಆದ್ರೆ ನನ್ಗೆ ಅಷ್ಟೊತ್ನಲ್ಲಿ ಎದ್ದು ಓದೋಕೇ ಆಗೋದಿಲ್ಲಮ್ಮ.

(ಇಬ್ಬರೂ ಒಳಗೆ ಹೋಗಿ ಪುನಹ ಮಾತನಾಡಿಕೊಳ್ಳುತ್ತಾ ಹೊರಗ್ಬಂದ್ರು)

ಅವರು :—ನಮ್ಮ ಕಾಲೇಜ್ನಿಂದ ಬರ್ಬೇಕಾದ್ರೆ – ಪಬ್ಲಿಕ್ ಲೈಬ್ರರಿ — ಮುಂದೆ ಬರ್ಬೇಕು. ಅಲ್ಲಿ ದಿನಾ ಒಂದು ಕರೀಮೂತಿ ಕೋತಿ ಕಿಟಕೀಲಿ ನಿಂತ್ಕೊಂಡಿರ್ತಾನೆ. ನಮ್ಮನ್ನೋಡಿದ್ಕೂಡ್ಲೆ ಕೆಮ್ಮೋದೇನು! ಕ್ಯಾಕರಿಸೋದೇನು! ಅವನು ನಾವು ಮುಂದೆ ಬರ್ತಾ ಇದ್ರೆ ಲೆಫ್ಟ್! ರೈಟ್! ಲೆಫ್ಟ್! ರೈಟ್! ಅಂತಾನೆ. ಅಂಬುಜಾ, ಲೀಲಾ ಹೆದರ್ಕೊಂಡು ಓಡಿಬಿಟ್ರು.... ಶಲ್ಲಮ್ಮ ಹಿಂದ್ಗಡೆ ನಗ್ತಾ ನಿಂತು ಬಿಟ್ಟಿದ್ದಾಳೆ! ನಾನ್ಮಧ್ಯೆ. ಏನ್ಮಾಡ್ಲಿ? "ಏ! ಶಲ್ಲಮ್ಮ, ಬೇಗ್ಬಾರೇ ಏನು ಹಾಗೆ ನಗ್ತಾ ನಿಂತಿದ್ದೀಯಲ್ಲೇ 'ನಾಟ್ ಡೀಸೆಂಟ್' (ಮರ್ಯಾದೆಯಲ್ಲ)" ಅಂದ್ರೂ ಬರವಲ್ಲಳು. ಆಮೇಲೆ ನಕ್ಕೊಂಡು ಬಂದ್ಲು. ಅವಳೂ ನಾನೂ ಜತೇಲಿ ಬರ್ತಾ ಇದ್ರೆ ಲೀಲಾನ್ನ ನೋಡಿ ಅವನು 'ಆ ಉದ್ದದ ಜಡೇಳು! ಅಲಲಲೆ! ಹೆಂಗೆ ಬಳಕ್ತಾ ಬಾಗ್ತಾ ಹೋಗುತ್ತಿದ್ದಾಳೆ' ಅಂದ. ಸ್ವಲ್ಪ ಅವ್ನೂನೂ ವಾಲಾಡ್ತಾ ನಡೀತಾಳೆ. ಥೂವಮ್ಮಾ! ಶಲ್ಲಮ್ಮ ಒಂಥರಾ ಹುಡುಗಿ! ಅಲ್ಲಾ ಮಿಲಿಟರಿ–ಟ್ರೈನಿಂಗ್ ಕೊಡೊದ್ರಲ್ಲಿ ಫಟ್ಟಿಗಾ ಕಣೆ ಅವ್ನು. ಲೆಫ್ಟ್! ರೈಟ್! ಹೇಳ್ಕೊಟ್ಟ.

(ಇಷ್ಟರಲ್ಲಿ ಏತಂತು ಒಬ್ಬಳು ಹೊರಬಂದು ತಮಿಳಿನಲ್ಲಿ ಏನೇನೋ ಅಂದ್ರು)

ಅವರು :—ಹೊತ್ತಾಯಿತು ಅನ್ನೋಕೆ ನಿಮ್ಮ ಭಾಷೆಲೇನ್ರಿ?

ಇವರು :—ಪತ್ತಾಯಿತು ಅಂತ.

ಅವರು :—ಇಲ್ಲ ಅನ್ನೋಕೆ 'ಲೇದು' ಅಂತೀರಾ?

ಇವರು :—ನಾವೇನು ತೆಲುಗರೆ?

ಅವರು :—ಯಾವ್ದು ಸಂಗೀತ! ಜಿ.ಎಣ್.ಬಿ. ದು ಅಂತ ಕಾಣುತ್ತೆ. ಹೋಗ್ತೀನ್ರಿ.

ಇವರು :—ಹೊಂ.

ಅವರು :—ಒಳ್ಳೆ ನಿದ್ದೆ ಕೊಡಲಿ ಭಗವಂತ ನಿಮಗೆ. ನಮಗಂತೂ ಇನ್ಮೂರು ತಿಂಗಳು ನಿದ್ದೆಯಿಲ್ಲ........

ಹೀಗೆಂದವರೇ ಅಂಗನೆಯರಿಬ್ಬರೂ ಅಲ್ಲಿಂದ ಮಾಯವಾದರು.

*    *    *

ಇಷ್ಟಾದರೂ ಸರಸ ಸಲ್ಲಾಪದ ಹುಡುಗಿಯ ಬಗ್ಗೆ ಶ್ರೀಧರರಾಯರ ಭಾವನೆಗಳು ಇಂಥವೇ ಎಂದು ಹೇಳುವುದು ಕಷ್ಟ. ಆ ಹುಡುಗಿಯ ಬಗ್ಗೆ ಅವರಿಗೆ ಒಂದು ಬಗೆಯ ಆಸಕ್ತಿ ಇತ್ತು. ಇದನ್ನು ಪ್ರೇಮವೆಂದು ಕರೆಯಲು ಅವರು ಸಿದ್ಧರಿರಲಿಲ್ಲ. ಆಕೆ ಅವರ ಭಾಗಕ್ಕೆ ಉಳಿದ ಎಲ್ಲಾ ವಿದ್ಯಾರ್ಥಿನಿಯರಂತೆ ಒಬ್ಬ ಬುದ್ಧಿಶಾಲಿನಿಯಾದ, ಚಂದೊಳ್ಳೆ ಹೆಣ್ಣು. ಕಾಲೇಜಿನಲ್ಲಿ ಕಲಿತರೂ ಮನೆಗೆಲಸ ಮಾಡಿಕೊಂಡು ಮಾನವಂತ ಗೃಹಿಣಿಯಾಗಿ ಬಾಳಬಲ್ಲ ಹೆಣ್ಣು. ಆದರೂ ಆಕೆ ಒಮ್ಮೊಮ್ಮೆ ಅವರ ಗತಕಾಲದ ಸ್ಮೃತಿಯೊಂದನ್ನು ಕೆರಳಿಸುತ್ತಿದ್ದಳು.

ಶ್ರೀಧರ್ ಶಿವಮೊಗ್ಗೆಯ ಕಾಲೇಜಿನಲ್ಲಿ ಓದುತ್ತಿದ್ದಾಗ ತನ್ನೊಡನೆ ಕಲಿಯುತ್ತಿದ್ದ ವಿದ್ಯಾರ್ಥಿನಿಯೋರ್ವಳಲ್ಲಿ ಆಸಕ್ತಿ ಪೊಂದಿದ್ದರು. ಅವಳನ್ನು ಮದುವೆಯಾಗಲು ಅವರು ಹಾತೊರೆಯುತ್ತಿದ್ದರು. ಆದರೆ ಆ ಹುಡುಗಿಯ ತಂದೆ ಒಂದು ವಿಚಿತ್ರ 'ಪ್ರಾಣಿ'. ಅವನು ಅರೆಹುಚ್ಚ – ಜತೆಗೆ ಮುಂಗೋಪಿ. ಅವನಿಗೆ ಮಗಳ ಮದುವೆಯ ವಿಷಯದಲ್ಲಿ ಲವಲೇಶವಾದರೂ ಆಸಕ್ತಿ ಇಲ್ಲ. ಮಗಳನ್ನು ಮನೆಯಿಂದ ಹೊರಗೆ ಕಳುಹಿಸದೆ — ಸದಾ ಅವಳ ಮೇಲೆ ಕಣ್ಣಿಟ್ಟು ಕಾಯುತ್ತಿದ್ದ. ಅವಳ ಅಂದ ಚಂದಗಳಿಗೆ ಮಾರುಹೋಗಿ ಅವಳನ್ನು ವಿವಾಹವಾಗ ಬಯಸುತ್ತಿದ್ದ ಕಲಿತ, ಪ್ರತಿಷ್ಠಿತ, ಧನವುಳ್ಳ ಮಂದಿಗೆ ಲೆಕ್ಕವಿಲ್ಲ. ಆದರೆ ಅವನು ಯಾರನ್ನೂ ಹತ್ತಿರಕ್ಕೆ ಬರಗೊಡದೆ ಎಲ್ಲರನ್ನೂ ಕ್ಷುದ್ರ ಜಂತುಗಳಂತೆ ಕಡೆಗಣಿಸಿ ನೋಡುತ್ತಿದ್ದ. ಮೋಹಿಸಿಯಂತಿರುವ ಆಕೆ, ಆ ಕಿರಾತ ತಂದೆಯ ಕೈಯಿಂದ ತನ್ನನ್ನು ಪಾರುಮಾಡಬಲ್ಲ ದೇವತೆಗಾಗಿ, ತಪಸ್ಸು ಮಾಡುತ್ತಿದ್ದಾಳೆ........ಅವಳು ತನ್ನವಳಾದರೆ........ ಎಂದುಕೊಳ್ಳುತ್ತಾರೆ ಶ್ರೀಧರ್.

ಆದರೆ ಆ ಆಸೆ ಕೈಗೂಡುವ ಭರವಸೆಯಿಲ್ಲ. ಆಕೆ ಅವರ ಪಾಲಿಗೆ ಇದ್ದೂ ಇಲ್ಲದ ವ್ಯಕ್ತಿ. ನೆನಪಿನಲ್ಲಿ, ಕನಸಿನಲ್ಲಿ ಅವರ ರಾಣಿಯಾಗಬಲ್ಲ ವ್ಯಕ್ತಿ — ಸ್ವಪ್ನಸುಂದರಿ !

ಈಗಲೀಗ ಶ್ರೀಧರ್ ಅವರ ಮನಸ್ಸು ಮೈಸೂರು ಶಿವಮೊಗ್ಗೆಯ ಮಧ್ಯೆ ದಿನಕ್ಕೆ ಹತ್ತು ಬಾರಿ ಹರಿಯುತ್ತದೆ. ನನ್ನ ಅಪ್ರೊಡೈಟೆಯು, ಬಾನಾಡಿಯ ಶಾಕುಂತಲೆಯೆ, ಶ್ರೀಕಾಂತನ್‌ರ ಶ್ರೀಮತಿ — ಇವರಲ್ಲಿ ಯಾರ ನೆನಪಾದರೂ, ಶ್ರೀಧರರ ಕಣ್ಣ ಮುಂದೆ ಸರಸ ಸಲ್ಲಾಪದ ವ್ಯಕ್ತಿ ಸುಳಿಯುವಳು. ಆಗ ಅವರ ಮನಸ್ಸು ಶಿವಮೊಗ್ಗೆಯ ಕನಸಿನ ಕನ್ಯೆಯನ್ನು ಕಾಣಲು ಧಾವಿಸುವುದು........

ಪ್ರೇಮದ ಚಕ್ರತೀರ್ಥದಲ್ಲಿ ಬಿದ್ದವರು ಕೆಲವರಾದರೆ, ಮುಳುಗಿದವರು ಕೆಲವರು. ನಮ್ಮ ನಾಲ್ವರ ಸ್ಥಿತಿ ಒಂದೊಂದು ಬಗೆಯಾಗಿತ್ತು.



# ಒಮ್ಮೊಮ್ಮೆ ಎನಿಸುವುದು ಜೀವವಾರಿದಮೇಲೆ

ಒಮ್ಮೆ ಶ್ರೀಕಾಂತನ್ ತನ್ನ ದಿನಚರಿ ಪುಸ್ತಕದಲ್ಲಿ ಹೀಗೆಂದು ಗುರುತು ಮಾಡಿದರು :

" ನಾನು ಮತ್ತು ಮೂರ್ತಿ ಆದರ್ಶ ವಧುವಿನಲ್ಲಿರಬೇಕಾದ ಗುಣಗಳ ಬಗ್ಗೆ ಮಾತನಾಡಿದೆವು. ಆದರ್ಶ ಹೆಣ್ಣಿನಲ್ಲಿ ಇಪ್ಪತ್ತೈದು ಪಾಲು ಸೌಂದರ್ಯ, ಇಪ್ಪತ್ತೈದು ಪಾಲು ವಿದ್ಯೆ, ಐವತ್ತು ಪಾಲು ಗುಣನಡತೆ – ಹೊಂದಿಕೊಂಡು ಹೋಗಬಲ್ಲ ಗುಣ– ಇರಲೇಬೇಕು ".

ಈ ಮಾತುಕತೆ ನಡೆಯುತ್ತಿದ್ದಾಗ ಶ್ರೀಕಾಂತನ್ " ನಿಮ್ಮ ಅಪ್ರೋಪ್ರೈಟಿಗೆ ನಾನು ಕಂಡಂತೆ, ಸಾಕಷ್ಟು ರೂಪವಿದೆ, ವಿದ್ಯೆ ಇದೆ, ಒಳ್ಳೆಯ ನಡವಳಿಕೆ ಇದೆ. ಆಕೆ ನಿಮಗೆ ಯೋಗ್ಯ ವಧುವಾಗುತ್ತಾಳೆ. ಆದರೆ....! " ಎಂದು ನಿಟ್ಟುಸಿರು ಬಿಟ್ಟರು.

ಮಧ್ಯಾಹ್ನ ಡಿ. ಎನ್. ಮೂರ್ತಿ ಬಂದಿದ್ದರು. ಆತ ಬಾನಾಡಿಯ ಸಂಬಂಧಿ; ಹಾಗೂ ನಮ್ಮೆಲ್ಲರ ಗೆಳೆಯ. ಅವರು ತುಂಬಾ ಉತ್ಸಾಹಿ ತರುಣರು. ' ತಾನು ಪ್ರಸಿದ್ಧಿಗೆ ಬರಬೇಕು, ಎಲ್ಲರಿಂದ ಮನ್ನಣೆ ಪಡೆಯ ಬೇಕು ' ಎಂದು ಸದಾ ಕನವರಿಸುತ್ತಿದ್ದರು. ಅವರು ರಾಜಕೀಯ, ತತ್ವ ಶಾಸ್ತ್ರಗಳಲ್ಲಿ ತುಂಬಾ ಬುದ್ಧಿವಂತರು. ಆದರೆ ಮುಂದಕ್ಕೆ ಬರಲು ಅವಕಾಶ ವಿಲ್ಲ. ಈತನ ಯೋಗ್ಯತೆಯನ್ನು ಎತ್ತಿ ತೋರಿಸಲು ಯಾರೂ ದಿಕ್ಕಿಲ್ಲ. ಈಚೆಗೆ ತಾನೇ ಆತನ ತಂದೆ ತೀರಿಕೊಂಡಿದ್ದು ಮನೆಯ ಸಂಸಾರ ಅವರ ಬಗಲಿಗೆ ಬಿದ್ದಿತ್ತು. ಮನೆಯ ತುಂಬಾ ಮದುವೆಯಾಗಲಿರುವ ಹೆಣ್ಣು ಹುಡುಗಿಯರು; ವಿದ್ಯಾಭ್ಯಾಸ ಮಾಡುತ್ತಿರುವ ತಮ್ಮಂದಿರು. ಆದರೆ ಉತ್ಪತ್ತಿ, ಆದಾಯ ಮಾತ್ರ ಸೊನ್ನೆ. ಆತನಿಗೆ ತನ್ನ ಸ್ವಂತ ಖರ್ಚುವೆಚ್ಚ ಗಳಿಗೆ ಸಾಕಾಗುವಷ್ಟು ವರಮಾನವಿಲ್ಲ. ಎಲ್ಲೋ ಕೊಂಚ ಹೊಲ ಮನೆ ಇದೆ. ಅದರಿಂದ ಅವರ ಸಂಸಾರದ ರಥ ಸುಸೂತ್ರವಾಗಿ ನಡೆಯುವಂತಿಲ್ಲ.

ಅವರ ಹಿರಿಯ ತಂಗಿ ಕನ್ನಡ ಎಂ. ಎ. ನಲ್ಲಿ ಪದಕ ಪಡೆದಿದ್ದಳು.

ವಯಸ್ಸು ಸುಮಾರು ಇಪ್ಪತ್ಮೂರು – ಇಪ್ಪತ್ತನಾಲ್ಕು. ನೋಡುವುದಕ್ಕೆ ಆಕೆ ಕುರೂಪಿಯೇನೂ ಅಲ್ಲ. ಆಕೆಯ ಚುರುಕು ಬುದ್ಧಿಯನ್ನು ಕಂಡು ತಂದೆ ಆಕೆಯನ್ನು ಓದಿಸಿಬಿಟ್ಟರು. ಮದುವೆಯ ವಿಷಯ ಯೋಚಿಸಲಿಲ್ಲ. ಈಗ ಆಕೆ ಓದು ಮುಗಿಸಿದ್ದಾಳೆ, ಮದುವೆಯಾಗಿ, ಗೃಹಿಣಿಯಾಗಿ ಸಂಸಾರ ಮಾಡಿ ಕೊಂಡಿರಲು ಆಸೆಯಾಗಿದೆ. ಆದರೆ ಆಕೆಯ ವಿದ್ಯೆಯನ್ನು ನೋಡಿ, ಕೈ ಹಿಡಿಯಲು ಮುಂದೆ ಬಂದ ಧೀರನೊಬ್ಬನಿಲ್ಲ. ಎಲ್ಲರೂ 'ಅಬ್ಬಾ ಆಕೆ ಎಂ.ಎ. ಕಾಲೇಜಿನಲ್ಲಿ ಕಲಿತವಳು' ಎನ್ನುವರೇ ಹೊರತು ತಾವು ಮದುವೆ ಯಾಗುವುದಾಗಿ ಹೇಳಲು ನಾಲಿಗೆಯೇ ಇಲ್ಲ! ಗುಂಡಿಗೆ ಇದ್ದರೆ ತಾನೆ ಗಂಡಿಗೆ?

"ಮುಖ್ಯ ತಂದೆ ತಾಯಿಗಳದೇ ತಪ್ಪು. ಆಕೆ ಸಣ್ಣವಳಿರುವಾಗಲೇ, ಕಾಲೇಜು ತುಳಿಯದಿರುವಾಗಲೇ ಮದುವೆಮಾಡಿಬಿಟ್ಟಿದ್ದರೆ, ಈ ಪಾಡಿರುತ್ತಿರ ಲಿಲ್ಲ" ಎಂದರು ಶ್ರೀಕಾಂತನ್.

"ಪಾಪ ಆ ಹುಡುಗಿಗೆ ಹೆಚ್ಚು ಕಲಿಯಲು ಆಸೆಯಲ್ಲ!"

"ಗಂಡನ ಮನಸ್ಸನ್ನು ಒಲಿಸಿಕೊಂಡು ಕಾಲೇಜು ಕಲಿಯಲಿ, ತನ್ನ ವ್ಯಾಸಂಗವನ್ನು ಪೂರೈಸಿಕೊಳ್ಳಲಿ" ಎಂದರು ಶ್ರೀಕಾಂತನ್.

ಎಷ್ಟು ಜನ ಗಂಡಂದಿರು ತಮ್ಮ ಹೆಂಡತಿಯರು ಪದವೀಧರಳಾಗಿರಲು ಆಶಿಸುತ್ತಾರೆ? ಎಲ್ಲೋ ಕೆಲವು ಮಂದಿ ಕಲಿತ, ಸುಶಿಕ್ಷಿತ ಮಂದಿ ಮಾತ್ರ. ಹೀಗೆ ಇಚ್ಛಿಸುವುದೂ ಒಂದು ಸಮಸ್ಯೆ. ಹೆಂಡತಿಯೇ ಎಂ.ಎ. ಓದಿರಬೇಕಾ ದರೆ, ಗಂಡನು ಏನು ಓದಿರಬೇಕು? ಅವಳಿಗಿಂತ ಹೆಚ್ಚಿಲ್ಲದಿದ್ದರೂ ಆಕೆಯಷ್ಟಾದರೂ ಓದಿರಲೇಬೇಕಲ್ಲಾ!

ಡಿ. ಎರ್. ಮೂರ್ತಿ ಅವರ ತಂಗಿಯ ವಿಷಯವನ್ನೇ ತೆಗೆದುಕೊಳ್ಳೋಣ. ಆಕೆ ಎಂ. ಎ. ಆಕೆಯ ಕೈಹಿಡಿಯಲು ಮುಂದೆ ಬರುವವನ 'ಡಿಗ್ರಿ' ಏನಿರಬೇಕು?

"ಎಂ. ಎಸ್ಸಿ., ಪಿ ಎಚ್.ಡಿ., ಅಥವಾ ಬಿ. ಇ. ಆಗಿರಬೇಕು. ಬೇರೊಂದು ವಿಷಯದಲ್ಲಿ ಆತ ಪಾರಂಗತನಾಗಿದ್ದರೆ ಸಾಕು" ಎಂದರು ಶ್ರೀಕಾಂತನ್.

ಆದರೆ ಎಷ್ಟು ಜನ ಎಂ.ಎಸ್ಸಿ., ಪಿ ಎಚ್.ಡಿ., ಬಿ.ಇ. ಗಳು ಎಂ.ಎ.

ವಧುಗಳನ್ನು ಮದುವೆಯಾಗಲು ಮುಂದೆ ಬರುತ್ತಾರೆ? ಅದೂ ಕುಲಗೋತ್ರ ಸರಿಹೋಗುವ ವರಗಳು!

ಆ ಹುಡುಗಿ ಮದುವೆಯಾಗುವ ಆಸೆಯನ್ನು ಈ ಜನ್ಮದಲ್ಲಿ ಬಿಡಬೇಕು ತನಗೆ ಸರಿಹೋಗುವಂತಹ, ಕುಲಗೋತ್ರ, ವಿದ್ಯಾಬುದ್ಧಿ ಸಂಪನ್ನ ಗಂಡುಗಳ ಸಿಗುವಂತಿಲ್ಲ. ಆಕೆ ಮದುವೆ ಆಗುವಂತಿಲ್ಲ. ಇನ್ನು ಮದುವೆಯಾಗುವ ದಾರಿ? ಆಕೆ ಜಾತಿ ಬಾಹಿರಳಾಗಬೇಕು; ಇಲ್ಲಾ ಸಮಾಜ ಬಾಹಿರ ಳಾಗಬೇಕು–ಆಗ ಮಾತ್ರ ಆಕೆಯ ಆಸೆ ಕೈಗೂಡುವ ಸಂಭವ! ಎಷ್ಟು ಮಂದಿ ಕಲಿತ ತರುಣಿಯರು, ಆತ್ಮದ ಹಸಿವನ್ನು ತಣಿಸಿಕೊಳ್ಳಲು ಜಾತಿ ಸಮಾಜಗಳನ್ನು ಕಿತ್ತೊಗೆದು ಬಾಳಿನ ಪಥದಲ್ಲಿ ಮುಂದುವರಿಯಬಲ್ಲರು?

ಈ ಮೂರ್ತಿ ಅವರ ತಂಗಿ ಅಂತಹವರಿಗೆ, ಈ ಬಗೆಯ ಕೆಚ್ಚೆದೆ ಖಂಡಿತ ಬರುವುದಿಲ್ಲ. ಮರಳು ಕಾಡಿನ ಮಲ್ಲಿಗೆಯಂತೆ, ಆಘ್ರಾಣಿಸುವವರು ದಿಕ್ಕಿಲ್ಲವೆಂದು ಕೊರಗಿ, ಕುಸಿದು, ಬೀಳುವರೇ ಹೊರತು – ಸುವಾಸನೆಯನ್ನು ಬಯಸುವವರಿದ್ದೆಡೆಗೆ ಹೋಗುವ ಮನೋಧಾಷ್ಟ್ರತೆ ಇಲ್ಲ. ಅವರು ತಮ್ಮ ಹಣೆಯ ಬರಹವನ್ನು ಜರಿದು ಮೂಲೆ ಹಿಡಿಯುತ್ತಾರೆ. ದಮುಸಿದಮುನಿಯಲ್ಲಿ ಉರಿಯುವ ಕಿಚ್ಚನ್ನು ಕಣ್ಣೀರಿನ ಬಗ್ಗೆಯಿಂದ ಆರಿಸಲು ನೋಡುತ್ತಾರೆ. ತಮ್ಮ ಜೀವನದ ಶುಷ್ಕತೆಯನ್ನು ನೆನೆದು ಬರಡುತನವನ್ನು ಮರೆಯಲು ಗೀತೆಗೋ ಮತ್ತೊಂದಕ್ಕೋ ಗಂಟುಬೀಳುತ್ತಾರೆ................

ಹೆಚ್ಚು ಕಲಿತ ಮಾತ್ರಕ್ಕೆ ಹೆಂಗಸಿಗೆ ಎಂತಹ ಶಿಕ್ಷೆ?

"ಆಕೆ ಎಲ್ಲಿಯಾದರೂ ಕೆಲಸಕ್ಕೆ ಸೇರಿಕೊಂಡು ತಮ್ಮ ಅನ್ನವನ್ನು ತಾವು ಏಕೆ ದುಡಿದುಕೊಳ್ಳಬಾರದು?" ಎಂದೆ ನಾನು.

"ಆಕೆಗೆ ಮಹಾರಾಣಿ ಕಾಲೇಜಿನಲ್ಲಿ ಉಪಾಧ್ಯಾಯಿನಿ ಕೆಲಸಕ್ಕೆ ಆರ್ಡರ್ ಬಂದಿತ್ತು. ನೂರು ರೂಪಾಯಿ ಸಂಬಳ! ಆದರೆ ಆಕೆ ಕೆಲಸಕ್ಕೆ ಸೇರಲು ಒಪ್ಪಲಿಲ್ಲ. ಕೆಲಸಮಾಡಲು ದಕ್ಷತೆ ಇಲ್ಲವೆಂದಲ್ಲ; 'ತಾನು ಕೆಲಸಕ್ಕೆ ಸೇರಿ, ದುಡಿಯುವ ವ್ಯಕ್ತಿ ಎನಿಸಿಬಿಟ್ಟರೆ ಮುಂದೆ ಮದುವೆಯಾಗುವ ಸೂಚನೆಯೇ ಇಲ್ಲದೆ ಹೋದೀತು' ಎಂದು ಹೆದರಿ – ಈಗ....ಬರುವ ಗಂಡುಗಳೆಲ್ಲ ಹುಡುಗಿ ಹೆಚ್ಚು ಓದಿದವಳು ಎಂದು ಹಿಮ್ಮೆಟ್ಟುತ್ತಿದ್ದಾರೆ. ಕೆಲಸಕ್ಕೆ ಸೇರಿಬಿಟ್ಟರೆ, ಈ ಹುಡುಗಿ ಹರಾಮಿ, ಗಂಡುಬೀರಿ, ಮಾನಮರ್ಯಾದೆ

ಕಡಿಮೆ, ಸಂಸಾರಕ್ಕೆ ಲಾಯಖ್ಖಾದ ಹುಡುಗಿಯಲ್ಲವೆಂದು ದೂರ ಹೋಗುತ್ತಾರೆ. ನೂರು ರೂಪಾಯಿಯ ವ್ಯಾಮೋಹಕ್ಕೆ ಬಾಯಿಬಿಟ್ಟರೆ, ಆಜೀವ ಪರ್ಯಂತ ತಾನು ಕುಮಾರಿಯಾಗಿಯೇ ಉಳಿಯುವ ಪ್ರಸಂಗ ಬಂದೀತೆಂದು, ಆಕೆ ಕೆಲಸದ ವಿಷಯದಲ್ಲಿ ಆಸಕ್ತಿ ವಹಿಸಿಲ್ಲ" ಎಂದರು ಶ್ರೀಕಾಂತನ್.

"ಹಾಗಾದರೆ ಆಕೆಯ ಹೊತ್ತು ಹೋಗುವ ಬಗೆ?"

"ಅಡಿಗೆ ಮನೆಯಾಯಿತು, ಇಲ್ಲಾ ಪುಸ್ತಕಗಳಾಯಿತು. ಅದೂ ಬೇಸರವಾದರೆ....ಸ್ನೇಹಿತರು ..."

ಒಂದು ಕ್ಷಣ ಮೌನ. ಮತ್ತೆ ಅವರೇ ಹೇಳತೊಡಗಿದರು.

"ಯೋಗ್ಯ ಗಂಡು ದೊರೆತರೆ, ಅವನು ತನಗಿಂತಲೂ ಕಡಿಮೆ ಓದಿದ್ದರೂ ಚಿಂತೆಯಿಲ್ಲ, ವಿವಾಹವಾಗುವುದಾಗಿ ಆಕೆ ಹೇಳುತ್ತಿದ್ದಾಳೆ. ವೈಮನಸ್ಸಿಗೆ ಅವಕಾಶವಿಲ್ಲದಂತೆ ಸಂಸಾರ ತೂಗಿಸಿಕೊಂಡು ಹೋಗಬಲ್ಲೆ – ಎನ್ನುತ್ತಾಳೆ. ಆದರೆ ಯಾವನೂ ಈವರೆವಿಗೆ ಆಕೆಯನ್ನು ಮದುವೆಯಾಗಲು ಮುಂದೆ ಬಂದಿಲ್ಲ. ಮದುವೆಯಾದರೆ ಮುಂದೆ ಹೇಗೋ ಎನ್ನುವ ಭೀತಿ ಅವರಿಗೆ!"

"ಪಾಪ! ತನ್ನದಾವ ತಪ್ಪು ಇಲ್ಲದೆ ಆಕೆ ಕೊರಗಬೇಕಾಗಿದೆ. ಸುಶಿಕ್ಷಿತ, ವಿದ್ಯಾವಂತರಾದವರು ಅಂತಹವರ – ಕನ್ಯಾಸೆರೆ ಬಿಡಿಸಲು ಮುಂದೆ ಬರಬೇಕು – ಅದು ಪುಣ್ಯಕೆಲಸವೆಂದು ಭಾವಿಸಬೇಕು" — ಎಂದೆ ಹುರುಪಿನಲ್ಲಿ.

"ಅದು ಸರಿಯೇ....ಆದರೆ ನಮ್ಮ ನಿಮ್ಮಂಥವರು ಆ ಪುಣ್ಯ ಕೆಲಸಕ್ಕೆ ಮುಂದೆ ಬಂದಾಗ, ಅಪ್ರೊಡ್ಯೈಟಿಯಂಥಹವರು ಬಂದ ಆಹ್ವಾನವನ್ನು ಕಾಲಿನಿಂದ ಒದೆಯುತ್ತಾರೆ....!" ಎಂದರು.

"ಒದೆಯುವವರು ಮೂರ್ಖರಾಗುತ್ತಾರೆ!" ಎಂದೆ.

"ಆದರೆ ವಿಚಾರವಂತ ತರುಣಿಯರು ಬಂದ ಅವಕಾಶವನ್ನು ಬಂದಂತೆ ಮರಳಲು ಬಿಡುವುದಿಲ್ಲ....ಇದಕ್ಕೆ ಅಪ್ರೊಡ್ಯೈಟೆ ಒಂದು ಆಕ್ಷೇಪಣೆ ಅಷ್ಟೇ...." ಎಂದು ಮುಂದುವರಿಸಿದೆ ಮಾತನ್ನು.

"ಆಕೆಯು ನಿಮ್ಮ ವಿಷಯದಲ್ಲಿ ಹಾಗೆ ದುಡುಕಬಾರದಿತ್ತು. 'ಆಕೆ' ಮಾಡಿದುದು ತುಂಬಾ ತಪ್ಪು ಕೆಲಸ. ಕುಲಗೋತ್ರ, ರೂಪ, ವಿದ್ಯೆ, ಸ್ಥಿತಿ,

ಇವು ಯಾವುದರಲ್ಲಿಯೂ ಕೊರತೆಯಿಲ್ಲದ ವರ ತಾನಾಗಿ ಒಲಿದು ಬಂದ 'ಆಕೆ' ಇಟ್ಟ ಹೆಜ್ಜೆಯನ್ನು ಹಿಂತೆಗೆಯಬಾರದಿತ್ತು. ಕೊಟ್ಟ ವಚ ಮುರಿಯಬಾರದಿತ್ತು. ಆಕೆಗೆ ತಿಳಿವಳಿಕೆ ಸಾಲದು....ಇಂತಹ ಪ್ರಸಂ ಬೇರೊಬ್ಬರಿಗಾಗಿದ್ದರೆ ಅವರು ಖಂಡಿತ ಹೀಗೆ ಬಿಡುತ್ತಿರಲಿಲ್ಲ....ಬಂ ಸದವಕಾಶ ತಪ್ಪಿಸಿಕೊಂಡಳು" ಎಂದು ಅಪ್ರೂಪ್ರೈಟ ಮಾಡಿದ ಕೆಲಸಕ್ಕಾಗಿ ಶ್ರೀಕಾಂತನ್ ಪಶ್ಚಾತ್ತಾಪಪಟ್ಟರು.

"ಅವಕಾಶವಿನ್ನು ಇದ್ದೇ ಇದೆ – ಆದರೆ 'ಆಕೆ' ಎಚ್ಚರಗೊಳ್ಳಬೇಕು" ಎಂದೆ ನಾನು.

"ಇಲ್ಲ....ಆಕೆಯ ದೌರ್ಭಾಗ್ಯ. ಆಕೆಗೆ ಅವಕಾಶವಿಲ್ಲ" ಎಂದರು ಶ್ರೀಕಾಂತನ್.

ಹಿಂದಣ ದಿನವೆಲ್ಲಾ ಮನಸ್ಸು ಮುದುಡಿತ್ತು. ಯಾವ ಕೆಲಸ ಮಾಡಲೂ ಬೇಸರ. ಮನಸ್ಸು ಹರಿದತ್ತ ಬಿಟ್ಟಿದ್ದೆ. ಸಂಜೆ ನಿತ್ಯದ ವಿಹಾರ ಮುಗಿಸಿಕೊಂಡು ಬರುವಾಗ ಬಾನಾಡಿ ಮಾತಿನ ಮಧ್ಯೆ........ತಮ್ಮೂರಿನಲ್ಲಿ ತಾವು ಕಣ್ಣಾರ ಕಂಡ ಭಗ್ನಮನೋರಥರಾದ ಪ್ರೇಮಿಗಳ ದುರಂತ ಕಥೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದರು.

ಆತ ಆಗ ತಾನೆ ವಿಶ್ವವಿದ್ಯಾನಿಲಯದ ಹೊಸ್ತಿಲಿಂದ ಬಂದಿದ್ದ ಬಿಸಿ ನೆತ್ತರಿನ ತರುಣ. ಜೀವನದಲ್ಲಿ ಇನ್ನೂ ಅವನ ಕಣ್ಣಿಗೆ ರಂಗುರಂಗು ! ಎತ್ತ ನೋಡಿದತ್ತ ಹಚ್ಚ ಹಸುರು. ವಿಶ್ವವಿದ್ಯಾನಿಲಯದ ಮೋಹಕ ಪ್ರಭಾವ ಇನ್ನೂ ಪೂರ್ಣವಾಗಿ ಅವನ ಮೇಲೆ ಅಳಿದಿರಲಿಲ್ಲ. ಅವನು ಮೊದಲು ಕೆಲಸಕ್ಕೆ ಸೇರಿದುದು ಉಪಾಧ್ಯಾಯನಾಗಿ, ಆ ಊರಿನ ಹೈಸ್ಕೂಲಿನಲ್ಲಿ. ಕೆಲಸದಲ್ಲಿ ತುಂಬಾ ಹುರುಪು, ಹಿಗ್ಗು, ಆನಂದ.

ಆ ಸ್ಕೂಲಿಗೆ ಹೆಣ್ಣುಮಕ್ಕಳು ಕಲಿಯಲು ಬರುತ್ತಿದ್ದರು. ಅವರಲ್ಲಿ ಒಂದು ಹುಡುಗಿ – ಆತನ ವಿದ್ಯಾರ್ಥಿನಿ – ತುಂಬಾ ಲಕ್ಷಣವಂತೆ. ಆಕೆ ಅದೇ ಶಾಲೆಯ ಮುಖ್ಯೋಪಾಧ್ಯಾಯರ ಮಗಳು. ಅವಳು ಮೊದಲು ಅವನ ಗಮನ ವನ್ನು ಸೆಳೆದಳು. ಕ್ರಮೇಣ ಅವನ ಮನಸನ್ನು ಅಪಹರಿಸಿದಳು. ಅವನು ಯುವಕ, ನೋಡಲು ಸುಂದರನಾಗಿದ್ದ. ಹುಡುಗಿ ಅವನ ಪ್ರೇಮಕ್ಕೆ ತನ್ನ ಹೃದಯಮಂದಿರದಲ್ಲಿ ಸ್ಥಳ ಕೊಟ್ಟಳು. ಇಬ್ಬರೂ ಮುಂದೆ ಬರಲಿರುವ

ಸುಖದ ದಿನಗಳ ಕನಸಿನಲ್ಲಿ ಮುಳುಗಿದರು. ಅವರ ಪ್ರಣಯ ಯಾತ್ರೆ ಹೀಗೆಯೇ ಸಾಗಿತ್ತು. ಈ ಮಧ್ಯೆ ವಿಧಿ ಅವರ ಮೇಲೆ ತನ್ನ ಬಾಣ ಪ್ರಯೋಗಿಸದೆ ಇರಲಿಲ್ಲ. ಇಬ್ಬರ ಮನೆಯ ಹಿರಿಯರು ಮದುವೆಯ ಏರ್ಪಾಡು ಮಾಡಿದರು. ಹುಡುಗ ಬೇರೆ ಹುಡುಗಿಯನ್ನು ಮದುವೆಯಾಗಲು ಸಮ್ಮತಿಸಲಿಲ್ಲ. ಹುಡುಗಿ ತನ್ನ ತಂದೆ ಆರಿಸಿ ತಂದ ನೆಂಟುತನವನ್ನು ಒಪ್ಪಲಿಲ್ಲ. ಈ ಮಧ್ಯೆ ಅವರಿಬ್ಬರ ಪ್ರೇಮ ಸಂಬಂಧ ಬಯಲಾಯಿತು. ಈಗ ಇಬ್ಬರೂ ತಮ್ಮ ಹಿರಿಯರೆದುರು ತಮ್ಮ ಮನದ ಅಭಿಲಾಷೆಯನ್ನು ಆಡಿ ತೋರಿಸಿದರು.

"ಏನು ! ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟ ವೀರಶೈವನನ್ನು ಮದುವೆಯಾಗುವುದಾಗಿ ಹೇಳಲು ನಿನಗೆ ಎಷ್ಟು ಧೈರ್ಯ ಬಂತು ?" ಎಂದರು ಹುಡುಗಿಯ ತಂದೆ. ಆತ ಕರ್ಮಠ ಬ್ರಾಹ್ಮಣ. ತಾನು ಪ್ರಾಣದಿಂದ ಇರುವವರೆಗೆ ಮಗಳು ಜಾತಿಭ್ರಷ್ಟಳಾಗಲು ಬಿಡುವುದಿಲ್ಲವೆಂದು ಶಪಥ ಮಾಡಿದರು. ಹುಡುಗನು ಮುಖ್ಯೋಪಾಧ್ಯಾಯರನ್ನು ತರ್ಕದಿಂದ, ಸವಿನಿಯ ಮಾರ್ಗದಲ್ಲಿ ಒಲಿಸಲು ಪ್ರಯತ್ನಿಸಿ ವಿಫಲನಾದ. ಈಗ ಅವನಿಗೆ ತನ್ನ ತಂದೆಯನ್ನು ಒಪ್ಪಿಸುವ ಕೆಲಸಕ್ಕಿಂತಲೂ, ಕನ್ಯಾಪಿತೃವನ್ನು ಒಪ್ಪಿಸುವುದು ಕಷ್ಟದ ಕೆಲಸವಾಯಿತು. ಆದರೂ ಧೃತಿಗೆಡಲಿಲ್ಲ. ಎಲ್ಲಾ ಹಾದಿಯಲ್ಲಿ ಪ್ರಯತ್ನಿಸಿ ನೋಡಿದ. ಅವನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಆತ ಒಪ್ಪಲಿಲ್ಲ. ಹುಡುಗಿಯ ಮದುವೆಯನ್ನು ಬೇಗ ನಡೆಸಲು ನಿಶ್ಚಯಿಸಿದ. ಗಂಡಿಗಾಗಿ ಹತ್ತು ಕಡೆ ಹುಡುಕಿದ. ಒಬ್ಬ ಹುಡುಗ ಕಡೆಗೊಂದು ದಿನ ಹುಡುಗಿಯನ್ನು ಮದುವೆಯಾಗುವುದಾಗಿ ಒಪ್ಪಿಹೋದ. ಈಗ ಹುಡುಗಿಗೆ ದಿಕ್ಕೇ ತೋಚಲಿಲ್ಲ. ಯಾವುದೋ ಪವಾಡ ನಡೆದು, ತಮ್ಮಿಬ್ಬರ ಮದುವೆ ನಡೆದು ಹೋಗುವುದಾಗಿ ನಂಬಿದ್ದ ಅವಳಿಗೆ, ಈಗ ಯಾವ ಆಸೆಯೂ ಉಳಿಯಲಿಲ್ಲ. ಆ ತರುಣ ಪ್ರಣಯಿಗಳಿಗೆ ಈಗ ಉಳಿದುದು ನಿರಾಶೆ – ಭೇದಿಸಲಾಗದ ಕತ್ತಲು !

ಒಂದು ದಿನ ಆ ಊರಿನ ಜನಕ್ಕೆಲ್ಲ ಉಸಿರು ಕಟ್ಟುವಂತಹ ಸುದ್ದಿ ಬಂತು. ಅಲ್ಲಿನ ಸುದ್ದಿಗಾರನೊಬ್ಬ ತನ್ನ ಪತ್ರಿಕೆಗೆ ಹೀಗೆ ವರದಿಮಾಡಿದ. "ಇಬ್ಬರು ಪ್ರೇಮಿಗಳ ಆತ್ಮಹತ್ಯ : ಈ ಊರಿನ ಹೈಸ್ಕೂಲಿನ ಉಪಾಧ್ಯಾಯರಾದ.........ಎಂಬ ಯುವಕರು ವಿಷವನ್ನು ತಿಂದು ಆತ್ಮಹತ್ಯೆ ಮಾಡಿಕೊಂಡರು. ಇದೇ ಹೊತ್ತಿಗೆ ಅದೇ ಶಾಲೆಯ ಮುಖ್ಯೋಪಾಧ್ಯಾಯರ ಮಗಳು ವಿಷವನ್ನು

ಬಾಳೆಹಣ್ಣಿನಲ್ಲಿ ನುಂಗಿ ಪ್ರಾಣತ್ಯಾಗ ಮಾಡಿದ್ದಳು. ಇವರಿಬ್ಬರು ಪರಸ್ಪ ಪ್ರೀತಿಸುತ್ತಿದ್ದರೆಂದೂ, ಮದುವೆಗೆ ಹಿರಿಯರು ಅನುಮತಿ ಕೊಡದೆ ಇದ್ದು ರಿಂದ ಆತ್ಮಹತ್ಯೆ ಮಾಡಿಕೊಂಡರೆಂದೂ ಹೇಳಲಾಗಿದೆ"

ರಾತ್ರಿಯೆಲ್ಲಾ ಈ ಕಥೆಯ 'ಗೊತ್ತಿ'ನ ಸುತ್ತಾ ಮನಸ್ಸು ಸುತ್ತು ತ್ತಿತ್ತು. ಭಗ್ನ ಹೃದಯಿಗಳನ್ನು ಪ್ರೀತಿ ಎಂತಹ ಕೃತ್ಯಕ್ಕೆ ಪ್ರೇರ ಪಿಸುತ್ತದೆ!

ರಾತ್ರಿಯೆಲ್ಲಾ ನನ್ನ ಕಣ್ಣಿಗೆ ನಿದ್ದೆ ಹತ್ತಲಿಲ್ಲ. ಹಾಸಿಗೆಯ ಮೇ ಹೊರಳಿ ಹೊರಳಿ ಮೈಕೈ ನೋವು ಬಂದಿತ್ತು. ಬೆಳಗ್ಗೆ ಮನಸ್ಸಿಗೆ ಒಂದ ಬಗೆಯ ಮಬ್ಬು!

ಅಂದು ಓದಲು ಮನಸ್ಸು ಸಿದ್ಧವಿರಲಿಲ್ಲ. ನೇರ ವಾಚನಾಲಯಕ್ಕೆ ಹೋದೆ. ಅಲ್ಲಿನ ಪತ್ರಿಕೆಯೊಂದರಲ್ಲಿ ಸುಮಾರು ಏಳು ಅಡಿ ಎತ್ತರದಿಂದ ಬಿದ್ದು ಪ್ರಾಣ ಬಿಟ್ಟ ಒಬ್ಬಾತನ ವಿಷಯ ವರದಿಯಾಗಿತ್ತು. ಅವನ ಬಾಳು ಎಷ್ಟು ಸುಖಕರ ಎನ್ನಿಸಿತು. ಆ ಹೊತ್ತಿನಲ್ಲಿ ಮನಸ್ಸು ಉಷಾಪ್ರಿಯರ ಗೀತೆಯೊಂದನ್ನು ನೆನೆಯಿತು.

"ಒಮ್ಮೊಮ್ಮೆ ಎನಿಸುವುದು ಜೀವವಾರಿದಮೇಲೆ
ಸುಖಸ್ವಪ್ನಗಳ ಬಿಂಬ ಮೂಡಬಹುದೆಂದು
ಕೊಳದ ನೀರಲೆಯಳಿದು ಮೌನದಲಿ ಮಲಗಿರಲು
ಸೌಂದರ್ಯದಾಗಸವ ಬಿಂಬಿಸುವ ತೆರದಿ!

ಆದರೆಂತೋ ಏನೊ! ಅಂತಾದರೆನಿತು ಸುಖ;
ಬಾಳ ದುಸ್ವಪ್ನವನು ಮರೆಯಬಹುದಾಗ;
ಜೀವದೊಳಗಿಲ್ಲದುದು ಸಾವಿನಲಿ ಪಡೆಯುತಲಿ,
ನೋವಿಲ್ಲದೊಲವಿಂದ ಸವಿಯಬಹುದಾಗ!

ಗೆಳೆಯನ ಕವಿವಾಣಿ ಎಷ್ಟು ಹಿತ! ಆತ ನೊಂದಜೀವಿ. ಅನುಭವದಿಂದ ಪ್ರೇರಿತವಾದ ಮಾತು ಅದು. ಅವರಿಗೆ ತಮ್ಮ ಬಾಳಿನ ಉಷೆ ಇಲ್ಲದೆ ವಿರಹ. ನನಗೆ ನನ್ನ ಉಷೆಯಿದ್ದೂ ವಿರಹ! ಒಬ್ಬರು ನೆನಪಿನಲ್ಲಿ ಮಾತ್ರ ಬದುಕಿ ದ್ದಾರೆ! ಮತ್ತೊಬ್ಬರು ರಕ್ತಮಾಂಸದಲ್ಲಿ ಜೀವಂತ ವ್ಯಕ್ತಿಯಾಗಿದ್ದಾರೆ.

ಒಂದು ಜ್ಯೋತಿರ್ಮಯ ಜೀವ. ಇನ್ನೊಂದು ಪಂಚಭೂತ ಕಾಯ. ಒಂದು ತಾರಿಣಿ ಸ್ವರೂಪ; ಇನ್ನೊಂದು ತಾರಿಣಿ ಅಂಶೀರೂಪ. ಇಬ್ಬರೂ ದಿಕ್ಕುಗೆಟ್ಟ ಪಥಿಕರು. ಬಾಳಿನ ನೋವುಂಡವರು. ಆತನ ಹಾಡು 'ಉಷಾಸ್ವಪ್ನ' ಕೇವಲ ವ್ಯಕ್ತಿಗತ ವಿರಹ ಗೀತೆಗಳಲ್ಲ. ಅವು ನೊಂದ ಪ್ರೇಮಿಗಳ ಮನದಳಲ ಕಾವ್ಯವಾಹಿನಿ. ಭಗ್ನ ಪ್ರಣಯಿಗಳೆಲ್ಲರ ಗೀತೆ! ನೊಂದಜೀವಕ್ಕೆ ಶಾಂತಿ ಸಮಾಧಾನ ತರಬಲ್ಲ ದಿವ್ಯಮಂತ್ರಗಳು! ನಾನು ಆ ಸುದ್ದಿಯನ್ನು ಓದಿಕೊಂಡು ಉಷಾಸ್ವಪ್ನದ....

"ನಿನ್ನದು ಆ ತೀರ – ನನ್ನದು ಈ ತೀರ
ನಟ್ಟನಡುವಿನಂತರ ತೊರೆಯ ಅಭ್ಯಂತರ;
ಕಿರಿದಹುದು ಕಿರಿದಲ್ಲ, ಹಿರಿದಲ್ಲ ಹಿರಿದಹುದು,
ಕಿರುತೊರೆಯ ಅಂತರ – ಕಡಲಿನಂತರ!"

ಎನ್ನುವ ಗೀತೆಯನ್ನು ಗೊಣಗುಟ್ಟುತ್ತಾ ಕಲಾಮಂದಿರಕ್ಕೆ ಬಂದೆ. ಶ್ರೀಕಾಂತನ್ ಏನೋ ನೋಟ್ಸು ಬರೆಯುತ್ತಿದ್ದರು. ನಾನು, ಬಾನಾಡಿ ಮಹಡಿ ಮುಂದಿನ ಕಟಕಟೆಗೆ ಒರಗಿಕೊಂಡು ಮಾತನಾಡುತ್ತಿದ್ದೆವು. ನಾನು ಕಟಕಟೆಯ ಕೆಳಗೆ ಬಗ್ಗಿ ನೋಡುತ್ತಾ "ಇಲ್ಲಿಂದ ಕೆಳಗೆ ಬಿದ್ದರೆ ಪ್ರಾಣ ಹೋಗುತ್ತದೆಯೇ?" ಎಂದೆ.

"ಆಯುಸ್ಸು ತೀರಿದ್ದರೆ ಹೋಗುತ್ತದೆ" ಎಂದರು ಬಾನಾಡಿ.

"ನಾನು ಇಲ್ಲಿಂದ ಧುಮುಕಲೇ?"

ನನ್ನ ಮಾತು ಗೆಳೆಯನಿಗೆ ತಮಾಷೆ ಎನಿಸಿತು. "ಧುಮುಕಿ, ಒಂದು ರೂಪಾಯಿ ಕೊಡುತ್ತೇನೆ."

ನಾನು ಧುಮುಕಲಾರೆನೆಂದು ಗೆಳೆಯ ಹಾಗೆಂದ.

"ಹಾಗಾದರೆ ನೋಡುತ್ತೀರಾ, ನಾನು ಧುಮುಕುತ್ತೇನೆ" ಎಂದವನೇ ಕೆಳಗೆ ಹಾರಿಬಿಟ್ಟೆ; ಸುಮಾರು ಹನ್ನೆರಡು ಅಡಿ ಎತ್ತರದ ಮಹಡಿಯಿಂದ ಕೆಳಗೆ ನೆಗೆದು ಬಿಟ್ಟೆ!

"ಹಾ! ಏನು ಮಾಡಿಬಿಟ್ಟಿರಿ!" ಎಂದು ಚೀರಿದ ಬಾನಾಡಿ.

ನನಗೆ ಧುಮುಕಿದ್ದೊಂದು ಗೊತ್ತಿತ್ತು. ಮುಂದೆ ಆದುದು ಕೆಲವು ನಿಮಿಷಗಳವರೆಗೆ ತಿಳಿಯಲಿಲ್ಲ.

ನಾನು ಧುಮುಕಿದೆ. ನೂರೈವತ್ತು ಪೌಂಡು ತೂಕದ ದೇಹ, ಗ
ನೆಲದ ಮೇಲೆ ಕುಕ್ಕಿದ ರಬ್ಬರ್ ಚೆಂಡಿನಂತೆ ಬಿತ್ತು. ಬಿದ್ದ ಪೆಟ್ಟಿಗೆ ಪು
ವೆಗರಿದಂತೆ! ಕ್ಷಣಕಾಲ ಎಚ್ಚರತಪ್ಪಿ ಮಲಗಿದೆ. ಆಗ ನನಗೆ ಪ್ರಜ್ಞೆಯಿ
ಆದರೆ ದೇಹದ ನೋವು, ಸಂಕಟ, ನನ್ನನ್ನು ಎಚ್ಚರಿಸಿತು. ಕಣ್ಣು ಬಿಟ
ನೋಡಿದೆ. ಮಹಡಿಯ ಮೆಟ್ಟಲುಗಳ ಬಳಿ ಬಂದು ಬಿದ್ದಿದ್ದೆ! ಇಲ್ಲಿಗೆ ಹೇ
ಬಂದೆ? ನನ್ನನ್ನು ಇಲ್ಲಿಗೆ ಹೊತ್ತು ತಂದವರಾರು?........ನನ್ನನ್ನು ಯಾರು
ಬಿದ್ದ ಕಡೆಯಿಂದ ಇಲ್ಲಿಗೆ ಸಾಗಿಸಿರಲಿಲ್ಲ. ನಾನೇ ಬಿದ್ದೊಡನೆಯೇ ಎದ್ದು
ಬಂದೆನಂತೆ ಯಾವ ಅಪಾಯವಾಗದವನಂತೆ! ಆದರೆ ಇವು ನನಗೊಂದು
ಗೊತ್ತಿಲ್ಲ. ಎಚ್ಚರ ತಪ್ಪಿದ ಸ್ಥಿತಿಯಲ್ಲಿ– ನನಗೆ ತಿಳಿಯದಂತೆ ಈ ಕೆಲಸ
ಮಾಡಿದ್ದೆ!

"ಅಯ್ಯೋ! ಏನೆಲ್ಲ ಮಾಡಿಬಿಟ್ಟಿರಿ!" ಎಂದು ಬಾನಾಡಿ, ಶ್ರೀಕಾಂತನ್
ಕೂಗುತ್ತಾ ಬಂದರು. ಅವರ ಮಾತು ನನ್ನ ಕಿವಿಗೆ ತಾಕಿದರೂ ಮನಸ್ಸಿಗೆ
ತಾಕಲಿಲ್ಲ.

"ಅಯ್ಯೋ! ನೋವು! ನೋವು!! ನೋವು........!!!"

ನಾನು ಒಂದೇ ಸಮನೆ ಕೂಗಿಕೊಳ್ಳುತ್ತಿದ್ದೆ. ಮುಖವನ್ನೆಲ್ಲಾ ಗಂಟಿಕ್ಕಿ
ಕೊಂಡು ನೋವಿನ ಭಾಗಗಳನ್ನು, ಸವರಿಕೊಳ್ಳುತ್ತಾ ನುಲುಕುತ್ತಿದ್ದೆ.

"ಮೂರ್ತಿ, ಮೂರ್ತಿ! ಏನಾಯ್ತು ರೀ? ಎಲ್ಲಾಯಿತು ಪೆಟ್ಟು?"
ಗೆಳೆಯರು ದೇಹವನ್ನು ಕುಲಕಿ ಕೇಳಿದರು. ಕಣ್ಣು ಬಿಟ್ಟೆ. ಎದುರಿಗೆ
ಗಾಬರಿಗೊಂಡ ಮಿತ್ರರು!

"ಕಾಲಿಗೆ ಪೆಟ್ಟಾಯಿತೆ? ಬೆನ್ನು ಮೂಳೆ ಮುರಿಯಿತೆ? ಎಲ್ಲಿ
ನೋವು?"—ನಾನು ಮಾತಿಲ್ಲದೆ ಬಲಗಾಲಿನ ಕಡೆಗೆ ತೋರಿಸಿದೆ.

ದೇಹಕ್ಕೆ ಗಾಯವಾಗಿ ರಕ್ತ ಬಂದಿರಬಹುದೇನೋ ಎಂದು ಗೆಳೆಯರು
ದೇಹವನ್ನು ಪರೀಕ್ಷಿಸಿ ನೋಡಿದರು. ದೇವರ ದಯ! ಯಾವ ಗಾಯವೂ
ಉಂಟಾಗಿರಲಿಲ್ಲ. "ಬೇರೆಲ್ಲೂ ಅಪಾಯವಾಗಿಲ್ಲವಲ್ಲ! ಬೆಳಗ್ಗೆ ಎದ್ದು
ಒಳ್ಳೆಯವರ ದರ್ಶನ ಮಾಡಿದಿರಿ! ಇಲ್ಲದಿದ್ದರೆ ಇಷ್ಟು ಮೇಲಿನಿಂದ
ಬಿದ್ದರೆ ಬದುಕುವುದು ಅಂದರೇನು? ಬದುಕಿದರೂ ಕಾಲೋ, ಕೈಯೋ,
ಸೊಂಟವೋ ಊನವಾಗುತ್ತಿತ್ತು. ಇಲ್ಲಾ ತಲೆ ಬರುಡೆಯೇ ಚೂರಾಗ

ಬೇಕಾಗಿತ್ತು....ದೇವರೇ ನಿಮ್ಮನ್ನು ಪಾರುಮಾಡಿದ" ಎಂದು ಹೇಳುತ್ತಾ ಬಲಗಾಲನ್ನು ನೇವರಿಸಿದರು.

ಆ ಕಾಲು ಒಂದೇ ಸಮನೆ ಕಂಪಿಸುತ್ತಿತ್ತು. ಧಗಧಗನೆ ಉರಿಯುತ್ತಿತ್ತು! ಮುಟ್ಟಿದರೆ ಪ್ರಾಣಹೋಗುವ ನೋವು! ಬಲಗಾಲಿಗೆ ಹೆಚ್ಚಿಗೆ ಪೆಟ್ಟು ಬಿದ್ದಿತ್ತು. ಸುಮಾರು ನೂರೈವತ್ತು ಪೌಂಡು ತೂಕವೆಲ್ಲಾ ಅದರ ಮೇಲೆ ಬಿದ್ದಿತ್ತು. ಹೀಗಾಗಿ ಉಳಿದ – ದೇಹಕ್ಕೆ ಅಪಾಯವಾಗದಿದ್ದರೂ ಅಂಗಾಲಿನ ಮೃದುವಾದ ಮಾಂಸಖಂಡಗಳು ಪುಡಿಪುಡಿಯಾಗಿತ್ತು. ರಕ್ತ ಹೆಪ್ಪುಗಟ್ಟಿಕೊಂಡು ಶ್ಯಾಮಲ ವರ್ಣವನ್ನು ತಳೆದಿತ್ತು. ನಿಮಿಷ ನಿಮಿಷಕ್ಕೂ ಅದರ ಊತ ಹೆಚ್ಚಾಗುತ್ತಾ ನಡೆದಿತ್ತು. ಒಂದೆರಡು ಕಾಲುಮೂಳೆಗಳು ಸ್ಥಳಾಂತರಿಸಿದ್ದವೇ ಹೊರತು ಮುರಿದಿರಲಿಲ್ಲ. ಅವು ಸಾಕಷ್ಟು ಬಲವಾಗಿದ್ದುದರಿಂದ ಉಳಿದುಕೊಂಡವು. ಅವು ಎಳಸಾಗಿದ್ದಿದ್ದರೆ – ಕಾಲುಮುರಿದುಕೊಂಡು– ಕುಂಟನಾಗಬೇಕಾಗುತ್ತಿತ್ತು – ಸಾಯುವ ಪರ್ಯಂತ! ದೇವರು ನನ್ನ ಭಾಗಕ್ಕೆ ಇದ್ದ. ಸಾವಿನ ಉಡಿಯಲ್ಲೂ ನನ್ನನ್ನು ಪಾರುಮಾಡಿದ!

ಹಾಸ್ಟಲಿನ ಗೆಳೆಯರು ಈ ವೇಳೆಗೆ ಈ ಸುದ್ದಿಯನ್ನು ಕೇಳಿ ತಿಳಿದು ಏನಾಯಿತೆಂದು ನೋಡಲು ಬಂದರು. ಈ ಹೊತ್ತಿಗೆ ಗೆಳೆಯನೊಬ್ಬ ನನಗಾಗಿ ಕಟ್ಟುಕಥೆಯೊಂದನ್ನು ನೇಯ್ದುಕೊಟ್ಟಿದ್ದ. 'ಮಹಡಿಯಿಂದ ಬೇಕೆಂದು ಧುಮುಕಿದೆ ಎಂದರೆ ನೋಡಿದವರು ನಗುತ್ತಾರೆ. ಹಾಸ್ಯ ಮಾಡುತ್ತಾರೆ. ಹುಚ್ಚನೆಂದು ಕರೆಯಲೂ ಹೇಸುವುದಿಲ್ಲ. ಪರೀಕ್ಷೆಗೆ ಹೆದರಿ ಪ್ರಾಣ ತೆಗೆದುಕೊಳ್ಳುವುದಕ್ಕೆ ಮಾಡಿದ ಸಂಚು ಇದು – ಎಂದು ಬಾಯಿಗೆ ಬಂದಂತೆ ಹರಟೆ ಹೀಯಾಳಿಸುತ್ತಾರೆ. ಆದುದರಿಂದ ಮಹಡಿಯ ಮೆಟ್ಟಲಿಳಿಯುವಾಗ 'ಕಾಲು ಜಾರಿ ಬಿದ್ದೆ' ಎಂದು ಹೇಳಿ" ಎಂದು ಉಪದೇಶಮಾಡಿದ್ದ. ನನಗೆ ಅದೇ ಸಮಂಜಸವೆನಿಸಿತು. ಮಹಡಿ ಮೆಟ್ಟಲಿಳಿಯಲು ಅದಕ್ಕೆ ಇದ್ದ ಹಿಡಿ, ಗೆದ್ದಲುಹತ್ತಿ ಹಳೆಯದಾಗಿತ್ತು. ಯಾರೋ ಅದನ್ನು ನೂಕಿ ನೆಲಕ್ಕೆ ಕೆಡವಿಬಿಟ್ಟಿದ್ದರು. ನಾನು ಮೆಟ್ಟಲಿಳಿಯುವಾಗ ಬಿದ್ದೆನೆನ್ನುವ ಕಥೆ ಈ ಸಮಯಕ್ಕೆ ಸರಿಹೋಲುತ್ತಿದ್ದ ಕಥೆ. ಅದನ್ನೇ ಬಂದವರೆಲ್ಲರಿಗೂ ಹೇಳಿದೆ.

ಈಗ ನನ್ನನ್ನು ಸಂತೈಸಲು ಹಾಸ್ಟಲಿನಲ್ಲಿದ್ದವರೆಲ್ಲ ಬಂದಿದ್ದರು.

ಕೆಲವರು ಆಸ್ಪತ್ರೆಗೆ ಹೋಗಲು ಸೂಚಿಸಿದರು. ಇನ್ನು ಕೆಲವರು 'ನಾಟಿ' ವೈದ್ಯರಲ್ಲಿಗೆ ಹೋಗಲು ಹೇಳಿದರು.

ಹಾಸ್ಟಲಿನ ಮ್ಯಾನೇಜರರು ನಾನು ಬಿದ್ದ ಸುದ್ದಿ ಕೇಳಿ ಓಡಿಬಂದರು. ಕೈಪಿಡಿ ಇಲ್ಲದೆ ಬಿದ್ದ ಪ್ರಕರಣ ಕೇಳಿ ಮೇಲಧಿಕಾರಿಗಳಿಗೆ ಕೈಪಿಡಿ ಮಾಡಿಸಿ ಕೊಡಲು ಅರ್ಜಿಯನ್ನು ಅಂದೇ ಬರೆದುಬಿಟ್ಟರು!

ಬಾನಾಡಿ ಮೆಲ್ಲನೆ ಕೊಠಡಿಯ ತನಕ ನನ್ನನ್ನು ಹಿಡಿದುಕೊಂಡು ಸಾಗಿದರು. ಹೋಗಿ ಜಟಕಾ ತಂದು ಪೈಲ್ವಾನ್ ಒಬ್ಬನ ಬಳಿ ನೀವಿಸಿ, ನರದ ನೆಟಿಕೆ ತೆಗೆಯಿಸಿದರು. ಅಂದೆಲ್ಲಾ ಬಾನಾಡಿ ಕಾಲೇಜಿಗೆ ಹೋಗದೆ ನನ್ನ ಉಪಚಾರದಲ್ಲೇ ನಿಂತರು.

ಹಾಸ್ಟಲಿನಲ್ಲಿ ಕೋಲಾಹಲ ಸಂಗತಿಯೆಂದರೆ ಮೂರ್ತಿ ಮಹಡಿ ಮೆಟ್ಟಲಿನಿಂದ ಬಿದ್ದು ಕಾಲು ಮುರಿದುಕೊಂಡರಂತೆ!

ಈಗಲೀಗ ನನ್ನ ಬುದ್ಧಿ ನನ್ನ ಹತೋಟಿಗೆ ಬಂದಿತ್ತು. ಎಂತಹ ಕೆಲಸಮಾಡಿಬಿಟ್ಟಿದ್ದೆ! ನಡೆದುದನ್ನು ನೆನಸಿಕೊಂಡರೆ ಮೈ 'ಜುಂ' ಎನ್ನುವುದು. ಯಾತಕ್ಕಾಗಿ ಈ ಕೆಲಸಮಾಡಿದೆ? ....ಅಪ್ರೊಡೈಟ ನನ್ನ ಪ್ರೇಮವನ್ನು ಪುರಸ್ಕರಿಸಲಿಲ್ಲವೆಂದೇ....? ನಾನೊಬ್ಬ ವಿಚಾರಶೂನ್ಯ! ಮತಿಗೇಡಿ!! ಹುಚ್ಚ!!! ನನ್ನನ್ನು ಕಂಡು ನನಗೇ ನಗು ಬಂತು. ವಿಕಟವಾಗಿ ನಕ್ಕುಬಿಟ್ಟೆ.

ಇನ್ನೆರಡು ದಿನಗಳ ನಂತರ ಹಾಸ್ಟಲ್ ವಾರ್ಷಿಕೋತ್ಸವ. ಆ ಹೊತ್ತಿಗೆ ಆಡಬೇಕಿದ್ದ ನಾಟಕದಲ್ಲಿ ನನ್ನದೂ ಒಂದು ಪಾತ್ರವಿತ್ತು.

ನಾಲ್ಕೈದು ದಿನಗಳಲ್ಲಿ ಶ್ರೀಧರ್‌ರಾಯರ ನಾಟಕ 'ಕರುಳಿನ ಕೂಗು' ಆಕಾಶವಾಣಿ ಕೇಂದ್ರದಿಂದ ಪ್ರಸಾರವಾಗುವುದಿತ್ತು.

ಅಪ್ರೊಡೈಟ ನನ್ನ ಪುಸ್ತಕಗಳನ್ನು ಹಿಂತಿರುಗಿಕೊಡುವುದಾಗಿ ತಿಳಿಸಿದ್ದಳು.

ಮಿತ್ರಮೇಳದ ವಾರ್ಷಿಕೋತ್ಸವ ಕೆಲವೇ ದಿನಗಳಲ್ಲಿ ನಡೆಯು ವುದಿತ್ತು.

ಮಿತ್ರಮೇಳ ಮತ್ತು 'ಇಂಗ್ಲಿಷ್ ಅಸೋಸಿಯೇಷನ್'ಗಳ ಆಶ್ರಯ ದಲ್ಲಿ ಜನರಲ್ ಲೆಕ್ಚರ್ಸ್‌ಗಳನ್ನು ಏರ್ಪಡಿಸಿದ್ದೆವು. ಇಷ್ಟೆಲ್ಲಾ ಕಾರ್ಯಕ್ರಮ

ಗಳಿಗೆ ನಾನು ಇರಲೇಬೇಕಿತ್ತು. ಆದರೆ ದುಡುಕಿ ಎಂತಹ ಹುಚ್ಚು ಕೆಲಸ ಮಾಡಿಕೊಂಡುಬಿಟ್ಟೆ !

ಪರೀಕ್ಷೆಯ ಹೊತ್ತಿಗೆ ಕೈಕಾಲು ಮುರಿದುಕೊಂಡು ಆಸ್ಪತ್ರೆ ಸೇರಿ ಬಿಟ್ಟಿದ್ದರೆ! ಎರಡು ವರ್ಷಗಳ ಶ್ರಮ, ಹಣ, ಮತ್ತು ಕಾಲ ಎಲ್ಲವೂ ವ್ಯರ್ಥವಾಗುತ್ತಿತ್ತು. ಆಗ ಇದರಿಂದಾಗುತ್ತಿದ್ದ ಪರಿಣಾಮ ಎಂತಹದೆಂದು ಯೋಚಿಸಲೂ ಹೆದರಿದೆ. "ದೇವರೇ ನಿನ್ನನ್ನು ಮರೆತು ಮಹಾಪರಾಧ ಮಾಡಿದೆ, ನೀನು ನನ್ನನ್ನು ಉಳಿಸಿದ್ದೀಯೆ – ನನ್ನ ಅನಂತ ಅಪರಾಧಗಳನ್ನು ಮರೆತು. ಮುಂದೆಯೂ ಇದೇ ರೀತಿಯಲ್ಲಿ ನನ್ನನ್ನು ಕೈ ಬಿಡದೆ ಕಾಪಾಡು" – ಎಂದು ಹೃದಯ ಒಂದೇ ಸಮನೆ ಮೊರೆಯಿಡುತ್ತಿತ್ತು.

ಶ್ರೀಧರ್ ಮತ್ತು ಅನಂತ್ ಕಾಲೇಜಿನಲ್ಲಿ ಈ ಸುದ್ದಿಯನ್ನು ತಿಳಿದು ಗಾಬರಿಯಾಗಿ ಬಂದು ನೋಡಿಕೊಂಡು ಹೋದರು.

ನನಗೆ ಈಗ ಒಂದು ತರಹ 'ಮಂಪರ' ಹಿಡಿದಿತ್ತು. ಯಾರಾದರೂ 'ಯಾಕ್ರಿ ಹೀಗೆ ಮಾಡಿದ್ರಿ' ಎಂದು ಕೇಳಿದರೆ, ಅವರನ್ನು ಮನಸ್ವೀ ಬೈಯ ಬೇಕೆನಿಸುತ್ತಿತ್ತು. ಆದರೆ ಹಾಗೆ ಮಾಡದೆ ಮುಖವನ್ನು ಗಂಟಿಕ್ಕಿ ಕೆಂಗಣ್ಣು ಬಿಟ್ಟು ಹೆದರಿಸಿ ಕಳುಹಿಸುತ್ತಿದ್ದೆ. ಈ ಅನುಭವವನ್ನು ಹೊಂದಿದ ಕೆಲವು ಗೆಳೆಯರು 'ಮೂರ್ತಿಗೆ, ಏನೋ ಆಗಿದೆ' ಎಂದುಕೊಳ್ಳುತ್ತಿದ್ದರು.

ಮಧ್ಯಾಹ್ನವೆಲ್ಲಾ ನಿದ್ರೆಗೂ ಎಚ್ಚರಕ್ಕೂ ನಡುವಣ ಜಾಗೃತ ಸ್ಥಿತಿ ಯಲ್ಲಿದ್ದೆ. ಆಗ ಒಂದು ಸುಂದರ ಕನಸು. ನಾನು ಆಸ್ಪತ್ರೆಯಲ್ಲಿ ದೊಡ್ಡ ದೊಡ್ಡ ಗಾಯದ ಪಟ್ಟಿಗಳಿಂದ ಕಟ್ಟಲ್ಪಟ್ಟು ನರಳುತ್ತಾ ಬಿದ್ದಿದ್ದೇನೆ. ನಾನು ಬಿದ್ದು ಆಸ್ಪತ್ರೆಗೆ ಸೇರಿಸಲ್ಪಟ್ಟಿರುವ ಸಂಗತಿಯನ್ನು ಹೇಗೋ ಅಪ್ರೋಡೈಟಿ ತಿಳಿದುಕೊಂಡು ಆಸ್ಪತ್ರೆಗೆ ಒಂದೇ ಉಸಿರಿನಲ್ಲಿ ಓಡಿಬಂದಿದ್ದಾಳೆ. (ನನ್ನನ್ನು ಕಂಡೊಡನೆಯೇ ಆಕೆ ರೋದಿಸತೊಡಗಿದಳು.) ಕಣ್ಣೀರನ್ನು ಸೀರೆಯ ಸೆರಗಿ ನಿಂದ ಒರೆಸಿಕೊಳ್ಳುತ್ತಾ ನನ್ನನ್ನು ಸಂತೈಸುತ್ತಿದ್ದಾಳೆ. ಮೈಗಾಯವನ್ನು ತನ್ನ ಮೃದು ಕೈಗಳಿಂದ ಸವರುತ್ತಿದ್ದಾಳೆ. ಅದೆಂತಹ ಸುಖ ಸ್ಪರ್ಶ! ಆಗ ನನಗೆ ನೋವಿನ ಬದಲು ಆನಂದ. ಸಂಕಟದ ಬದಲು ಸಂಭ್ರಮ."

ಗೆಳೆಯರಿಗೆ ಈ ಕನಸು ಹೇಳಿದಾಗ ಅವರು ಬೈದುಬಿಟ್ಟರು. ಶ್ರೀಧರ್ ಅಂತೂ ಕೆರಳಿ ಆಡಿದರು. "ಆ ಪಿಶಾಚಿಯ ದೆಸೆಯಿಂದ ಇಷ್ಟೆಲ್ಲಾ ಆಯಿತು.

ನಿಮ್ಮ ಮನಸ್ಸಿನಲ್ಲಿಯೂ ಅವಳೆ, ಕನಸಿನಲ್ಲಿಯೂ ಅವಳೇ. ನಾವು 'ಮನಸ್ಸನ್ನು ಸಡಿಲ ಬಿಡಬೇಡಿ' ಎಂದು ಹೇಳುತ್ತಿದ್ದರೂ, ನಮ್ಮ ಮಾತನ್ನು ಕೇಳದೆ ನೋಡಿ........ನೀವು ಯಾವ ಸ್ಥಿತಿಗೆ ಇಳಿದುಬಿಟ್ಟಿದ್ದೀರಿ!" ಮುಂದೆ ಮಾತು ಹೊರಡಲಿಲ್ಲ. ಅವರ ಕಣ್ಣು ತೇವವಾಯಿತು. ಧ್ವನಿ ಗದ್ಗದಿಸಿತು.

ನನ್ನ ಕನಸಿನ ಬಗ್ಗೆ ನನಗೇ ಅಚ್ಚರಿಯನ್ನುಂಟುಮಾಡಿದ ಸಂಗತಿ ಎಂದರೆ, ನನ್ನನ್ನು ಹೆತ್ತು ಹೊತ್ತು, ಸಾಕಿಸಲಹಿದ, ತಂದೆ ತಾಯಿಯರ ನ್ನಾಗಲೀ, ಗೆಳೆಯರನ್ನಾಗಲೀ – ಕನಸಿನಲ್ಲಿ ಕಾಣದೆ, ಕೇವಲ ಅಪ್ರೊಡೈಟ ಯನ್ನು ಮಾತ್ರ ಕಂಡುದುದು. ಆಗಿನ ದಿನಗಳಲ್ಲಿ ಆಕೆ, ಎಲ್ಲರಿಗಿಂತಲೂ ಹೆಚ್ಚಿನ ಒಂದು ಶಕ್ತಿ, ಪ್ರಭಾವವನ್ನು ಬೀರಿದ್ದಳು. ಗೆಳೆಯ ಶ್ರೀಧರ್‌ರ ಮಾತುಗಳು ಒಂದು ರೀತಿಯಲ್ಲಿ ವಾಸ್ತವವೇ ಆಗಿತ್ತು.

ಒಂದು ದಿನ ಕಳೆಯಿತು, ಎರಡು ದಿನ ಕಳೆಯಿತು. ದಿನದಿನಕ್ಕೆ ಕಾಲಿನ ಊತ, ನೋವು ಹೆಚ್ಚಾದಂತೆ ತೋರಿತೇ ಹೊರತು ಕಡಿಮೆಯಾಗುವ ಸೂಚನೆಯೇ ಇಲ್ಲ. ಹಾಸ್ಟಲ್ ದಿನಾಚರಣೆಯ ದಿನ ಕಾಲಿಗೆ ನಾನು ಹೆಚ್ಚಿಗೆ ಶ್ರಮ ಕೊಟ್ಟುಬಿಟ್ಟೆ. ಗೆಳೆಯರ ಸಂತೋಷದಲ್ಲಿ ಹುಳಿ ಹಿಂಡಬಾರದೆಂದು ನನ್ನ ಕಾಲಿನ ನೋವನ್ನು ಮರೆತು ಅವರೊಂದಿಗೆ ಕುಂಟಿಕೊಂಡೇ ಹತ್ತೆಂಟು ಹೆಜ್ಜೆ ನಡೆದು, ಫೋಟೋ, ನಾಟಕ, ಭೋಜನಗಳಿಗೆಲ್ಲಾ ಎಲ್ಲರೊಂದಿಗೆ ಬೆರೆತು, ಅವರ ಆನಂದದಲ್ಲಿ ಪಾಲುಗೊಂಡೆ. ಇವುಗಳೆಲ್ಲದರ ಪರಿಣಾಮ — ಮಾರನೆಯ ದಿನ ಕಾಲನ್ನು ಮಂಚದಿಂದ ಕೆಳಗಿಳಿಸುವುದೇ ದುಸ್ಸಾಧ್ಯ ವಾಯಿತು. ಊತ, ನೋವು ಇಮ್ಮಡಿಸಿತ್ತು. 'ಕಾಲನ್ನು ಹೀಗೆಯೇ ಬಿಟ್ಟರೆ ಮುಂದೆ ಇದು ವಾಸಿಯಾಗದ ಗಾಯವಾಗಿ ಉಳಿಯುಬಹುದು. ಮೊದಲು ಆಸ್ಪತ್ರೆಗೆ ಹೋಗಿ ತೋರಿಸಿ ಬನ್ನಿ' ಎಂದು ಹಿರಿಯ ಗೆಳೆಯರು ಸೂಚಿಸಿದರು. ಈಗ ನನಗೆ ವಿಚಿತ್ರಭಯ ಕಾಣಿಸಿಕೊಂಡಿತು. ಪರೀಕ್ಷೆಯ ಹೊತ್ತಿನಲ್ಲಿ ಕಾಲೇಜಿನ ತನಕ ನಡೆಯಲು ಆಗದೆ ಹೋದರೆ! — ಎಂದೆಂದಿಗೂ ಕುಂಟ ನಾಗಿಬಿಟ್ಟರೆ!

ಗೆಳೆಯ ಬಾನಾಡಿಯನ್ನು ಹಿಂದಿಟ್ಟುಕೊಂಡು ಆಸ್ಪತ್ರೆಗೆ ಹೋದೆ. ಅಲ್ಲಿ ಎಕ್ಸ್‌ರೇ ಫೋಟೋ ತೆಗೆಸಿನೋಡಿದೆ. ಕಾಲಿನ ಮೂಳೆಗಳು ಮುರಿದಿರಲಿಲ್ಲ.

ಡಾಕ್ಟರು ಕಾಲಿಗೆ ಒಂದು ಮಣ ತೂಕದ ' ಪ್ಲಾಸ್ಟರ್ ' ಮಾಡಿಬಿಟ್ಟು 'ಇನ್ನು ಆರು ವಾರ ಬಿಚ್ಚಬಾರದು ' ಎಂದು ಸುಗ್ರೀವಾಜ್ಞೆ ವಿಧಿಸಿದರು.

ಆಸ್ಪತ್ರೆಯಿಂದ ಬಂದಮೇಲೆ ಕಾಲು ವಾಸಿಯಾದೀತೆನ್ನುವ ಭರವಸೆ ಬಂತು. ಆದರೆ ಆರು ವಾರಗಳು ಇದನ್ನು ಬಿಚ್ಚದೆ ಇಟ್ಟುಕೊಂಡಿರಬೇಕು. ಈ ಶನಿಯನ್ನು ಊರಿಗೆ ಹೊತ್ತು ತರಬೇಕು !

ನನ್ನ ಕಾಲನ್ನು ' ಪ್ಲಾಸ್ಟರ್ ' ಮಾಡಿದುದರಿಂದ ನನಗೆ ಈಗ ಪೂರ್ಣ ವಿರಾಮ. ಮಲಗುವುದು, ಬೇಸರವಾದಾಗ ಏನನ್ನಾದರೂ ಓದುವುದು – ಇವೇ ಈಗ ಕೆಲಸಗಳು. ನನ್ನ ಊಟತಿಂಡಿಗಳೆಲ್ಲಾ ನಾನಿದ್ದಲ್ಲಿಯೇ ನಡೆಯುತ್ತಿತ್ತು. ಕಾಲೂರಿಕೊಂಡು ಸ್ನಾನ, ನಿಸರ್ಗದ ಕರೆ – ಇವುಗಳಿಗೆ ಹೋಗಿಬರುತ್ತಿದ್ದೆ. ಈಗಲೀಗ ನನಗೆ ಇರುವ ವಿರಾಮವನ್ನು ಕಳೆಯುವ ದಾರಿ ಕಾಣದೆ ತುಂಬಾ ಬೇಸರ. ಗೆಳೆಯರೆಲ್ಲರೂ ಕಾಲೇಜಿಗೆ ಹೋದರೆ, ನಾನು ಹಾಸಿಗೆಯ ಮೇಲೆ ಬಿದ್ದಿರಬೇಕು. ಸಂಜೆ ಅವರೊಂದಿಗೆ ತಿರುಗಾಡಲು ಹೋಗುವಂತಿಲ್ಲ. ಅಪ್ರೊಡೈಟೆಯನ್ನು ಕಾಣುವಂತಿಲ್ಲ. ಜನರಲ್ ಲೆಕ್ಚರ್ಸ್‌ಗಳಿಗೆ ಹೋಗುವಂತಿಲ್ಲ. ಈ ಮಧ್ಯೆ ಕಾಲು ವಾಸಿಯಾಗುವುದೋ ಇಲ್ಲವೋ ಎನ್ನುವ ವಿಷಯ ತಲೆ ಹೊಕ್ಕರೆ ತೀರಿತು – ನನ್ನ ಬೇಸರ ದ್ವಿಗುಣಿಸುವುದು. ಕಾಲಿನ ಗಾಯ ವಾಸಿಯಾಗದೆ ಹೀಗೆಯೇ ಊರಿಗೆ ಹೋಗಬೇಕಾದರೆ ? ಈ ರಜದಲ್ಲಿ ನನ್ನ ಕಾಲನ್ನು ನೋಡದೆ ಮದುವೆಯನ್ನು ಮಾಡಿಯೇ ತೀರುತ್ತಾರೆ. ಆ ಸಮಯದಲ್ಲಿ ನಾನು ಊರು ಬಿಟ್ಟು ' ದೇಶಾಂತರ ' ಹೋಗಲು ಸಾಧ್ಯವಾಗುವುದಿಲ್ಲ. ನಿರ್ವಾಹವಿಲ್ಲದೆ ಅಕ್ಕನ ಮಗಳಿಗೆ ತಾಳಿಯನ್ನು ಬಿಗಿಯಬೇಕಾಗುತ್ತದೆ....ಯಾವ ದುರಂತ ನಡೆಯಬಾರದೆಂದು ಆಶಿಸುತ್ತೇನೋ ಅದು ನಡೆದುಹೋಗುತ್ತದೆ ...ಕಾಲು ಊನವಾಗಿ ಬಿಡುವುದರಿಂದ ಎಲ್ಲ ಅನಾಹುತ ನಡೆದುಹೋಗುತ್ತದೆ ! – ಎನ್ನುವ ಹೆದರಿಕೆ. ಕಾಲು ವಾಸಿಯಾಗಿ ಎತ್ತಬೇಕಾದರತ್ತ ನಾನು ಹಾರಬಲ್ಲವನಾದರೆ ಅದಕ್ಕೂ ಹೆಚ್ಚಿನ ವರ ನನಗೆ ಬೇಡ – ಈಗ ನನಗೆ ಎಲ್ಲರ ಕಾಲಿನ ಕಡೆಯೇ ಕಣ್ಣಿನ ದೃಷ್ಟಿ....ಅವರಂತೆ ನಾನೂ ನಡೆಯಬಲ್ಲವನಾದರೆ !

ಈಗ ಅಪ್ರೊಡೈಟೆ ನನಗೆ ಕೇವಲ ಸ್ವಪ್ನಪ್ರಾಯ. ಅಷ್ಟೇ ದುರ್ಲಭಳು. ನಾನಿರುವ ಸ್ಥಿತಿಯಲ್ಲಿ ಆಕೆಯನ್ನು ಕಾಣುವಂತಿಲ್ಲ. ಪುಸ್ತಕವನ್ನು ಹಿಂತಿರುಗಿ

ಪಡೆಯುವಂತಿಲ್ಲ....ನನ್ನ ಪುಸ್ತಕ ಓದಿ ನನ್ನ ಬಗ್ಗೆ ಆಕೆಯ ಅಭಿಪ್ರಾಯ ಬದಲಾಗಿರಬೇಕು. ಆದರೆ ಅದನ್ನು ತಿಳಿಯುವ ಬಗೆ ಎಂತು?

ಗೆಳೆಯರೊಂದಿಗೆ ಅಪ್ರೊಡೈಟಿಯ ವಿಷಯ ತೆಗೆಯಲು ನನಗೆ ಹೆದರಿಕೆ. ಒಂದು ದಿನ ಬಾನಾಡಿಯೊಂದಿಗೆ ಬಳಸಿ ಬಳಸಿ ಮಾತು ತೆಗೆದೆ. "ಅಪ್ರೊಡೈಟಿಯ ಬಳಿ ನನ್ನ 'ವಿಜಯ ಯಾತ್ರೆ' ಉಳಿದುಕೊಂಡಿದೆ. ಪಾಪ! ಆಕೆ ನನಗಾಗಿ, ದಿನವೂ ಕಾಲೇಜಿಗೆ ಪುಸ್ತಕ ತಂದು, ತಂದು ಹಿಂದಕ್ಕೆ ತೆಗೆದುಕೊಂಡು ಹೋಗುತ್ತಿರಬೇಕು. ನಾನು ಹೀಗೆ ಒಂದೇ ಸಮನೆ ಗೈರುಹಾಜರಾಗಿರುವುದನ್ನು ನೋಡಿ ಏನೆಂದುಕೊಂಡಿದ್ದಾಳೊ ಏನೋ, ಪುಸ್ತಕವನ್ನು ಮತ್ತೆ ವಾಪಸ್ಸು ಪಡೆಯದೆ ಆಕೆಯನ್ನು ಸುಮ್ಮನೆ ಸತಾಯಿಸುವುದು ಚೆನ್ನಾಗಿಲ್ಲ...." ಎಂದೆ.

"ನಾವು ಆಕೆಯಿಂದ ಇಸಿಕೊಂಡು ಬರೋಣವೇ?" ಎಂದರು ಬಾನಾಡಿ ನನ್ನ ಮಾತಿನ ಅರ್ಥವನ್ನು ಗ್ರಹಿಸಿ.

"ಆಗಬಹುದು. ಆದರೆ ಆಕೆಗೆ ನಿಮ್ಮ ಪರಿಚಯವಿಲ್ಲ. ಪುಸ್ತಕದ ಬಗ್ಗೆ ತನ್ನ ಅಭಿಪ್ರಾಯ ತಿಳಿಸುವ ಆಸೆ ಜೀರೆಯಿರಬೇಕು. ಹೀಗಿರುವಲ್ಲಿ 'ಆಕೆ' ನಿಮಗೆ ಪುಸ್ತಕ ಕೊಡಲು ಹಿಂಜರಿಯಬಹುದು. ಆದರೂ ಚಿಂತೆಯಿಲ್ಲ. ನಾನೊಂದು ಪತ್ರ ಬರೆದುಕೊಡುತ್ತೇನೆ. ಅದನ್ನು ಆಕೆಗೆ ಮುಟ್ಟಿಸಿ. ಆಕೆ ತಾನಾಗಿ ಪುಸ್ತಕ ಕೊಟ್ಟರೆ ತೆಗೆದುಕೊಂಡು ಬನ್ನಿ."

ಬಾನಾಡಿ ಹಾಗೆಯೇ ಆಗಲೆಂದು ತಲೆಯಲ್ಲಾಡಿಸಿದರು. ನಾನು ಪತ್ರ ಒಂದನ್ನು ಬರೆದು ಸಿದ್ಧಗೊಳಿಸಿದೆ:

ಶ್ರೀಮತಿ,

ನಾನು ಹೀಗೆ ಪತ್ರಬರೆಯುವುದನ್ನು ಅನ್ಯಥಾ ಭಾವಿಸಬೇಡಿ. ಪತ್ರ ಬರೆಯುವ ಭಾವವನ್ನು ನಾನೆಷ್ಟು ಅದುಮಿ ಹಿಡಿದರೂ, ಯಾವುದೋ ಒಂದು ಶಕ್ತಿ ನನ್ನನ್ನು ಈ ಕೆಲಸಕ್ಕೆ ಹಚ್ಚಿದೆ.

ನೀವು ನನ್ನ ಪುಸ್ತಕವನ್ನು ಹಿಂತಿರುಗಿಸಲು ಕಾಲೇಜಿನಲ್ಲಿ ನನಗಾಗಿ ಕಾದುಕಾದು ಬೇಸತ್ತಿರಬಹುದು. ನನ್ನ ಪುಸ್ತಕದ ಬಗ್ಗೆ, ಅದರಲ್ಲಿಯೂ ತಾರಿಣಿಯ ಚಿತ್ರಣದ ಬಗ್ಗೆ ನಿಮ್ಮ ಅಭಿಪ್ರಾಯ ತಿಳಿಯುವ ಕುತೂಹಲ

ಬಿಟ್ಟದಕ್ಕಿದೆ. ಎಂದಿಗೆ ನಿಮ್ಮನ್ನು ಕಾಣುವೆನೆನ್ನುವ ಹಂಬಲ ಕಾಡುತ್ತಿದೆ. ಆದರೆ ಕಾಲೇಜಿನಲ್ಲೇ ಆಗಲಿ, ಮತ್ತೆಲ್ಲೇ ಆಗಲಿ ನಿಮ್ಮನ್ನು ಕಾಣಲಾಗದ ಸ್ಥಿತಿಯಲ್ಲಿ ನಾನಿದ್ದೇನೆ. ಎಲ್ಲಾ ವಿಧಿಯಾಟ !

(ಮುಂದೆ ಆ ದುರ್ದಿನದ ಘಟನೆಯನ್ನು ಬರೆದಿದ್ದೆ).

ಈಗ ನನ್ನ ತಲೆಯಲ್ಲಿ ನೂರೆಂಟು ವಿಷಯಗಳು ಸುಂಟರಗಾಳಿಯನ್ನು ಎಬ್ಬಿಸಿವೆ. ಇಂತಹದರಲ್ಲಿ ಓದು ಹೇಗೆ ತಾನೆ ಸಾಗೀತು ?

ಈ ಮಧ್ಯೆ ನಿಮ್ಮ ವಿಷಯವಾದ ಆಲೋಚನೆಗಳು ಬಂದರಂತೂ ನಾನು ಪಡುವ ವೇದನೆ ಮಾತಿಗೆ ನಿಲುಕದು. ನನ್ನ ಗೆಳೆಯರು ಸಮಾಧಾನ ಹೇಳುವರು. ದುಃಖದಲ್ಲಿ ಸಹಾನುಭೂತಿ ತೋರಿಸುವರು. ಅವರೆಲ್ಲರ ಸಹಾನುಭೂತಿಯೊಂದಿಗೆ ನಿಮ್ಮ ಸಹಾನುಭೂತಿಯೂ ಸೇರಿದ್ದರೆ ಬಹುಶಃ ನನ್ನ ಮನದ ಕೊರಗು ಕೆಲವಂಶವಾದರೂ ನೀಗುತ್ತಿತ್ತೋ ಏನೊ? ಅದು ನನ್ನ ಹಣೆಯಲ್ಲಿ ಬರೆಯಲಿಲ್ಲ !

ಹೀಗಾಗಿ ಸೋಮವಾರದಿಂದ ಕಾಲೇಜಿಗೆ ಬರಲಿಲ್ಲ. ಕಾಲೇಜಿನಿಂದ ಕೇವಲ ಎರಡೇ ಫರ್ಲಾಂಗ್ ದೂರದಲ್ಲಿ ಕುಳಿತು, ಕಾಲೇಜಿಗೆ ಬರಲಾಗದು ದಕ್ಕಾಗಿ ಪರಿತಪಿಸುತ್ತಿದ್ದೇನೆ. ನನ್ನ ಕಾಲಿನ ಊತ ಕೊಂಚ ವಾಸಿಯಾಗಿ ದ್ದರೂ, ನೋವು ಕಡಿಮೆಯಾಗಿಲ್ಲ. ಮೊದಲಿನಂತೆ ನಡೆಯಲು ಇನ್ನೂ ಒಂದು ವಾರ ಬೇಕಾಗಬಹುದು. ನಿಮ್ಮನ್ನು ಕಾಣದೆ ತುಂಬಾ ಬೇಜಾರಾಗಿದೆ. ಆದರೆ ಕಾಣುವ ಬಗೆ ?

ನಿಮಗೆ ನನ್ನ ಭಾವನೆಗಳು ಹುಚ್ಚನ ಭಾವನೆಗಳಾಗಿ ತೋರಬಹುದು. ಹೂಂ, ಹೌದು. ಇವೆಲ್ಲವೂ ಹುಚ್ಚನ ಭಾವನೆಗಳೇ – ಒಂದು ರೀತಿಯಾಗಿ ನೋಡಿದರೆ ಪ್ರೇಮಿ, ಕವಿ ಮತ್ತು ಹುಚ್ಚರು – ಈ ಮೂವರೂ ಒಂದೇ ಗುಂಪಿನವರಂತೆ !

ನನ್ನ ಬಗ್ಗೆ ನಿಮ್ಮ ಭಾವನೆ ಏನೇ ಇರಲಿ, ನನಗೆ ಒಂದು ಮಾತನ್ನು ಬರೆಯಲಾರಿರಾ ? ಆ ನಿಮ್ಮ ಮಾತು ನನಗೆ ಸಂಜೀವಿನಿಯಾದೀತು ! ನನ್ನನ್ನು ಕಾರ್ಯೋನ್ಮುಖನನ್ನಾಗಿ ಮಾಡೀತು ! ಕಾಲೇಜು ಹಾಸ್ಟಲಿನ ವಿಳಾಸಕ್ಕೆ ಪತ್ರ ಬರೆಯಲು ಸಂಕೋಚಪಟ್ಟುಕೊಳ್ಳಬೇಡಿ.

ಇತಿ ನಿಮ್ಮವ,
ಮೂರ್ತಿ.

ಪತ್ರ ಮುಗಿಸಿ ಬಾನಾಡಿಯ ಕೈಗೆ ಕೊಟ್ಟೆ. ಬಾನಾಡಿ ಮೊದ ಪತ್ರವನ್ನು ಕೊಡುವುದು ಬೇಡವೆಂದರು. ನಾನು ಕೇಳಲಿಲ್ಲ. 'ನೀ ಪುಸ್ತಕ ತರುವುದಿದ್ದರೆ ಈ ಪತ್ರ ಒಯ್ಯಲೇ ಬೇಕು' ಎಂದು ಆಗ್ರಹಪಡಿಸಿ ಕಡೆಗೆ ಗತ್ಯಂತರವಿಲ್ಲದೆ ಪತ್ರವನ್ನು ಕಿಸೆಯಲ್ಲಿರಿಸಿ, ಆಕೆಗಾಗಿ ಕಾಲೇ ನಲ್ಲೆಲ್ಲಾ ಸುತ್ತಾಡಿದರು. ಕಡೆಗೆ ಪತ್ರವನ್ನು ಹಿಂತಿರುಗಿ ಕೊಡುತ "ಈ ಕೆಲಸಕ್ಕೆ ನಾನು ನಾಲಾಯಖ್ಖು" ಎಂದು ನಗುತ್ತಾ ಹೇಳಿದರ ಕಾಗದವನ್ನು ಕೊಡಲು ಶ್ರೀಧರ್ ಸರಿಯಾದ ವ್ಯಕ್ತಿಯೆಂದು ನನಗನಿಸಿತು.

ಮಾರನೆಯ ದಿನ ಶ್ರೀಧರ್‌ಗೆ ಕಾಗದಕೊಟ್ಟು ವಿಷಯ ಹೇಳಿದಾ ಅವರು ಹೀಗೆ ನುಡಿದರು "ಈ ಕಾಗದ ಕೊಡುವುದು ಬೇಡಿ. ಈ ಕಾಗದದಿಂ ನಿಮ್ಮ ವಿಷಯದಲ್ಲಿ ಆಕೆಗೆ ತಪ್ಪು ಅಭಿಪ್ರಾಯ ಬರುತ್ತದೆ. ನಿಮ್ಮ ಬಗ ಇರುವ ಗೌರವ ಇದರಿಂದ ಹೆಚ್ಚುವ ಬದಲು ತಗ್ಗುತ್ತದೆ. ಇಂತಹ ಪತ್ರದಿಂ ನಮಗೇ – ಗೆಳೆಯರಿಗೇ ಅವಮಾನ. ನಾನು ಈ ಕೆಲಸ ಮಾಡಲಾರೆ."

ನಾನು ಸಿಟ್ಟುಮಾಡಿದೆ. "ನೀವು ಈ ಪತ್ರವನ್ನು ಒಯ್ಯಲೇಬೇಕು

"ನಿಮ್ಮ ಒಳ್ಳೆಯದಕ್ಕಾಗಿ ನಾನು ಈ ಕೆಲಸ ಮಾಡಲಾರೆ ಎಂದರು ಶ್ರೀಧರ್.

"ನೀವು ಈ ಕೆಲಸವನ್ನು ಮಾಡಲೇಬೇಕು. ನೀವು ನನ್ನ ಪ್ರಾ ಸ್ನೇಹಿತರಾಗಿದ್ದರೆ, ಖಂಡಿತವಾಗಿಯೂ ನೀವು ಈ ಕೆಲಸ ಮಾಡಲೇಬೇಕು ಎಂದು ಮುಖವನ್ನು ಒಂದು ಬಗೆ ಮಾಡಿಕೊಂಡು ಹೇಳಿದೆ.

ಗೆಳೆಯ ಮನಸ್ಸಿಲ್ಲದ ಮನಸ್ಸಿಂದ ಈ ಕೆಲಸಕ್ಕೆ ಒಪ್ಪಿಕೊಂಡರು.

ಆತ ಈಗ ಧರ್ಮಸಂಕಟಕ್ಕೆ ಸಿಕ್ಕಿಕೊಂಡಿದ್ದರು. ಕೆಲಸಮಾಡಿದರೆ – ಕಾಗದ ಒಯ್ದು ಮುಟ್ಟಿಸಿದರೆ, ತಮ್ಮ ನೆಚ್ಚಿನ ಗೆಳೆಯನ ಬೆಲೆಯನ್ನು ಯಾವಳೋ ಅಪರಿಚಿತ ಹುಡುಗಿಯ ಕಣ್ಣಿನಲ್ಲಿ ಕಡಿಮೆ ಮಾಡಿದಂತೆ ಆಗುತ್ತದೆ. ಈ ಕೆಲಸ ಮಾಡದೆ ಹೋದರೆ ಗೆಳೆಯ ತನ್ನ ಗೆಳೆತನದ ಋಜುತ್ವದ ಬಗ್ಗೆ ತಪ್ಪು ತಿಳಿಯುತ್ತಾರೆ!

ದೇವರ ಮೇಲೆ ಭಾರಹಾಕಿ ಈ ಕೆಲಸಕ್ಕೆ ಹೆಗಲು ಕೊಟ್ಟರು ಶ್ರೀಧರ್.

ಅಂದು ಕಾಲೇಜಿಗೆ ಮಧ್ಯಾಹ್ನ ರಜಾ. ಅಫ್ರೋಡೈಟ ಶ್ರೀಧರ್‌ಗೆ ಸಿಕ್ಕಲಿಲ್ಲ.

ಮಾರನೆಯ ದಿನ 'ಆಕೆ' ಎಲ್ಲಿದ್ದರೂ ಹುಡುಕಿ ಪತ್ರ ಕೊಡುವುದಾಗಿ ಭರವಸೆಕೊಟ್ಟರು.

ಆದರೆ ನನ್ನ ಪತ್ರ ಗೆಳೆಯ ಅನಂತ್ ಅವರ ಕೈಗೆ ಸಿಕ್ಕಿಬಿದ್ದು ಅವರು ಅದನ್ನು ಓದಿನೋಡಿ ಮುಖವನ್ನು ಗಂಟಿಕ್ಕಿಕೊಂಡು ಶ್ರೀಧರ್‌ಗೆ ನುಡಿದರು "ಖಂಡಿತ ಈ ಕಾಗದ ಕೊಡುವುದು ಬೇಡ" ನನ್ನ ಕಡೆಗೆ ತಿರುಗಿ "ಅವರೇನು ಹೇಳಿದರೂ ಅವರ ಮಾತನ್ನು ಕೇಳಬೇಡಿ – ನೀವಂತು ಈ ಕಾಗದವನ್ನು ಆಕೆಗೆ ಕೊಟ್ಟರೆ, ಖಂಡಿತ ನನ್ನಾಣೆ"

ನನಗೆ ಈಗ ಸಖೇದಾಶ್ಚರ್ಯ.

ಇಷ್ಟೊಂದು ಜನ ಗೆಳೆಯರು ಬೇಡವೆಂದು ಹೇಳುತ್ತಿರುವಾಗ ಈ ಕಾಗದದಲ್ಲಿ ನನ್ನ ಕಣ್ಣಿಗೆ ಬೀಳದಿರುವ ಏನೋ ಒಂದು ತಪ್ಪು ಉಳಿದು ಕೊಂಡಿದೆ. ಗೆಳೆಯರ ಮಾತೇ ಗೆಲ್ಲಲಿ. ಪುಸ್ತಕ ಹೇಗಾದರೂ ನನಗೆ ತಲಪುತ್ತದೆ. ನಾನು ಆಕೆಯನ್ನು ಕಾಣದೆ ಹೋದರೂ 'ಅಂಚೆಯ' ಮೂಲಕವಾದರೂ 'ಆಕೆ' ನನಗೆ ರವಾನಿಸಿಕೊಡುತ್ತಾಳೆ. ಹೇಗೂ ಆಕೆಗೆ ವಿಳಾಸ ಗೊತ್ತಿದೆ – ಎಂದುಕೊಂಡು ಸುಮ್ಮನಾದೆ.

ಕಾಲೇಜು ಕೆಲಸ ಮಾಡಲು ಇನ್ನು ಒಂದೆರಡು ದಿನ ಮಾತ್ರವೇ ಇದೆ ಅವಧಿ. ಅನಂತರ ಪರೀಕ್ಷಾ ಸಿದ್ಧತೆಗಾಗಿ ಎರಡು ವಾರ ರಜ. ಈ ವೇಳೆಗೆ ನಾನು ಕುಂಟಿಕೊಂಡು ಹಾಸ್ಟಲಿನಲ್ಲಿ ಓಡಾಡುತ್ತಿದ್ದೆ. ಊಟ ತಿಂಡಿಗಳಿಗೆ ಭೋಜನಶಾಲೆಗೇ ಹೋಗಿಬರುತ್ತಿದ್ದೆ. ಆಕೆಯನ್ನು ಕಾಣದೆ ಹತ್ತಾರು ದಿನಗಳು ಆಗಿತ್ತು. ಆಕೆಯನ್ನು ಒಮ್ಮೆಯಾದರೂ ಕಂಡು ಬರುವ ಮನಸ್ಸಿತ್ತು. ಮಧ್ಯಾಹ್ನ ಚರಿತ್ರೆಯ ತರಗತಿಗೆ 'ಆಕೆ' ಬರುತ್ತಿದ್ದುದರಿಂದ ಆಗ ಆಕೆಯನ್ನು ಕಂಡುಬರಲು ನಿಶ್ಚಯಿಸಿ ಗೆಳೆಯರ ಮಾತನ್ನು ಲೆಕ್ಕಿಸದೆ, ಕಾಲೇಜಿಗೆ ಹೋದೆ. ಎರಡು ಫರ್ಲಾಂಗ್ ಹಾದಿಯನ್ನು ಕಳೆಯಲು ಇಪ್ಪತ್ತು ನಿಮಿಷಗಳು ಹಿಡಿದುವು. ಕಾಲೇಜಿಗೆ ಬಂದು ಬೀಳುವ ಹೊತ್ತಿಗೆ ನನಗೆ ಸಾಕುಸಾಕಾಯಿತು. ತುಂಬಾ ಸುಸ್ತು. ಕಾಲೇಜಿನಲ್ಲಿ ಎಲ್ಲರೂ ಕಾಲು

ಏನಾಗಿದೆಯೆಂದು ವಿಚಾರಿಸುವವರೇ ಆದರು. ಅವರಿಗೆಲ್ಲರಿಗೂ ಮುಹಡಿ ಮೆಟ್ಟಿಲ ದಂತಕಥೆ ಹೇಳುತ್ತಾ ಮುನ್ನಡದೆ.

ಅದು ಕಡೇ ದಿನದ ಚರಿತ್ರೆಯ ತರಗತಿ. ಅದು ಕಾಲೇಜಿನ ಮೂಲೆ ಕೋಣೆಯಲ್ಲಿ ನಡೆಯುತ್ತಿತ್ತು. 'ಅಪ್ಸ್ರೊಡೈಟ ಇರುತ್ತಾಳೆ. ನಾನು ಬರುವುದನ್ನು ನೋಡಿ ನನ್ನ ಕಾಲಿನ ಗಾಯ ಆಕೆಗೆ ಗೊತ್ತಾಗುತ್ತದೆ. ನೋಡಿ ತುಂಬಾ ಮರುಗುತ್ತಾಳೆ. ತರಗತಿ ಬಿಟ್ಟೊಡನೆ ಮಾತನಾಡಿಸುತ್ತಾಳೆ. ಪುಸ್ತಕ ಹಿಂತಿರುಗಿಸುತ್ತಾಳೆ' ಎಂದೆಲ್ಲಾ ಕನಸುಕಾಣುತ್ತಾ, ಏದುತ್ತಾ, ಬೀಳುತ್ತಾ, ನಿಧಾನವಾಗಿ ಹೆಜ್ಜೆಹಾಕುತ್ತಾ ತರಗತಿಗೆ ಬಂದೆ. ನನ್ನ ದೃಷ್ಟಿ ಮೊದಲು ಹೆಂಗಸರು ಕುಳಿತುಕೊಳ್ಳುತ್ತಿದ್ದ ಜಾಗಕ್ಕೆ ಹರಿಯಿತು. ತರಗತಿಗೆ ಹೆಂಗಸರೆಲ್ಲರೂ ಬಂದಿದ್ದರು. ಆದರೆ 'ಆಕೆ' ಮಾತ್ರ ಗೈರು ಹಾಜರು! ಅಲ್ಲಿಯವರೆಗೆ ಇದ್ದ ನನ್ನ ಉತ್ಸಾಹ ಕರಗಿಹೋಯಿತು. ನಿಟ್ಟುಸಿರು ನನಗೆ ಗೊತ್ತಿಲ್ಲದಂತೆ ಹೊರಬಿತ್ತು. ಉಪಾಧ್ಯಾಯರು — "ಭೊಂಭೊ" — ಅದು ನಾವು ಇಟ್ಟ ಹೆಸರು - ತಮ್ಮ ಪಾಡಿಗೆ ತಾವು ಶಂಖ ಊದುತ್ತಿದ್ದರು!



# ಓ ರೋಲಂಬ !

ಹತ್ತಿಪ್ಪತ್ತು ದಿನಗಳಿಂದ ನಾನು ಅಫ್ರೊಡೈಟಿಯನ್ನು ಕಂಡಿಲ್ಲ. ಕಾಣುವ ಇಚ್ಛೆ ಬಲವಾಗುತ್ತಿದೆ. ಈಗ ಕಾಲೇಜಿಗೂ ರಜ ಬಂದುಬಿಟ್ಟದೆ. ಆಕೆಯನ್ನು ತರಗತಿಯಲ್ಲಿ ಕಾಣುವಂತಿಲ್ಲ. ಬೇರೆ ಎಲ್ಲಾದರೂ ನೋಡಲು ಸಿಗಬೇಕು ಅಷ್ಟೆ. ನಿನ್ನೆ ಅಶ್ವಿನಿ ಕುಮಾರಿಯರು ಜನರಲ್ ಲೆಕ್ಚರ್ಸ್‌ಗೆ ತಪ್ಪಿಸಿಕೊಳ್ಳದೆ ಬರುತ್ತಿರುವರೆಂಬ ಸುದ್ದಿಕೊಟ್ಟರು – ಬಾನಾಡಿ. ಒಮ್ಮೆಯಾದರೂ ಅಲ್ಲಿಗೆ ಹೋಗಿಬಂದರೆ, ಪರೀಕ್ಷೆಗೂ ಉಪಯೋಗವಾಗುತ್ತದೆ. ಅಲ್ಲದೆ ನನ್ನ ಉದ್ದಿಶ್ಯವೂ ಕೈಗೂಡುತ್ತದೆ. ಆದರೆ ಅಲ್ಲಿಯವರೆಗೆ ನಡೆದುಹೋಗುವ ಬಗೆ? ನಿನ್ನೆ ಏದುತ್ತ ಹೋಗಿ ಕಾಲೇಜಿಗೆ ಬಿದ್ದವನು ಮತ್ತೆ ಹಿಂತಿರುಗಿ ಬರುವುದು ಪ್ರಯಾಸಕ್ಕೆ ಇಟ್ಟುಕೊಂಡಿತ್ತು. ಇಂದು ವೃಥಾ ಶ್ರಮಕೊಟ್ಟರೆ ಕಾಲಿಗೆ ಅಪಾಯ ತಟ್ಟಬಹುದು ಎಂಬ ಹೆದರಿಕೆ ಬೇರೆ. ಆದರೂ ಆಕೆಯನ್ನು ಕಾಣುವ ಆಸೆ! ಭಾಷಣಮಾಲೆಯಲ್ಲಿ ಇಂದು ಅನಂತ್ ಅವರು 'ಎಲಿಜಿ' (ಶೋಕಗೀತೆ) ಮೇಲೆ ಭಾಷಣ ಮಾಡುವವರಿದ್ದರು. ಈ ಸುದ್ದಿಯನ್ನು ಅವರೇ ಕೊಠಡಿಗೆ ಬಂದು ಕೊಟ್ಟಿದ್ದರು.

ಭಾಷಣಕ್ಕೆ ಹೋಗಿಯೇ ತೀರಬೇಕೆಂದು ಮನಸ್ಸಾಯಿತು. ಗೆಳೆಯರು ನನ್ನ ನಿರ್ಧಾರವನ್ನು ಕೇಳಿ 'ಲೆಕ್ಚರೂ ಬೇಡ, ಮಣ್ಣೂ ಬೇಡ. ನಿಮ್ಮ ಪಾಡಿಗೆ ನೀವು ತೆಪ್ಪಗಿರಿ' ಎಂದರು. ಆದರೆ ಅವರ ಮಾತನ್ನು ನಾನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. 'ನಾನು ಹೋಗುವುದೇ ಸರಿ' ಎಂದೆ. ನನ್ನನ್ನು ಸೈಕಲ್ ಮೇಲೆ ಕೂರಿಸಿಕೊಂಡು ಕಾಲೇಜು ಭವನದ ತನಕ ತಂದು ಬಿಡಲು ಬಾನಾಡಿಯನ್ನು ಗೋಳುಹೊಯ್ದುಕೊಂಡೆ. ಆತನಿಗೂ ಅದೇ ಹೊತ್ತಿನಲ್ಲಿ ಬೇರೊಂದು ಕೆಲಸವಿತ್ತು. ಬಾನಾಡಿ ಮನಸ್ಸಿಲ್ಲದ ಮನಸ್ಸಿಂದ, ಸೈಕಲ್ ಮೇಲೆ ಕೂರಿಸಿಕೊಂಡು ನನ್ನನ್ನು ಕಾಲೇಜಿಗೆ ಕರೆದುಕೊಂಡು ಬಿಟ್ಟರು. ಮನಸ್ಸಿನಲ್ಲಿಯೇ ನನ್ನ ಮೊಂಡುತನಕ್ಕೆ ಶಪಿಸಿರಬೇಕು!

ಇಂದು ನನ್ನಾಸೆ ನಿರಾಶೆಯಾಗಲಿಲ್ಲ. ಅಫ್ರೊಡೈಟ ತನ್ನ ಗೆಳತಿಯೊಂ

ದಿಗೆ ಮುಂದಿನ ಸಾಲನ್ನು ಅಲಂಕರಿಸಿದ್ದಳು. ಇಂದು ಆಕೆ ಸರ್ವೇ ಸಾಧಾರಣ ಉಡುಪಿನಲ್ಲಿದ್ದಳು. ಅದೇ ಆಕೆಗೆ ಮೋಹಕವಾಗಿ ಒಪ್ಪುತ್ತಿತ್ತು ! ನಾನು ಆಕೆಯನ್ನು ಮನದಣಿಯ ನೋಡಿದೆ. ಒಮ್ಮೆ ಆಕೆಯ ದೃಷ್ಟಿಪಥಕ್ಕೆ ನಾನು ಗೋಚರಿಸಿದೆ. ನಾಲ್ಕು ಕಣ್ಣುಗಳು ಕೂಡಿದುವು. ಮುಖ ಮುಗುಳು ನಗೆಯನ್ನು ಚಲ್ಲಿತು. ಎಲ್ಲಾ ಕ್ಷಣಕಾಲ ! ಆಕೆ ಮತ್ತೆ ಭಾಷಣಕ್ಕೆ ಕಿವಿ ಕೊಟ್ಟಳು. ಈಗ ಆಕೆಯ ಮುಖದಲ್ಲಿ ಹೊಸದೊಂದು ಭಾವವನ್ನು ಕಂಡಿದ್ದೆ. ನನ್ನ ಬಗ್ಗೆ ಒಂದು ಬಗೆಯ ತೃಪ್ತಿಯ ಭಾವ ಅದು. ಇಪ್ಪತ್ತು ದಿನದಿಂದ ಪತ್ತೆಯೇ ಇರದಿದ್ದ ನಾನು ಸದ್ಯ ಮೈಸೂರಿನಲ್ಲಿಯೇ ನೆಮ್ಮದಿಯಾಗಿ ಇರುವೆ ನಲ್ಲಾ ! – ಎಂದಿರಬೇಕು.

ಅನಂತ್ ಅವರ ಭಾಷಣ ಪೂರೈಸಿತು. ಹೆಂಗಸರೆಲ್ಲರೂ – ಸುಮಾರು ನಲವತ್ತು ಮಂದಿ – ತಮ್ಮ ಮನೆಗಳಿಗೆ ತೆರಳಲಾರಂಭಿಸಿದರು. ಆಕೆಯೂ ಹೊರಟಳು. ಹೊರಡುವ ಮುನ್ನ ನನ್ನನ್ನು ಒಂದೆರಡು ನಿಮಿಷ ಮಿಕಮಿಕನೆ ನೋಡುತ್ತಾ ಗೊಂಬೆಯಂತೆ ನಿಂತುಬಿಟ್ಟಳು. ನಾನು ಮೂಲೆಯೊಂದರಲ್ಲಿ ಕುರ್ಚಿಯಮೇಲೆ ಕುಳಿತಿದ್ದೆ. ನನ್ನ ಕಾಲಿನ ಗಾಯದ ಬಟ್ಟೆ ಆಕೆಗೆ ಕಾಣು ತ್ತಿತ್ತು. ಬಹುಶಃ ಆಕೆ ಅದನ್ನು ನೋಡುತ್ತಾ ನಿಂತಿರಬೇಕು. ಆಕೆ – ಮುಖದ ಛಾಯೆಯಿಂದ ಬಹುಶಃ ನನ್ನನ್ನು ಮಾತನಾಡಿಸಲು ಆಸೆಯೇನೋ ಎಂದುಕೊಂಡೆ. ಆದರೆ ಆಕೆ ನನ್ನನ್ನು ಮಾತನಾಡಿಸದೆ ಹೊರಟುಬಿಟ್ಟಳು. ತನ್ನ ಸ್ನೇಹಿತರು ಏನೆಂದುಕೊಳ್ಳುವರೊ ಏನೋ ಎನ್ನುವ ಅಂಜಿಕೆ.

ಆಕೆ ನನ್ನನ್ನು ನುಡಿಸಿದ್ದರೆ ಚನ್ನಾಗಿತ್ತು ಎಂದುಕೊಂಡೆ. ಆದರೆ ನನ್ನ ಮನದ ಆಸೆ ಆಕೆಗೆ ಹೇಗೆ ತಿಳಿಯಬೇಕು ! ಆದರೂ ಒಂದು ಸಮಾಧಾನ – ನನ್ನ ಕಾಲಿನ ಗಾಯವನ್ನು ಆಕೆ ಕಂಡಿದ್ದಾಳೆ. ಈ ಸಂಗತಿ – ನನ್ನಮೇಲೆ ಆಕೆಗೆ ಇರಬಹುದಾಗಿದ್ದ ಎಲ್ಲಾ ಅಸಮಾಧಾನವನ್ನೂ ತೊಡೆದು ಹಾಕಿ ಸಹಾನುಭೂತಿಯನ್ನು ತುಂಬಲು ಸಾಕು !

ಈಗ ಗೆಳೆಯ ಅನಂತ್ ಅವರು ನನ್ನನ್ನು 'ಹಾಸ್ಟಲಿಗೆ' ತಲಪಿಸುವ ಭಾರ ಹೊತ್ತರು. ಮತ್ತೆ ಯಾರದೋ ಸೈಕಲ್ ತರಿಸಿಕೊಂಡು ಹಾಸ್ಟಲನ್ನು ಸೇರಿದೆ.

ಮಿತ್ರಮೇಳದ ವಾರ್ಷಿಕೋತ್ಸವ ಅದ್ದೂರಿಯಿಂದ ನಡೆಯಿತು. ನಾನು

ಕುಂಟುತ್ತಲೇ ಹೋಗಿ ಅತಿಥಿ, ಸದಸ್ಯರೊಂದಿಗೆ ಫೋಟೋ ಹಾಗೂ ಟೀ ಗೂ ಇದ್ದುಬಂದೆ. ಉತ್ಸವಮೂರ್ತಿಯ ಕೆಲಸವನ್ನು ಉಳಿದ ಗೆಳೆಯರು ಸಾಂಗವಾಗಿ ನೆರವೇರಿಸಿದರು. ನಾನು 'ಪೆಂಡಾಲಿ'ನಲ್ಲಿ ಮೂಲವಿಗ್ರಹದಂತೆ ಕುಳಿತಿದ್ದೆ.

ಅಂದಿನ ಸಮಾರಂಭ ಮುಕ್ತಾಯಗೊಂಡಾಗ ಸುಮಾರು ಒಂಭತ್ತೂವರೆ ಗಂಟೆಯಾಗಿತ್ತು. ಸಾಯಂಕಾಲದ ಸುತ್ತಾಟ ಕಾಲಿಗೆ ದಣಿವನ್ನು ಕೊಟ್ಟಿತ್ತು. ಈಗ ಕಾಲಿಗೆ ಬಿಗಿದಿದ್ದ 'ಪ್ಲಾಸ್ಟರ್' ಕಾಲಿನ ಊತ ಕಡಿಮೆಯಾಗಿದ್ದುದರಿಂದ ಸೊಡಲಾಗಿತ್ತು. ಒಳಗಡೆ ಇದ್ದ ಟೊಳ್ಳು ಪ್ರದೇಶದಲ್ಲಿ ನಡೆಯುವಾಗ ಸಣ್ಣ ನರಜುಕಲ್ಲು ಸೇರಿಕೊಂಡು ನಡೆಯಲು ತುಂಬಾ ಅನಾನುಕೂಲ ಉಂಟು ಮಾಡಿತ್ತು. ಸ್ನಾನಮಾಡುವಾಗ ನೀರು ಆದರ ಒಳಗಡೆ ನುಗ್ಗಿ ಒಳಗಿನ ಬಟ್ಟೆಯನ್ನು ಒದ್ದೆಮಾಡಿ ಒಂದು ಬಗೆಯ ದುರ್ನಾತ ಉಂಟುಮಾಡಿತ್ತು. ಕಾಲಿನ ಪಟ್ಟಿಯನ್ನು ಒಂದು ನಿಯತಕೋಣದಲ್ಲಿ ಬಿಗಿದು ಕಟ್ಟಿದ್ದುದರಿಂದ ಪಾದವನ್ನು ಮಡಿಸಲು, ವಾಲಿಸಲು ಆಗುತ್ತಿರಲಿಲ್ಲ. ಒಂದೆರಡು ವಾರಗಳಿಗೇ 'ಪ್ಲಾಸ್ಟರ್' ನನಗೆ ಬೇಸರ ತಂದಿತ್ತು. ಎಂದಿಗೆ ಈ ಹೊರೆಯಿಂದ ಪಾರಾದೇನು ಎಂದೆನಿಸಿಬಿಟ್ಟಿತ್ತು. ಅಂದು ರಾತ್ರಿ ಕೊಠಡಿಗೆ ಬಂದಾಗ ಕಾಲಿನ ನೋವು ನನ್ನ ಸಿಟ್ಟನ್ನು ನೆತ್ತಿಗೇರಿಸಿತು. ಸಿಟ್ಟಿನ ಭರದಲ್ಲಿ ಅದನ್ನು ಪೆದರಪದರವಾಗಿ ಕಿತ್ತುಹಾಕಿಬಿಟ್ಟೆ. ಹೂವಿಗಿಂತಲೂ ಮೃದುವಾಗಿ, ನಯವಾಗಿದ್ದ ಅಂಗಾಲನ್ನು ಕಣ್ಣುತುಂಬಾ ನೋಡಿ ಆನಂದಿಸಿದೆ. ನಡಿಗೆಯನ್ನು ಕಲಿಯುವ ಎಳೆಮಕ್ಕಳಂತೆ ಕೊಠಡಿಯಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ಸುತ್ತಾಡಿದೆ. 'ಹೋ! ನನಗೆ ಕಾಲು ಬಂತು!' ಎಂದು ಸಂತೋಷದಿಂದ ಬಂದು ಹೋಗುವವರಿಗೆಲ್ಲಾ ತೋರಿಸಿದೆ.

ಬಾನಾಡಿ ಬಂದರು, ಸಿಟ್ಟುಮಾಡಿಕೊಂಡೇ ಬಂದರು. ಬಂದವರೇ ನನ್ನ ಕಾಲನ್ನು ನೋಡಿದರು. ಉಗ್ರವಾಗಿದ್ದ ಅವರಮುಖ ಮತ್ತೂ ಉಗ್ರವಾಯಿತು. "ನಮ್ಮ ಶ್ರಮವೆಲ್ಲಾ ಮಣ್ಣಿಗಾಯಿತು! 'ಪ್ಲಾಸ್ಟರ'ನ್ನು ನೀವೇಕೆ ಬಿಚ್ಚಿದಿರಿ? ಯಾರನ್ನು ಕೇಳಿ ಬಿಚ್ಚಿದಿರಿ? ಆರುವಾರ ಕಿತ್ತುಹಾಕಬಾರದೆಂದು ಕಾಲಿನಮೇಲೆ ತಾರೀಖು ಬರೆದಿದ್ದರೂ ನೀವು ಪುಸಕ್ಕನೆ ಕಿತ್ತುಹಾಕಿಬಿಟ್ಟಿದ್ದೀರಿ....ಯಾಕೆ ಈಚೀಚೆಗೆ ತುಂಟಹುಡುಗರಂತೆ, ಮನಸ್ಸಿಗೆ

ಬಂದುದನ್ನು ಹಿಂದು ಮುಂದು ಯೋಚಿಸದೆ ಮಾಡುತ್ತಿದ್ದೀರಿ...." ಎಂದು ಒಂದೇ ಸಮನೆ ನನ್ನನ್ನು ಬೈದುಬಿಟ್ಟರು. ಅವರಿಗೆ ನನ್ನ ಕೆಲಸ ಸ್ವಲ್ಪವೂ ಸರಿಬರಲಿಲ್ಲ.

"ನನಗೆ ಈಗ ಮೊದಲಿಗಿಂತಲೂ ಅನುಕೂಲವಾಗಿದೆ" ಎಂದೆ ಅವರನ್ನು ಸಮಾಧಾನಗೊಳಿಸಲು. ನಿಜಕ್ಕೂ ಈಗ ಮೊದಲಿಗಿಂತಲೂ ಎಷ್ಟೋ ಮೇಲು!

"ಅದೊಂದೂ ನನಗೆ ತಿಳಿಯದು. ನಾನು ಮಾತ್ರ ಇನ್ನು ನಿಮ್ಮ ಕಾಲಿನ ಸುದ್ದಿಗೆ ಬರುವುದಿಲ್ಲ. ನೀವು ದಮ್ಮಯ್ಯ ಅಂದರೂ ಅದನ್ನು ತಿರುಗಿ ಕಟ್ಟಿಸೋಕೆ ನಿಮ್ಮ ಜತೆಗೆ ಬರೋದಿಲ್ಲ" ಎಂದು ಅಲ್ಲಿ ನಿಲ್ಲದೆ ಬಿರಬಿರನೆ ನಡೆದುಬಿಟ್ಟರು.

ಈಗ ಹಾಸ್ಟಲಿನಲ್ಲಿ ಎಲ್ಲರೂ ನನ್ನನ್ನು ಬೈಯುವವರೇ ಆದರು. ನಾನು 'ಪ್ಲಾಸ್ಟರ'ನ್ನು ಅವಧಿಗಿಂತಲೂ ಮುಂಚೆ ಕಿತ್ತು ಹಾಕಬಾರದಿತ್ತು. ಕೀಳಬೇಕೆನಿಸಿದ್ದರೂ ಆಸ್ಪತ್ರೆಯಲ್ಲಿಯೇ ಕೀಳಿಸಬೇಕಾಗಿತ್ತು....ಎಂದು ಹೇಳ ತೊಡಗಿದರು. "ಹೋಗಲಿ ಈಗಲಾದರೂ ಮೊದಲು ಹೋಗಿ ಮತ್ತೆ ಕಟ್ಟಿಸಿಕೊಂಡು ಬನ್ನಿ. ಹಾಗೆಯೇ ಧೂಳು ಕೂರಲು ಬಿಟ್ಟರೆ ಕಾಲಿನ ನೋವು ಇನ್ನೂ ಜಾಸ್ತಿಯಾದೀತು. ಮುಂದೆ ತೊಂದರೆಗೆ ಇಟ್ಟುಕೊಂಡೀತು ......." ಎಂದು ಹಿರಿಯರೊಬ್ಬರು ತಮ್ಮ ಅನುಭಾವೃತದೊಂದಿಗೆ ಅಪ್ಪಣೆ ಕೊಡಿಸಿದರು. ನಾನು ಮಾಡಿದುದನ್ನು ಸರಿಯೆಂದು ಯಾರೂ ಮೆಚ್ಚಲಿಲ್ಲ. ಈಗ ನನಗೆ ಗಾಬರಿ. ಬಿಚ್ಚಿದುದು ದುಡುಕುತನವಾಯಿತು ಎಂದು ನನ್ನನ್ನೇ ಹಳಿದುಕೊಂಡೆ. ಮತ್ತೆ ಬಿಚ್ಚಿದ ಬಟ್ಟೆಗಳನ್ನು ಕಟ್ಟಿಕೊಳ್ಳಲು ನೋಡಿದೆ.... ಉಹೂ....ಮೊದಲಿನಂತೆ ಆ ಒಣಗಿದ ಬಟ್ಟೆಗಳು ಕೂಡಲಿಲ್ಲ. 'ಬೆಳಗಾದೊಡನೆ ಆಸ್ಪತ್ರೆಗೆ ಹೋಗಿಬರಬೇಕು. ಮಾಡಿದ ತಪ್ಪನ್ನು ಒಪ್ಪಿಕೊಂಡು – ಕಡೆಗೆ ಹಣ ತೆತ್ತಾದರೂ – ಮತ್ತೆ ಕಟ್ಟಿಸಿಕೊಂಡು ಬರಬೇಕು' ಎಂದೆಲ್ಲಾ ಅನಿಸಿತು. ಅವರು ಕಟ್ಟದೆ ಹೋದರೆ?

ಆ ರಾತ್ರಿಯೆಲ್ಲಾ ಹೊಸ ಹೆದರಿಕೆಯಲ್ಲೇ ಕಳೆಯಿತು. ಈಗ ನನ್ನೊಂದಿಗೆ ಆಸ್ಪತ್ರೆಗೆ ಬರಲು ಬಾನಾಡಿಯನ್ನು ಕರೆಯಲು ಹೆದರಿಕೆ. ಶ್ರೀಕಾಂತರನ್ನು ಕರೆಯಲು ಮನಸ್ಸು ಬರಲಿಲ್ಲ. ಪರೀಕ್ಷೆಗಳು ಹತ್ತಿರ

ಹತ್ತಿರ ಬರುತ್ತಿತ್ತು. ಒಂದೊಂದು ನಿಮಿಷವೂ ಅಮೂಲ್ಯವಾದ ಸಮಯ .......

ಈಗ ನನ್ನ ಸಹಾಯಕ್ಕೆ ನನ್ನ ಕೊಠಡಿಯಲ್ಲಿನ ಸಹಪಾಠಿ ಬಂದರು.

ಆಸ್ಪತ್ರೆಯಲ್ಲಿ ನಾನು 'ಪ್ಲಾಸ್ಟರ'ನ್ನು ಕಿತ್ತುಹಾಕಿದ ಕಥೆಯನ್ನು ಕೇಳಿ ಡಾಕ್ಟರುಗಳು ಕೆರಳಿಬಿಟ್ಟರು. "ನಾವೊಂದು ಹೇಳಿದರೆ ನೀವೊಂದು ಮಾಡುತ್ತೀರಿ....ತಿರುಗಿ ಕಲಿತ ಮಂದಿ ನೀವು, ಗಾಯ ಗುಣವಾಗುವುದು ಬೇಕು, ಆದರೆ ನಾವು ಹೇಳಿದಂತೆ ನಡೆದುಕೊಳ್ಳುವುದು ಬೇಡ. ಮತ್ತೆ 'ಪ್ಲಾಸ್ಟರ್' ಮಾಡಲು ಸಾಧ್ಯವಿಲ್ಲ" ಎಂದರು. ನಾನು ಹತಾಶನಾದೆ. ಅದೂ ಇದೂ ಸಬೂಬು ಹೇಳಿ ನೋಡಿದೆ. ಅವರು ಯಾವುದಕ್ಕೂ ಕಿವಿಗೊಡದ ಕಟುಕರಾಗಿದ್ದರು.

ಬಂದ ದಾರಿಗೆ ಸುಂಕವಿಲ್ಲವೆಂದು, ಬಂದ ದಾರಿಯಲ್ಲೇ ಕಾಲನ್ನು ಎಳೆದುಕೊಂಡು ಹಿಂತಿರುಗಿದೆ. ಕಾಲನ್ನು ವಾಸಿಮಾಡುವುದು ಬಿಡುವುದು 'ನಿನಗೆ' ಸೇರಿದ್ದು – ಎಂದು ದೇವರನ್ನು ಹೊಣೆಮಾಡಿ ಹಾಸ್ಟಲಿನ ಕಡೆ ಮುಖ ತಿರುವಿದೆ.

ದಾರಿಯಲ್ಲಿ ನೂರಡಿ ರಸ್ತೆಯಲ್ಲಿ 'ಸೀತಾವಿಳಾಸ ಛತ್ರ.' ಅದರ ಒಂದು ಮೂಲೆಯಲ್ಲಿ 'ಜಟ್ಟಿ ಆಸ್ಪತ್ರೆ.' ಗಾಯ, ಪೆಟ್ಟು, ಉಳುಕುಗಳನ್ನು ವಾಸಿಮಾಡುವುದರಲ್ಲಿ ಅವನು ಹೆಸರುವಾಸಿ. ನನ್ನ ಅದೃಷ್ಟ ನನ್ನನ್ನು ನೇರ ಅಲ್ಲಿಗೆ ಎಳೆದುಕೊಂಡು ಹೋಯಿತು. ಆಸ್ಪತ್ರೆಯ 'ಜಟ್ಟಿ' ನನ್ನೆಲ್ಲಾ ಕಥೆ ತಿಳಿದು 'ಇನ್ನು ನಾಲ್ಕು ದಿನಕ್ಕೆ ಮೊದಲಿನ ಕಾಲಾಗುವಂತೆ ಮಾಡುತ್ತೇನೆ, ಪರೀಕ್ಷೆಯ ವೇಳೆಗೆ ಕಾಲನ್ನು ಸರಿಪಡಿಸಿಕೊಡುವೆ' – ಎಂದು ಭರವಸೆ ಇತ್ತ. ಅವನ ಕೈಗೆ ಕಾಲನ್ನು ಒಪ್ಪಿಸಿದೆ.

ಆತ ನಿಜವಾಗಿಯೂ ಸಿದ್ಧಹಸ್ತನೇ ಸರಿ. ತಾನು ಹೇಳಿದ ಅವಧಿಯಲ್ಲಿ ನನ್ನ ಕಾಲಿನ ಊತ, ಗಾಯ, ನೋವು ಎಲ್ಲವೂ ಹೆಸರಿಲ್ಲದಾಯಿತು. ನಾಲ್ಕೇ ದಿನಗಳಲ್ಲಿ ಎಲ್ಲಿ ನೋಡಿದರಲ್ಲಿ ಕಾಣಸಿಗುವ ಮೊದಲಿನ ಮೂರ್ತಿ ನಾನಾಗಿದ್ದೆ.

ಈಗಲೀಗ ಓದು ನನ್ನ ತಲೆಗೆ ಹಿಡಿಯುತ್ತಿದೆ. ಹೀಗೆಯೇ ಓದಿದ್ದೆಲ್ಲಾ ಅರ್ಥವಾದರೆ ನಾನು ಪಾಸಾದಂತೆಯೇ ಸರಿ.

ಒಂದು ದಿನ ನನ್ನ ಪರಿಚಯದ ಕಾಮೇಶ್ ಎನ್ನುವ ವ್ಯಕ್ತಿ ಹಠಾತ್ತಾ ಸಿಕ್ಕಿ ಹೀಗೆಂದ "ಮೂರ್ತಿ ನಿಮ್ಮನ್ನು ಶ್ರೀಮತಿ ಕೇಳಿದಳು. ಸೀ ಖಂಡಿತ ಆಕೆಯನ್ನು ಕಾಣಬೇಕಂತೆ. ಅದು ಏನೋ ಒಂದು ಪುಸ್ತ ಕೊಟ್ಟಿದ್ದೀರಂತಲ್ಲಾ, ಅದನ್ನು ತೆಗೆದುಕೊಂಡು ಹೋಗೋಕೆ ಬರಬೇಕಂತೆ

"ಆಕೆ........ನಿಮಗೆಂದು ಸಿಕ್ಕಿದ್ದಳು?" ನಾನು ವಿಸ್ಮಯಗೊಂಡು ಕೇಳಿದೆ.

"ಕಾಲೇಜಿನ ಬಳಿ ನಿನ್ನೆ ಸಿಕ್ಕಿದ್ದಳು."

"ಎಲ್ಲಿ ಕಾಣಸಿಗುತ್ತಾರಂತೆ?"

"ಮನೆಯ ಹತ್ತಿರ."

ನನಗೇನೋ ಅಪ್ರೊಡೈಟಿಯ ಬಗ್ಗೆ ಇನ್ನಿಷ್ಟು ಸುದ್ದಿ ತಿಳಿಯುವ ಕುತೂಹಲ. ಆದರೆ ಅವನೆದುರಿಗೆ ಅದನ್ನು ಪ್ರದರ್ಶಿಸಲು ಇಚ್ಛೆ ಬರಲಿಲ್ಲ. ಹೀಗಾಗಿ ನಾನು ಪ್ರಶ್ನೆಗಳನ್ನು ಕೆದಕಿ ಕೇಳಲಿಲ್ಲ. ಗೆಳೆಯರಿಗೆ ಅವನು ಹೇಳಿದ ಸುದ್ದಿ ತಿಳಿಸಿದೆ.

"ಅಪ್ರೊಡೈಟಗೆ ಮನಸ್ಸು ಬದಲಾಯಿಸಿದೆ ಎಂದು ತೋರುತ್ತೆ. ಹೋಗಿ ಕಂಡು ಬನ್ನಿ" ಎಂದರು ಬಾನಾಡಿ.

ಅದೇ ದಿನ ಕಾಮೇಶ್ ಮತ್ತೊಮ್ಮೆ ನನಗೆ ಸಿಕ್ಕಿದ. ಶ್ರೀಮತಿ ಹಾಗೂ ನನ್ನ ಪರಿಚಯ ಅವನಿಗೆ ಆಶ್ಚರ್ಯ ಉಂಟುಮಾಡಿತ್ತು. ಅಪ್ರೊಡೈಟ ಯಾವ ವಿಷಯಕ್ಕೂ ಇನ್ನೊಬ್ಬರ ಸಹಾಯ ಅಪೇಕ್ಷಿಸುವ ಹುಡುಗಿಯಲ್ಲ ವಂತೆ. ಇಂತಹವಳು ನನ್ನಿಂದ ಪುಸ್ತಕ ತೆಗೆದುಕೊಂಡಿರುವ ವಿಷಯ ಆತನನ್ನು ವಿಸ್ಮಯಗೊಳಿಸಿತ್ತು.

"ಆಕೆ ತೆಗೆದುಕೊಂಡಿರುವುದು ಯಾವ ನೋಟ್ಸು?" ಎಂದು ಕೇಳಿದ ಆತ.

"ನನ್ನದು ನೋಟ್ಸಲ್ಲ ಕಥೆಯ ಪುಸ್ತಕ!" ಎಂದೆ ನಗುತ್ತಾ.

"ಆಕೆ ನಿಮಗೆ ಹೇಗೆ ಗೊತ್ತು?" ಎಂದು ಕೆಣಕಿ ಕೇಳಿದ.

"ನಿಮಗೆ?"

"ಹಸಿಗಿರಿಯಲ್ಲಿ ಆಕೆ ನಮ್ಮ 'ಕ್ಲಾಸ್ ಮೇಟ್' ಆಗಿದ್ದಳು. ಆಕೆಯ ಮನೆಯವರನ್ನು ನಾನು ಮೊದಲಿನಿಂದಲೂ ಬಲ್ಲೆ!" ಎಂದ.

"ಆಕೆ ನನಗೆ ದೂರದ ನೆಂಟಳಾಗಬೇಕು – ತಾಯಿಯ ಕಡೆ" ಎಂದೆ ನಾನು ಸಮಯೋಚಿತವಾಗಿ ಬೇರೇನೂ ಹೇಳಲು ತೋಚದೆ.

"ನೀವು ಆಕೆಯೊಂದಿಗೆ ಮಾತನಾಡಿದುದನ್ನು ನಾನು ಈ ತನಕ ಕಂಡಿಲ್ಲ."

"ಆಕೆಯು ಸಂಬಂಧೀಕಳೆಂದು ಈಚೆಗೆ ತಿಳಿಯಿತು. ಅಲ್ಲದೆ ಕಾಲೇಜಿನಲ್ಲಿ ಆಕೆಯನ್ನು ಕಾಣುವುದು ನನಗಿಷ್ಟವಿಲ್ಲ."

ಅವನು ಮುಖವನ್ನು ಸೊಟ್ಟುಮಾಡಿದ ನನ್ನ ಮಾತನ್ನು ಕೇಳಿ. "ಏನೇ ಆಗಲಿ....ಆ ನಿಮ್ಮ ಹುಡುಗಿ ತುಂಬಾ ಘಾಟಿ ಕಾಣ್ರಿ. ನಾನೇನೋ ಅಂದುಕೊಂಡಿದ್ದೆ." ಹಲ್ಲು ಕಿರಿಯುತ್ತಲೆಂದ.

"ಯಾಕೆ?"

"ಅವಳು ಜತೇಲಿ ಪುಸ್ತಕ ತಂದಿದ್ದಳು. 'ಕೊಡಿ ತೆಗೆದುಕೊಂಡು ಹೋಗಿ ಕೊಡುತ್ತೇನೆ' ಅಂದೆ. ಅವಳು ಕೊಡ್ತೋಳೆ? 'ಊಹೂಂ' ಎಂದುಬಿಟ್ಟಳು. 'ನಾನೇ ಕೊಡ್ತೀನಿ. ಅವರೊಂದಿಗೆ ಕೊಂಚ ಮಾತನಾಡೋ ಕೆಲಸ ಇದೆ' – ಅಂದಳು! ಕಡೆಗೂ ಇಂತಹ ಪುಸ್ತಕ ಅದು ಅಂತ ನನಗೆ ತೋರಿಸಲೇ ಇಲ್ಲ!"

ನಾನು ಗಪಗಹಿಸಿ ನಕ್ಕುಬಿಟ್ಟೆ. ಅಫ್ರೊಡೈಟಿಯ 'ಘಾಟಿತನ' ಕೇಳಿ ನಗಲಿಲ್ಲ; ಆ ಕಾಮಣ್ಣನ [ಕಾಮೇಶ್‌ನನ್ನು ಕಾಮಣ್ಣನೆಂದು ನಾವು ನಾಲ್ವರು ಗೆಳೆಯರು ಕರೆಯುತ್ತಿದ್ದೆವು] ಅಸಾಯಕ ಸ್ಥಿತಿಯನ್ನು ನೆನೆದು! ಕಾಮಣ್ಣ ಹೆಂಗಸರೆಂದರೆ ಮೇಲೆ ಬಿದ್ದು ಹೋಗುವ ಜಾತಿ. ನನ್ನ ಪುಸ್ತಕದ ಕಾರಣವಾಗಿ ಅಫ್ರೊಡೈಟಿಯೊಂದಿಗೆ ಹೆಚ್ಚಿನ ಸಲಿಗೆ ಬೆಳೆಸಲು ನೋಡಿದ. ಆದರೆ ಆ ಘಾಟಿ ಹುಡುಗಿ ಆಸ್ಪದ ಕೊಡಲಿಲ್ಲ.

ಭಾನುವಾರ. 'ಷೇವ್' ಮಾಡಿಕೊಂಡು ಇಸ್ತ್ರಿಮಾಡಿದ ಜುಬ್ಬ, ಪೈಜಾಮ ಧರಿಸಿ, ಸೈಕಲ್ ಹತ್ತಿ ಅಫ್ರೊಡೈಟಿಯ ಮನೆಯನ್ನು ಹುಡುಕಿಕೊಂಡು ಹೊರಟೆ. ಎಲ್ಲೋ ಕಾಲೇಜು ಮೇಷ್ಟ್ರು ಇರುವ ಬೀದಿಯಂತಲ್ಲಾ........ಎಂದು ವಿಚಾರಿಸಿ ಆಕೆಯ ಮನೆಯ ಮುಂದೆ ಬಂದು ನಿಂತೆ.

ಅಫ್ರೊಡೈಟಿಯನ್ನು ಹೇಗೆ ಹೊರಗೆ ಬರಮಾಡುವುದು? ಆಕೆಯನ್ನು ಹೆಸರು ಹಿಡಿದು ಕರೆಯಲು ನನಗೆ ಸಂಕೋಚವೆನಿಸಿತು. ಹಾಗೆ ಕರೆದರೆ

ಮನೆಯವರು ಏನು ತಿಳಿಯುತ್ತಾರೋ ಏನೋ? ತಾನು ಮನೆಗೆ ಬಂದು
ತಪ್ಪು......ತಪ್ಪು........ನಾನಾಗಿ ಬರಲಿಲ್ಲ. ತಾನಾಗಿ ಹೇಳಿಕಳುಹಿಸಿದ್ದಾ
........ಈಗ ಬಂದು ನಿಂತುದಾಗಿದೆ. ಆಕೆಯನ್ನು ಕೂಗಿ ಹೊರಗೆ ಕರೆಯು
ಯಾಕೆ ಹಿಂದುಮುಂದು ತುಳಿಯಬೇಕು! ಈ ವೇಳೆಗೆ ಎಂಟು ಹತ್ತು
ವರ್ಷದ ಹುಡುಗನೊಬ್ಬ ಕಾಣಿಸಿಕೊಂಡ. ಅವನನ್ನು ಸಂಜ್ಞೆಮಾಡಿ ಕರೆ
ಶ್ರೀಮತಿಯನ್ನು ಕರೆಯಲು ಹೇಳಿದೆ. ಅವನು ಮಹಡಿಯ ಮೆಟ್ಟಿಲನ್ನೇ
ಅಪ್ರೊಪ್ರೈಟಿಗೆ ಸುದ್ದಿಮುಟ್ಟಿಸಿದ.

ನಾನು ಬಂದಿರುವ ಸುದ್ದಿ ಕೇಳಿ ಆಕೆ ಹಾರುತ್ತಾ ಬಂದಳು. ಮಹಡಿಯ
ಎಲ್ಲಾ ಮೆಟ್ಟಿಲುಗಳನ್ನು ಒಂದೇ ಬಾರಿಗೆ ಜಿಗಿಯುವ ಉತ್ಸಾಹ ತಳೆದಿದ್ದಳು
ಸದ್ಯ! ಬರುವ ಸಂಭ್ರಮದಲ್ಲಿ ಮುಗ್ಗರಿಸಿಬಿದ್ದಾಳು ಎಂದು ಹೆದರಿದೆ......
"ಓಹೋ ನೀವೋ........" ಎನ್ನುತ್ತಾ ತಲೆಗೂದಲನ್ನು ಸರಿಪಡಿಸಿಕೊಳ್ಳುತ್ತಾ
ಮನೆಯ ಮುಂದಿನ ವರಾಂಡಕ್ಕೆ ಬಂದಳು. ಅಲ್ಲಿದ್ದ ಮರದ ಕಂಬಕ್ಕೆ
'ವಯ್ಯಾರಿ'ಯ ಭಂಗಿಯಲ್ಲಿ ಒರಗಿಕೊಂಡು ನಿಂತಳು. ಆ ದೃಶ್ಯ ನನಗೆ
'ರೋಮಿಯೋ ಜೂಲಿಯಟ್' ಚಿತ್ರದ ದೃಶ್ಯ ಒಂದರ ನೆನಪು ತರುತ್ತಿತ್ತು.

"ನಿಮಗೆ ಕಾಮೇಶ್ ಸುದ್ದಿ ಕೊಟ್ಟ ತಾನೆ?" ಎಂದಳು.

"ಆತ ಹೇಳಿದುದರ ಮೇಲೆಯೋ ನಾನು ಬಂದುದು" ಎಂದೆ. ಆಕೆ
ಮತ್ತೆ ಮಹಡಿ ಹತ್ತಿಹೋಗಿ, ನನ್ನ ಪುಸ್ತಕಗಳನ್ನು ತಂದು ಕೈಗೆ ಕೊಟ್ಟಳು.
ಅವನ್ನು ತೆಗೆದುಕೊಳ್ಳುತ್ತಿದ್ದಂತೆ ಮೈ ರೋಮಾಂಚನವಾಯಿತು. ಕೈ ನಡು
ಗಿತು. ಇದೇ ಅನುಭವ ಆಕೆಗೂ!

"ನಿಮ್ಮ ಕೈ ಅಕ್ಷರ ಬಹಳ ಚನ್ನಾಗಿದೆ............ಮುತ್ತು ಪೋಣಿಸಿ
ದಂತಿದೆ........" ಎಂದಳು ನಗುತ್ತಾ.

"'ನನ್ನ ಕೈ ಬರಹ' ಹೊಗಳುವವರನ್ನು ದೇವರೇ ಕಾಪಾಡಬೇಕು."
ಎಂದೆ ನಗುತ್ತಾ. ಆಕೆ ಬೆರಗಾಗಿ ನಿಂತಳು.

"ಇದನ್ನು 'ಪ್ರತಿ' ಮಾಡಿರುವವರು ಶ್ರೀಧರ್ – ನನ್ನ ಪ್ರಿಯ ಮಿತ್ರ–
ನಾನಲ್ಲ".

"ಪುಸ್ತಕವನ್ನು ದಿನಾಗಲು ತರುತ್ತಿದ್ದೆ. ನೀವು ಕಾಣಿಸುತ್ತಿರಲಿಲ್ಲ.
ನನ್ನ ಮೇಲೆ ಸಿಟ್ಟುಮಾಡಿಕೊಂಡು ಊರಿಗೆ ಹೊರಟುಬಿಟ್ಟರೇನೋ ಎಂದು

ಹೆದರಿದ್ದೆ – ನಿಮ್ಮ ಕಾಲಿಗೆ ಪೆಟ್ಟಾಗಿ ಕಾಲೇಜಿಗೆ ಬರಲಾಗಲಿಲ್ಲವೆಂಬುದನ್ನು ತಿಳಿಯದೆ. ಸದ್ಯ ಕಾಲಿಗೆ ಅಂತಹ ಅಪಾಯವಾಗಲಿಲ್ಲ ತಾನೆ? ಪರೀಕ್ಷೆ ಹೊತ್ತು........" ಎಂದಳು ನನ್ನ ಕಾಲನ್ನು ಒಂದೇ ಸಮನೆ ದಿಟ್ಟಿಸುತ್ತ.

ನಾನು ಆಕೆಗೆ ಮಹಡಿಯಿಂದ ಕಾಲುಜಾರಿ ಬಿದ್ದ ದಂತಕಥೆ ಹೇಳಿದೆ. ಅದನ್ನು ಹೇಳುತ್ತಿರುವಂತೆ ನನಗೇ ನಗು. ಬಾಯಿ ಕಥೆಯನ್ನು ಹೇಳು ತ್ತಿದ್ದರೂ ಇನ್ನೊಂದು ಮನಸ್ಸು 'ಇದೆಲ್ಲಾ ನಿನ್ನಿಂದಲೇ ಆದ ಅನಾಹುತ!' ಎಂದು ಆಕೆಯನ್ನು ಜರೆಯುತ್ತಿತ್ತು!

ನನ್ನ ಕಥೆಯನ್ನೆಲ್ಲಾ ಕೇಳಿ ಆಕೆ 'ತಾನೇ ಬಿದ್ದಳೋ' ಎಂಬಂತೆ ಒದ್ದಾಡಿದಳು. ಕಡೆಗೆ 'ಸದ್ಯ ಕಾಲು ಮುರಿಯಲಿಲ್ಲವಲ್ಲ. ನಿಮ್ಮ ಪುಣ್ಯ ದೊಡ್ಡದು' ಎಂದಳು.

ನಾನು ಮುಖವರಳಿಸಿ ಹೊಂಗುಟ್ಟಿದೆ.

"ಆ ದಿನ ಪಾಪ ನೀವು ಕುಂಟುತ್ತಾ ತರಗತಿಗೆ ಬಂದಿದ್ದರಂತೆ – ನನ ಗೋಸ್ಕರ. ಆದರೆ ಅವತ್ತು ನಾನೇ 'ಚಕ್ಕರ್' ಕೊಟ್ಟುಬಿಟ್ಟದ್ದೆ. ಪಾಪ! ನೀವು ಬೇಸರಪಟ್ಟುಕೊಂಡು ಹಿಂದಿರುಗಿದಿರಿ ಎಂದು ತೋರುತ್ತೆ. ನಾನು ಬಾರದಿದ್ದರೂ ಪುಸ್ತಕಗಳನ್ನು ನನ್ನ ಗೆಳತಿಗೆ ಕೊಟ್ಟದ್ದೆ. ನೀವು ಸಿಕ್ಕರೆ ಕೊಡಲು ಹೇಳಿದ್ದೆ. ಅವಳು ತರಗತಿಯಾದ ಮೇಲೆ ನೀವು ಬರುವಿರೆಂದು ಕಾದಳಂತೆ. ನೀವು ಬರಲಿಲ್ಲವಂತೆ! ಆ ಕತೇನೆಲ್ಲಾ ಅವಳೇ ನನಗೆ ಹೇಳಿದಳು."

"ನಾನು ಬೇಸರಪಟ್ಟುಕೊಂಡು ಹೋಗುವುದು ಹಾಗಿರಲಿ, ನೀವು ದಿನವಹಿ ಅದನ್ನು ತಂದು ತಂದು ಹಿಂದಿರುಗಿ ತೆಗೆದುಕೊಂಡು ಹೋಗಬೇಕಾಯಿ ತಲ್ಲ........ಎಷ್ಟು ಬೇಸರಪಟ್ಟುಕೊಂಡಿರೋ ಏನೋ? ನನ್ನನ್ನು ಬೈಯಲಿಲ್ಲ ತಾನೆ?........ಆಮೇಲೆ ನಾನೆಂದುಕೊಂಡೆ — ನಾನು ಪುಸ್ತಕಕೊಟ್ಟು ತಪ್ಪು ಮಾಡಿದೆ. ಪುಸ್ತಕ ಕೊಡದೆ ಇದ್ದರೆ ಈ ಕಷ್ಟಗಳೊಂದೂ ಇರುತ್ತಿರಲಿಲ್ಲ........"

"ಛೇ! ಛೇ! ಹಾಗೆ ಎಂದಿಗೂ ತಿಳಿಯಬೇಡಿ. ನಿಮ್ಮ ಪುಸ್ತಕವನ್ನು ನಾನಾಗಿ ನಾನೇ ಮೇಲೆಬಿದ್ದು ಕೇಳಿ ತರಿಸಿಕೊಂಡೆ. ನೀವಾಗಿ ನೀವೇ ಕೊಡಲಿಲ್ಲವಷ್ಟೆ........" ಎಂದು ನಕ್ಕುಬಿಟ್ಟಳು. ನನಗೂ ನಗು ಬಂತು.

"ಹೇಗಿದೆ ಪುಸ್ತಕ?"

"ಬಹಳ ಚನ್ನಾಗಿದೆ ಕಣ್ರಿ. ನಾನು ಎರಡು ಮೂರು ಸಲ ಓದಿದೆ.

ಇನ್ನೂ ಓದೋಣ ಅನ್ನಿಸುತ್ತಿದೆರಿ. ಇದನ್ನು ಮನೆಯವರೆಲ್ಲರಿಗೂ ಓದಿ ಹೇಳಿದೆ. ನನ್ನ ಗೆಳತಿಯೂ ಓದಿದಳು. ಅವಳೂ 'ಚೆನ್ನಾಗಿ ಬರೆದಿದ್ದಾರೆ. ಓದುತ್ತಿದ್ದರೆ ರಸವತ್ತಾಗಿದೆ' ಎಂದಳು."

"ನಾನು ಕೇಳುತ್ತಿರುವೆನೆಂದು ಹೀಗೆನ್ನುತ್ತೀರೋ ಅಥವಾ........"

ಛೇ! ಛೇ! ಬರಿಯ ಹೊಗಳಿಕೆಯ ಮಾತಲ್ಲ. ಬೇಕಾದ್ರೆ ನೀವೇ ಅವಳನ್ನು ಕೇಳಿ ನೋಡಿ — ಅವಳಿಗೆ ನಾನು ಏನಂತ ಹೇಳಿದ್ನೊ........ ಇರಲಿ, ನಿಮ್ಮ ಸಿಸ್ಟರ್ ವಿಶಾಲಿ ಈಗ ಎಲ್ಲಿದ್ದಾಳೆ?"

"ಹಾಂ" ಎಂದು ಎಚ್ಚತ್ತೆ – ಆಕೆಯ ಮಾತು ಕೇಳಿ. "ಯಾರು? ವಿಶಾಲಿಯೇ! ಅವಳು ಬಹುಶಃ ಶಿವಮೊಗ್ಗೆಯಲ್ಲಿದ್ದಾಳೆ. ಅವಳ ಯಜಮಾನರು ಅಲ್ಲಿನ ಕಾಲೇಜಿನಲ್ಲಿ ಉಪಾಧ್ಯಾಯರು. ಅಲ್ಲಿಗೆ ವರ್ಗವಾಗಿ ವರ್ಷವಾಯಿತೆಂದು ತೋರುತ್ತೆ........" ನನ್ನ ಮಾತನ್ನು ಪೂರೈಸುವ ಮುನ್ನ ಆಕೆಯೇ ಬಾಯಿಹಾಕಿದಳು.

"ನನ್ನ ಗೆಳತಿ ಹೇಳಿದಳು! 'ಇವರ ತಂಗಿ ಎಷ್ಟು ಅದೃಷ್ಟವಂತೆ – ಇಂತಹ ಅಣ್ಣನ್ನ ಪಡೆಯೋಕೆ' ಅಂತ. ನಾನು ಹೌದೆಂದೆ.......ಹಾಗಾದರೆ ಅವರು 'ಸ್ಟಡೀಸ್'ನ (ವ್ಯಾಸಂಗ) ಬಿಟ್ಟುಬಿಟ್ರಾ?"

ನಾನು ಒಂದು ವಿಧವಾದ ಮುಖಮಾಡಿಕೊಂಡು ಹೇಳಿದೆ. "ಅಂತಹ ಒಬ್ಬ ತಂಗಿ ನನಗಿದ್ದರೆ – ನನಗೂ – ಹೆಮ್ಮೆಯೇ........ಆ ಭಾಗ್ಯ ನನಗಿಲ್ಲ. ನಾಲ್ಕು ಮಂದಿ ಅಕ್ಕತಂಗಿಯರಿದ್ದಾರೆ. ಆದರೆ ವಿಶಾಲಿಯಂತಹವಳು ಒಬ್ಬಾಕೆಯೂ ಇಲ್ಲ........" ಎಂದೆ.

"ಇದೇನು ನಿಮ್ಮ ಮಾತು? ಶಿವಮೊಗ್ಗೆಯಲ್ಲಿದ್ದಾರೆನ್ನುತ್ತೀರಿ. ಆಕೆಯನ್ನು ಪಡೆಯುವ ಭಾಗ್ಯ ನನಗಿಲ್ಲವೆನ್ನುತ್ತೀರಿ....?" ಆಕೆ ಆಶ್ಚರ್ಯ ಚಕಿತಳಾಗಿ ಕೇಳಿದಳು.

"ಹೂಂ, ಹೌದು. ವಿಶಾಲಿ ನನ್ನ ಕನಸಿನ ಕುವರಿ. ನನ್ನ ಕಲ್ಪನೆಯ ತಂಗಿ, ಕಲ್ಪನೆಯಲ್ಲಿ ಅವಳು ಬದುಕಿದ್ದಾಳೆ. ಅವಳು ಶಿವಮೊಗ್ಗೆಯಲ್ಲಿರುವುದೂ ಸುಳ್ಳಲ್ಲ....ವಿಜಯಯಾತ್ರೆಯ ಮುಂದಿನ ಕಥೆಯೇ ಅದು...."

"ಓ! ನೀವು ಕನಸು ಕಾಣುತ್ತಿದ್ದೀರಿ!"

"ಹೂಂ, ಹೌದು....ಕನಸು?"

"ನಮ್ಮನ್ನೂ ಕನಸು ಕಾಣುವಂತೆ ಮಾಡುತ್ತಿದ್ದೀರಿ!" ನಾನು ಮೌನವಾಗಿದ್ದೆ.

"ನಾವೆಲ್ಲಾ ಅವಳು ನಿಮ್ಮ ಸ್ವಂತ ಸಹೋದರಿ ಅಂತ ಮಾಡಿದ್ದೆವು. ಅವಳನ್ನು ತುಂಬಾ ಹೊಗಳಿ ಅಟ್ಟಕ್ಕೇರಿಸಿದ್ದೆವು........ಆ ಸಮ್ಮೇಳನದ ಚಿತ್ರ ನಮಗೆ ಇನ್ನೂ ಕಣ್ಣಿಗೆ ಕಟ್ಟಿದ ಹಾಗೆ ಇದೆ. ನಾವು ನಿಮ್ಮ ದೆಸೆಯಿಂದ, ಕೂತಲ್ಲಿಂದ ಕದಲದೆ ಸಮ್ಮೇಳನ, ಮದರಾಸುಗಳನ್ನು ಕಂಡು ಬಂದೆವು!" ಎಂದು ನಕ್ಕಳು.

"ನನಗೆ ಆ ಕಾದಂಬರಿಯ ಬಗ್ಗೆ ವಿಮರ್ಶೆ ಬೇಕು" ಎಂದೆ.

"ಹಾಗೆಂದರೆ ?"

"ಭಾಷೆ, ಬಂಧ, ರಚನೆ........ಇವುಗಳ ವಿಮರ್ಶೆ".

"ತುಂಬಾ ಚನ್ನಾಗಿದೆ........"

"ನಿಮ್ಮದು ಹೊಗಳಿಕೆ, ವಿಮರ್ಶೆಯಲ್ಲ".

"ಹೋಗಲಿ, ಮತ್ತೇನೇನು ಬರೆದಿದ್ದೀರಿ ?"

"ಕಾಮನಬಿಲ್ಲು" ಎನ್ನುವ ಕಾದಂಬರಿಯನ್ನು ಕನ್ನಡಿಸಿದ್ದೇನೆ. 'ವೇಂಡಾ ವಾಸಿಲ್ ವಾಸ' ಎನ್ನುವ ಪೋಲೀಸ್ ಮಹಿಳೆಯು ಬರೆದಿರುವ 'ರೈನ್ ಬೊ' ಎನ್ನುವ ಕಾದಂಬರಿಯ ಅನುವಾದವದು. ಸ್ಟಾಲಿನ್ ಬಹುಮಾನ ಪಡೆದ ಕಾದಂಬರಿ. ಯುದ್ಧದ ಹಿನ್ನೆಲೆಯಲ್ಲಿ ಸ್ವಾರಸ್ಯವಾಗಿ ಹೆಣೆಯಲ್ಪಟ್ಟಿರುವ ಈ ಗ್ರಂಥ ಚಲನಚಿತ್ರ ಕೂಡ ಆಗಿದೆ ನಮ್ಮ ದೇಶದ ಇತರ ದೇಶಿ ಭಾಷೆಗಳಿಗೆ ಪರಿವರ್ತಿತವಾಗಿದೆಯಂತೆ. ಇದು ಕನ್ನಡಕ್ಕಿರಲಿ ಎಂದು ನಾನು ಭಾಷಾಂತರಿಸಿದ್ದೇನೆ. ಹೊತ್ತು ಕಳೆಯಲು ಅದೂ ಒಂದು ಸಾಧನ" ಎಂದೆ.

"ನೀವು ಎಂದಿನಿಂದ ಬರೆಯತೊಡಗಿದ್ದೀರಿ ?"

"ನನ್ನ 'ಇಂಟರ್' ದಿನಗಳಿಂದ. ಆದರೆ ನಾನು ಬರೆಯುವುದು ಕಡಮೆ. ಬರೆದರೂ ಅಚ್ಚಿಗೆ ಕಳುಹಿಸುವುದೂ ಅಪರೂಪ. ಪಟ್ಟಶ್ರಮಕ್ಕೆ ಪ್ರತಿಫಲ ಸಿಗುವಂತಿದ್ದರೆ, ಲೇಖನಗಳನ್ನು ಅಚ್ಚಿಗೆ ಕಳುಹಿಸಿಕೊಡುವೆ. ಲೇಖನಗಳು ಪುಕ್ಕಟೆಯಾಗಿ ಸಿಗುವ ಹಾಗಿದ್ದರೆ....ನಮ್ಮ ಸಂಪಾದಕ ಮಹಾಶಯರು ಅಚ್ಚು ಹಾಕಲು ಸಿದ್ಧ. ತಾವು ಲೇಖಕರಿಂದ ಕಿಸೆಯ

ತುಂಬಾ ರೊಕ್ಕ ಸಂಪಾದಿಸಿಕೊಂಡರೂ ಬರಹಗಾರರಿಗೆ ಒಂದು ಪ್ರತಿಯನ್
ಕಳುಹಿಸಿಕೊಡುವುದಿಲ್ಲ...." ಎಂದೆ.

"ಭೇಷ್! ಒಳ್ಳೆಯ ಗುರಿ ನಿಮ್ಮದು! ನಾನು ನಿಮ್ಮ ಅಚ್ಚಾ
ಬರಹ ಓದಿದೆ. ಸ್ವತಂತ್ರವನ್ನುವಷ್ಟು ಚನ್ನಾಗಿ ಬಂದಿದೆ ಅನುವಾ
ಇಂತಹ ಒಳ್ಳೆಯ ಭಾಷೆ ಬರೆಯೋ ನಿಮಗೆ ಪರೀಕ್ಷೆ ನೀರು ಕುಡಿದ ಹಾಗೆ!

"ಒಳ್ಳೆಯ ಭಾಷೆ ಇದ್ದ ಮಾತ್ರಕ್ಕೆ ಪರೀಕ್ಷೇಲಿ ಬೇಳೆಕಾಳು ಬೇಯೊ
ಮೈ ಬಗ್ಗಿಸಿ ಓದಬೇಕು. ಅದು ನನ್ನಿಂದ ಆಗದ ಕೆಲಸ. ಇನ
ನಿಮ್ಮಂಥಹವರಿಗೆ ಆನಾತು ಅಂದ್ರೆ ಸರಿಹೋದೀತು!"

'ಆಕೆ' ನಗುತ್ತಲೆಂದಳು "ಆಹಾ! ನಾನು ಓದೋದನ್ನ ಅದೇನ
ಕೇಳ್ತೀರಿ? ಆದರೆ ನಾನೊಂದು ಅಭ್ಯಾಸ ಇಟ್ಟುಕೊಂಡಿದ್ದೇನೆ ಮೊದಲಿನಿಂದ
ಅಂದಿನ ಓದನ್ನು ಅಂದಂದೆ ಓದಿ ಮುಗಿಸುತ್ತೇನೆ. ಪರೀಕ್ಷೆ ಇಲ್ಲವೆಂದ
ಪುಸ್ತಕಾನ್ನ ಮೂಲೆಗೆ ತಳ್ಳೊಲ್ಲ. ಇದೆ ಅಂತ ಮೂರೊತ್ತೂ ಅದನ
ಕಣ್ಮುಂದೆ ಇಟ್ಟುಕೊಂಡು ಕೂತುಕೊಳ್ಳೊಲ್ಲ.... ನಿಮ್ಮ ಓದು ಹೇಗೆ ಸಾಗಿದೆ?

"ಹೀಗೆಯೇ ಕಾಲು ಕುಂಟಿಕೊಂಡು ಸಾಗುವಂತೆ ಅದೂ ಡೊಗ್ಗಾಲೂ
ಕೊಂಡು ನಡೆದಿದೆ.... ನಿಮಗೇನು ಹೆಂಗಸರು. ಬೇರೆ ಕೆಲಸವಿಲ್ಲ. ನಮ್
ಹಾಗೆ ಸಿಕ್ಕಿದಂತೆ ಅಲೆಯೋದಿಲ್ಲ. ನೀವಾಯಿತು ನಿಮ್ಮ ಓದಾಯಿತು
ನೀವು ಹೇಗೋ ದಾಟಿಕೊಳ್ಳುತ್ತೀರಿ. ಇನ್ನು ಫೇಲಾಗುವ ಹಾಗಿದ್ದರೆ ಅದು
ಹುಡುಗರು! .... ನಿಮ್ಮ ಓದು ಹೇಗೆ ಸಾಗಿದೆ?"

"ಅಂತಹ ಸನ್ನಾಹವೇನೂ ನಡೆದಿಲ್ಲ. 'ಟೆಕ್ಸ್ಟ ಬುಕ್ಸ್'ನ ಚನ್ನಾಗಿ
ಓದುತ್ತಿದ್ದೇನೆ, ಯಾಕೆ 'ರಿಸ್ಕ್' (ತೊಂದರೆ) ಅಂತ. ಅಂದ ಹಾಗೆ
ಕಾಮೇಶ್ ಹೇಳಿದ. ನಿಮಗೆ, ಹಾಸ್ಟಲಿನಲ್ಲಿರೋರಿಗೆ ಪ್ರಶ್ನೆಗಳು ಗೊತ್ತಾ
ಗುತ್ತೇಂತ. ಹೌದೇನು? .... ಹಾಗೇನಾದ್ರೂ ಗೊತ್ತಾದರೆ.... ನಮ್ಮ
ಕಿವೀಗೂ ಹಾಕ್ತೀರಿ ತಾನೆ? ನಿಮ್ಮ ಹಾಗೆ ನಮಗೆ ಯಾರು ಹೇಳುತ್ತಾರೆ?"

"ಅದೆಲ್ಲಾ 'ಬೂಸಿ' ಮಾತುಗಳು. ಬರೀ ಬುರುಡೆ. ಅದನ್ನೆಲ್ಲಾ
ನಂಬಾರ್ದು" ಎಂದೆ.

ನಮ್ಮ ಮಾತು ಸಾಹಿತ್ಯದ ಕಡೆ ತಿರುಗಿತು. ಅಪ್ರೊಡೈಟಗೆ ಸಾಹಿತ್ಯದಲ್ಲಿ
ತೀವ್ರಾಸಕ್ತಿ. ಆಕೆ ಹುಡುಗಿಯಾಗಿರುವಾಗಲೇ ಆಕೆಯ ತಂದೆ ಓದುವ

ಚಟವನ್ನು ಹತ್ತಿಸಿದ್ದರು. ಅವರ ಮನೆಯಲ್ಲಿ ಸಣ್ಣದೊಂದು ಲೈಬ್ರರಿ ಇತ್ತು. ತಂದೆಯೇ ಮಗಳಿಗೆ ಹಿಂದಿಯನ್ನು ಕಲಿಸಿದ್ದರು. ಹಿಂದಿ, ಕನ್ನಡ ಪುಸ್ತಕಗಳನ್ನು ಕಂಡರೆ ಆಕೆಗೆ ಪ್ರಾಣ. 'ಆಕೆ' ಇಂಗ್ಲೀಷ್ ಪುಸ್ತಕಗಳನ್ನು ಹೆಚ್ಚಾಗಿ ಓದುವುದಿಲ್ಲ. ಕಾಲೇಜಿನ ಲೈಬ್ರರಿಗಳಲ್ಲಿ ದೊರೆಯುವ ಎಲ್ಲಾ ಹಿಂದಿ, ಕನ್ನಡ ಪುಸ್ತಕಗಳನ್ನು ಓದಿ ಮುಗಿಸಿದ್ದಾಳೆ ಆಕೆ!

ಅಪ್ರೊಡೈಟಿ ಅವರ ತಂದೆಗೆ ಎರಡನೆಯ ಮಗಳು. ಹಿರಿಯ ಹುಡುಗಿಗೆ ಮದುವೆಯಾಗಿ ಅತ್ತೆಯ ಮನೆಯಲ್ಲಿದ್ದಾಳೆ. ಕಿರಿಯ ತಮ್ಮನೊಬ್ಬ ಎಸ್.ಎಸ್.ಎಲ್.ಸಿಯಲ್ಲಿ ಓದುತ್ತಿದ್ದಾನೆ. ಆಕೆಯು 'ಚೂಟಿ'ಯಾಗಿದ್ದುದರಿಂದ ಅವಳನ್ನು ತಂದೆ ಬಿ.ಎ. ತನಕ ಓದಿಸಿದ್ದಾರೆ! ಆಕೆ ಒಂದು ತರಗತಿಯಲ್ಲೂ ಫೇಲಾಗಿಲ್ಲ. ಇಂಟರ್‌ನಲ್ಲಿ ಎರಡನೆಯ ದರ್ಜೆಯಲ್ಲಿ ಪಾಸಾಗಿದ್ದಾಳೆ. ಈ ಬಾರಿ ಬಿ.ಎ. ನಲ್ಲಿಯೂ ಕ್ಲಾಸನ್ನು ಗಿಟ್ಟಿಸುತ್ತಾಳೆ. ಮುಂದೆ ಎಂ.ಎ. ಓದುವ ಆಸೆ ಇದೆ. ಆದರೆ ಅದಕ್ಕೆ ತಂದೆಯವರ ಒಪ್ಪಿಗೆ ಬೇಕು. ತಂದೆಗೆ ಬಿ.ಎ. ಸಾಕೆನಿಸಿದೆ. ಇದಕ್ಕೂ ಮುಂದೆ ಓದಿಸಿದರೆ ಮದುವೆಯ ಪ್ರಶ್ನೆ ತುಂಬಾ ತೊಡಕಾಗುವುದೆಂದು ಹೆದರಿಕೆ. ಆದರೂ ಅಪ್ರೊಡೈಟಿ ಮಹಾರಾಜಾ ಕಾಲೇಜಿನಲ್ಲಿ ಹಿಂದಿ ಎಂ.ಎ. ತರಗತಿ ನಡೆದರೆ – ಎಂ.ಎ. ಗೆ ಬಂದೇ ಬಿಡುತ್ತಾಳಂತೆ! ಯಾಕೆ ಬರಬಾರದು? ಮೈಸೂರಿನಲ್ಲಿ ಓದಿಗೆ ಅನುಕೂಲವಿದೆ. ಪ್ರೀತಿಯ ಅಜ್ಜಿ ಸೋದರತ್ತೆ ಇದ್ದಾರೆ.

ಆಕೆ ಇಷ್ಟು ಕಲಿತಿದ್ದರೂ ನಿರಾಡಂಬರ ವ್ಯಕ್ತಿ. ಆಕೆ ಸ್ವಭಾವತಃ ಮಾತುಗಾರಳಾದರೂ ಯಾರ ಜತೆಯಲ್ಲೂ ಅಷ್ಟಾಗಿ ಬೆರೆಯುವುದಿಲ್ಲ. ತಾನಾಯಿತು, ತನ್ನನ್ನು ಚನ್ನಾಗಿ ಅರ್ಥಮಾಡಿಕೊಂಡ ಗೆಳತಿಯರಾಯಿತು. ಸಂಜೆಯ ವಿರಾಮವನ್ನು ಗೆಳತಿಯರ ಮನೆಯಲ್ಲಿ ಕಳೆಯುತ್ತಾಳೆ.

"ನಿಮಗೆ ಜಿ....ಅವರು ಚನ್ನಾಗಿ ಗೊತ್ತೆ?"

"ಹೊಂ, ಕೊಂಚ ಪರಿಚಯವಿದೆ" ಎಂದೆ.

"ಮೊನ್ನೆ ಅವರೇ ಹೇಳಿದರು – ನೀವು ಮಿತ್ರಮೇಳದ ಉಪಾಧ್ಯಕ್ಷರೆಂದು. ನನಗೆ ಈತನಕ ಇದು ಗೊತ್ತೇ ಇರಲಿಲ್ಲ. ಮೊನ್ನೆ ನಡೆದ ವಾರ್ಷಿಕೋತ್ಸವ ಚನ್ನಾಗಿ ನಡೆಯಿತಾ?"

"ಹೂಂ, ಅದಕ್ಕೆ ನೀವು ಬರಬೇಕಾಗಿತ್ತು. ನಿಮಗೆ ಇಣವಿಟೇಷ ಕೊಡಲು ಗೆಳೆಯರಿಗೆ ಹೇಳಿದ್ದೆ. ನೀವು ಅವರಿಗೆ ಸಿಕ್ಕಲಿಲ್ಲವಂತೆ!"

ನನ್ನ ಮಾತು ಕೇಳಿ ಆಕೆ ತನ್ನ ಬಿಳಿಯ ಹಲ್ಲುಗಳು ಕಾಣುವಂತ 'ಪಕ್ಕನೆ' ನಕ್ಕುಬಿಟ್ಟಳು.

ನಮ್ಮ ಹರಟೆ ಹೀಗೆಯೇ ಸುಮಾರು ಒಂದು ಗಂಟೆಯ ತನಕ ನಡೆಯಿತು. ಆಕೆ ತನಗೆ ಬೇಕಾದ ಎಲ್ಲಾ ಸುದ್ದಿಯನ್ನು ಬಿಚ್ಚು ಮನಸ್ಸಿನಿಂದ ತಿಳಿದುಕೊಂಡಳು. ಅಷ್ಟೇ ಬಿಚ್ಚು ಮನಸ್ಸಿನಿಂದ ತನ್ನ ಸುದ್ದಿಯನ್ನೂ ತಿಳಿಸಿಕೊಟ್ಟಳು. ಆದರೆ ನಮ್ಮ ಸಂಭಾಷಣೆಯಲ್ಲಿ ತಾರಿಣಿಯ ವಿಷಯ ವಾಗಲೀ, ನಮ್ಮ ಮದುವೆಯ ವಿಷಯವಾಗಲೀ ತಲೆಹಾಕಲಿಲ್ಲ. ಒಂದೆರಡು ಬಾರಿ ಈ ವಿಷಯ ಮಾತಿನ ಮಧ್ಯೆ ನುಸುಳಿ ಬರುವುದರಲ್ಲಿತ್ತು. ಆದರೆ ನಾನು ಬೇಕೆಂದೇ ಆ ವಿಷಯವನ್ನು ಹಾರಿಸಿಬಿಟ್ಟಿದ್ದೆ. ನನ್ನ ಮಾತುಕತೆ ಆಕೆಯ ಮೇಲೆ ತುಂಬಾ ಪರಿಣಾಮಕಾರಿಯಾಗಿತ್ತು. ನನ್ನ ಬಗ್ಗೆ ಇದ್ದ ಎಲ್ಲ ತಪ್ಪು ಕಲ್ಪನೆ ಹಾರಿಹೋಗಿ ತುಂಬಾ ಆದರ, ಗೌರವ, ಆತ್ಮೀಯಭಾವನೆ ಆಕೆಯಲ್ಲಿ ಉಂಟಾಗಿತ್ತು. ನನ್ನೊಂದಿಗೆ ಇನ್ನಿಷ್ಟು ಮಾತನಾಡುತ್ತಾ ನಿಂತಿರಬೇಕೆನ್ನುವ ಆಸೆ ಆಕೆಗೆ. ನಾನು ಮೂರು ನಾಲ್ಕು ಬಾರಿ ಹೋಗಲು ಪ್ರಯತ್ನಿಸಿದರೂ ಆಕೆ ತನ್ನ ಮಾತನ್ನು ಮುಗಿಸಿರಲಿಲ್ಲ. ಮಾತನ್ನು ಎಳೆಯುತ್ತಲೇ ಇದ್ದಳು.

ಹಾಸ್ಟಲಿಗೆ ಬಂದನಂತರ ನಮ್ಮ ಸಂಭಾಷಣೆಯ ವರದಿಯನ್ನು ಗೆಳೆಯ ರಿಗೆ ಒಪ್ಪಿಸಿದೆ.

"ನೋಡಿ........ಆಕೆಯೊಡನೆ ಮಾತನಾಡಿದಾಗ ಆಕೆ ಅಪರಿಚಿತಳೆನ್ನುವ ಯಾವ ಭಾವನೆ ನನಗೆ ಬರಲಿಲ್ಲ. ಆಕೆಯೊಂದಿಗೆ, ಅಕ್ಕ ತಂಗಿಯರೊಡನೆ ಅಥವಾ ತೀರ ಸಮೀಪ ಬಂಧುಗಳೊಡನೆ ಮಾತನಾಡುವಷ್ಟು ಸಲಿಗೆಯಿಂದಲೇ ಮಾತನಾಡಿದೆ. ಆಕೆಯೊಂದಿಗೆ ಮಾತನಾಡುವುದು ಇದೇ ಎರಡನೆಯ ಬಾರಿಯಾದರೂ, ಆಕೆಯೊಡನೆ ನಾನು ಕಾವ್ಯ ಪ್ರಪಂಚದಲ್ಲಿ ಈ ಮೊದಲೇ ಹಲವಾರು ಬಾರಿ ವಿಹರಿಸಿದ್ದೆ. ಆಕೆಯೂ ನಿಮ್ಮೆಲ್ಲರಂತೆಯೇ ಆತ್ಮೀಯ ವ್ಯಕ್ತಿಯಾಗಿದ್ದಳು" ಎಂದೆ.

"ಅಂತೂ ನೀವು ಬಾಯಿಗೆ ತರಿಸೇಬಿಟ್ಟಿರಿ ಹೃದಯಾನ!" ಎಂದರು

ಬಾನಾಡಿ. "ಸುಮ್ಮನೆ ನಮ್ಮ ಮೇಲೆ ಮಿಥ್ಯಾರೋಪ....ಕಾಲೇಜಿನಲ್ಲೆಲ್ಲಾ ನಮ್ಮದೇ ಪ್ರತಾಪ ಅಂತ. ನೀವೇ ನಿಜವಾದ ರಸಿಕರು. ನಾವು ನಿಮ್ಮ ಮುಂದೆ ಸುಳ್ಳು" ಎಂದು ಗಹಗಹಿಸಿ ನುಡಿದರು.

"ಬಾಯಿಗೇನೋ ತರಿಸಿದ್ದಾಗಿದೆ. ನಾನಲ್ಲ – ಆಕೆ" ಎಂದೆ ವ್ಯಂಗ್ಯವಾಗಿ.

ಗೆಳೆಯ ಶ್ರೀಕಾಂತನ್ ನನ್ನ ಕೈಲಿದ್ದ ಪುಸ್ತಕಗಳನ್ನು ತೆಗೆದುಕೊಳ್ಳುತ್ತಾ ಹೇಳಿದರು.

"ನಿಮಗಿಂತಲೂ ಈ ಪುಸ್ತಕ ಎಷ್ಟೋ ಅದೃಷ್ಟಶಾಲಿ! ಆಕೆಯ ಸಾನ್ನಿಧ್ಯ, ಸಹವಾಸದಲ್ಲಿ ಪತ್ತೆಂಟು ದಿನ ಕಳೆದಿದೆ. ನಿಮಗೆ ಸಿಗದ ಪುರಸ್ಕಾರ, ಸುಖಸ್ಪರ್ಶ ಇದಕ್ಕೆ ಸಿಕ್ಕಿದೆ!"

ಅವರ ಮಾತನ್ನು ಕೇಳಿ ಗೆಳೆಯರೆಲ್ಲರೂ ನಕ್ಕರು.

"ನನಗೆ ಶಾಕುಂತಲಾ ನಾಟಕದಲ್ಲಿ ಒಂದು ಚರಣ ಮನಸ್ಸಿಗೆ ಬರುತ್ತಿದೆ. ಈ ನಿಮ್ಮ ಪುಸ್ತಕ ಇಲ್ಲಿ ಕೊಡಿ, ಒಂದು ಪದ್ಯ ಬರೆದುಕೊಡುತ್ತೇನೆ. ಈ ಪದ್ಯವನ್ನು ನೋಡಿದಾಗಲೆಲ್ಲಾ ನನ್ನ ಮತ್ತು ಅಪ್ರೊಡೈಟೆಯ ನೆನಪಾಗಲಿ ನಿಮಗೆ."

ಶ್ರೀಕಾಂತನ್ ಪುಸ್ತಕದಲ್ಲಿ ಹೀಗೆ ಬರೆದುಕೊಟ್ಟರು.

## ಓ ರೋಲಂಬ

ನಡುಕಂಬೆತ್ತಿರ್ಪಳಂ ಸೋಂಕುವೆಯಡಿಗಡಿಗಂ ಚೆಲ್ಲವೆತ್ತೋರೆನೋಟ
ಕ್ಕೆಡೆಯಾಗೇಕಾಂತಮಂ ಪೇಳ್ವವೊಲೆ ಜಿನುಗುತಿರ್ದಪ್ಪೆಕರ್ಣಾಂ
ತದೊಳ್ ಕೈ।
ಗೊಡುಹುತ್ತಿರ್ಪಬ್ಜಪತ್ರಾಕ್ಷಿಯ ನವರತಿ ಸರ್ವಸ್ವ ಬಿಂಬೋಷ್ಠ
ಮಂ ಮು
ದ್ದಿಡುವೈ ರೋಲಂಬ ನೀನೇ ಕೃತಿ ನಿಜವರಸುತ್ತಾವಣಂ ಕೆಟ್ಟೆವಲ್ತೇ॥



# ಗುಡ್ ಬೈ ಅಪ್ರೊಡೈಟಿ!

ಚರಿತ್ರೆಯ ಸಂಘದವರು, ಉಪಾಧ್ಯಾಯ ವರ್ಗ ಹಾಗೂ ವಿದ್ಯಾರ್ಥಿಗಳಿಗೆ ಒಂದು ಸಂತೋಷ ಕೂಟವನ್ನು ಏರ್ಪಡಿಸಿದ್ದರು. ಫೋಟೋ ಏರ್ಪಾಡೂ ಮಾಡಿದ್ದರು. ಅದಕ್ಕೆ ಕೆಲವು ಹುಡುಗಿಯರು ಬರಲಿರುವ ಸುದ್ದಿಯನ್ನು ಶ್ರೀಧರ್ ನನಗೆ ಕೊಡುತ್ತಾ ಹೀಗೆಂದರು.

"ನೋಡಿ, ಅಪ್ರೊಡೈಟಿಯೂ ಫೋಟೋಕ್ಕೆ ಬಂದರೆ ನಾವೆಲ್ಲ ಫೋಟೋಕ್ಕೆ ಹೋಗೋಣ. ನಾವೆಲ್ಲಾ ಒಟ್ಟಾಗಿರುವ ಫೋಟೋನಾದ್ರೂ ಇರುತ್ತೆ" ನಾನು ಈ ಬಗ್ಗೆ ಖಚಿತಪಡಿಸಿಕೊಳ್ಳಲು ಅಪ್ರೊಡೈಟಿಯನ್ನು ಕಂಡೆ.

ಅಪ್ರೊಡೈಟಿಗೆ ನಾನು ಬಂದುದಕ್ಕೆ ತುಂಬಾ ಹಿಗ್ಗು. ಪುಸ್ತಕ ತೆಗೆದು ಕೊಂಡು ಹೋದಮೇಲೆ ಬಹುಶಃ ನಾನು ಆಕೆಯನ್ನು ಮತ್ತೆ ಭೇಟಿಮಾಡು ವುದಿಲ್ಲ. ಇನ್ನು ಮತ್ತೆ ಒಬ್ಬರನ್ನೊಬ್ಬರು ಕಂಡು ಮಾತನಾಡುವಂತಿಲ್ಲ-ಎಂದು 'ಆಕೆ' ನಿರಾಶಳಾಗಿದ್ದಳು. ಆದರೆ ಆಕೆಯನ್ನು ನಾನು ಮತ್ತೆ ಕಂಡಾಗ ಆಕೆಗೆ ತುಂಬಾ ಸಂತೋಷ.

ಹಿಂದೊಮ್ಮೆ ಭೇಟಿಯಾದಾಗ 'ಆಕೆ' ನನಗೆ ಎಂತಹದೋ 'ನೋಟ್ಸ್' ತರಲು ಹೇಳಿದ್ದಳು. ಅದರ ನಿಮಿತ್ತದಿಂದಲಾದರೂ ತನ್ನನ್ನು ಮತ್ತೆ ಕಾಣಲಿ ಎಂದು. ಈಗ ಅದೇ ಕಾರಣವನ್ನು ನಾನು ಮುಂದುಮಾಡಿ ಕೊಂಡು ಅಪ್ರೊಡೈಟಿಯನ್ನು ಕಂಡೆ. ತಂದಿದ್ದ ಪುಸ್ತಕ ಕೊಟ್ಟು ನಾನು ಬಂದ ಉದ್ದಿಶ್ಯ ಆಕೆಗೆ ತಿಳಿಸಿದೆ.

"ನಾಳೆ ಚರಿತ್ರೆಯ ಸಂಘದವರು ಸಂತೋಷಕೂಟ ಏರ್ಪಡಿಸಿದ್ದಾರೆ. ಅದಕ್ಕೆ ನೀವೇನಾದರೂ ಬರುತ್ತೀರಾ ?"

"ಇಲ್ಲ...." ಎಂದಳು ಬಗ್ಗಿಸಿದ್ದ ತಲೆಯನ್ನು ಮೇಲಕ್ಕೆತ್ತಿ ಕೊರಳನ್ನು ಕೊಂಕಿಸುತ್ತಾ.

"ಯಾಕೆ ಬರಬಾರದು ? ಫೋಟೋ ಏರ್ಪಾಡು ಮಾಡಿದ್ದಾರೆ. ನಾವು

ಹೇಗೂ ಎರಡು ವರ್ಷಗಳು ಒಟ್ಟಿಗೆ ಕಳೆದಿದ್ದೇವೆ. ಇದರ ಸವಿ ನೆನಪಿಗಾಗಿ ಒಂದು ಫೋಟೋದಲ್ಲಾದರೂ ಒಟ್ಟಿಗೆ ಇರೋಣ. ಈ ವರ್ಷ ಕಳೆದಮೇಲೆ ನೀವೆಲ್ಲೋ ನಾವೆಲ್ಲೋ. ಆಗ ಫೋಟೋ ನೋಡಿ, ನಮ್ಮ ಕಾಲೇಜಿನ ದಿನಗಳನ್ನು ನೆನಪಿಗೆ ತಂದುಕೊಳ್ಳಬಹುದು" ಎಂದೆ.

ಈ ವಿಷಯವನ್ನು ಇಷ್ಟು ನೇರ ಕೇಳುವೆನೆಂದು ಆಕೆಗೆ ಅನಿಸಿರಲಿಲ್ಲ ವೆಂದು ತೋರುತ್ತೆ. ಯಾಕೆಂದರೆ ನನ್ನ ಮಾತನ್ನು ಕೇಳಿ 'ಆಕೆ' ಏನೂ ಹೇಳಲು ತೋಚದೆ ಕ್ಷಣಕಾಲ ಆಲೋಚಿಸಿ ಹೇಳಿದಳು.

"ಇಲ್ಲರೀ; ನಾನು ಸಮಾರಂಭಕ್ಕೆ ಬರಲಾರೆ! ನಾನೂ ನೀವೂ ಫೋಟೋದಲ್ಲಿರಬಹುದಿತ್ತು....ಆದರೆ ನೀವೇನೂ ತಿಳಿಯಬಾರದು. ನಾನು ಇದುವರೆಗೆ ಯಾವ ಸಮಾರಂಭಕ್ಕೂ ಬಾರದಿರುವ ವಿಷಯ ನಿಮಗೇ ಗೊತ್ತಿದೆ. ನನಗೆ ಅವು ಸೇರವು. ಹೀಗಾಗಿ ಯಾವ ಫೋಟೋಕ್ಕೂ ನಾನು ಕುಳಿತಿಲ್ಲ. ಇನ್ನು ಹೊಸದಾಗಿ ಈ ಸಮಾರಂಭಕ್ಕೆ ಬರಬೇಕು...ಆದರೆ ಎಂದೂ ಯಾವುದಕ್ಕೂ ಬಾರದವಳು ಇದಕ್ಕೆ ಬಂದರೆ ನನ್ನ ಗೆಳತಿಯರು ಏನಾದರೂ ತಪ್ಪು ತಿಳಿಯುತ್ತಾರೆ....ಅಲ್ಲದೆ ಮನೆಯವರ ಕಿವಿಗೆ ಈ ಸುದ್ದಿ ಬಿದ್ದರೆ.... ಅವರೂ ನನ್ನನ್ನು ಅನ್ಯಥಾ ಭಾವಿಸುತ್ತಾರೆ....ಆದುದರಿಂದ ಬೇಡ್ರೀ— ನಾನು ಬರುವುದು ಬೇಡ್ರಿ." ಆಕೆ ತುಂಬಾ ಸಂಕೋಚದಿಂದ ಹೇಳಿದಳು.

"ನೀವು ಬಾರದೆ ಹೋದರೆ ನಾನೂ, ನನ್ನ ಗೆಳೆಯರೂ ಅದಕ್ಕೆ ಹೋಗುವುದಿಲ್ಲ!" ಎಂದೆ ನಗುತ್ತಾ.

'ಆಕೆ' ಈಗ ದಿಙ್ಮೂಢಳಾದಳು.

"ಅದಕ್ಕೆ ಬರುವವರು ನೀವೊಬ್ಬರೇ ಅಲ್ಲ. ನಿಮ್ಮ ಗೆಳತಿಯರು ಕೆಲವರು ಬರುತ್ತಾರೆ. ಆಲೋಚಿಸಿ" ಎಂದೆ.

"ಆಗಲಿ ಯಾವುದನ್ನೂ ಆಲೋಚಿಸಿ ತಿಳಿಸುತ್ತೇನೆ. ಸಾಧ್ಯವಾದರೆ ಬರುತ್ತೇನೆ. ಒಂದು ವೇಳೆ ಬರಲು ಅನಾನುಕೂಲವಾದರೆ ನೀವೇನೂ ತಿಳಿಯಬಾರದು."

ಆದರೆ ಸಂತೋಷಕೂಟಕ್ಕೆ ಅಪ್ರೊಡೈಟ ಬರಲಿಲ್ಲ. ಫೋಟೋಕ್ಕೆ ನಾವಾರೂ ಹೋಗಲಿಲ್ಲ. ಆದರೂ ಸಮಾರಂಭ ನಿಲ್ಲಲಿಲ್ಲ!

ಈಗ ಪರೀಕ್ಷೆಗೆ ಕೆಲವೇ ದಿನಗಳು ಉಳಿದಿವೆ. ಕಾಲೇಜು ಹಾಸ್ಟಲಿನಲ್ಲಿ

ಈಗ ಓದಿನ ಭರಾಟೆ ಹೇಳತೀರದು. ಯಾರ ಕೈಯಲ್ಲಿ ನೋಡಿದರು ಪುಸ್ತಕ. ಯಾರ ಬಾಯಲ್ಲಿ ಕೇಳಿದರೂ 'ಪರೀಕ್ಷೆಗೆ ಓದು ಸಾಲದು... ಏನಾಗುತ್ತೊ ಏನೋ' ....ಇವೇ ಮೊದಲಾದ ಮಾತುಗಳು. ಹಣಕೊಟ್ಟು 'ಪ್ರಬಂಧ'ಗಳನ್ನು ಬರೆಯಿಸಿಕೊಂಡ ವಿದ್ಯಾರ್ಥಿಗಳಿಗೂ, ಪ್ರಶ್ನೆಗಳನ್ನು ತಿಳಿದುಕೊಂಡು ಅವುಗಳಿಗೆ ಸಿದ್ಧಪಡಿಸಿದ ಉತ್ತರಗಳನ್ನು 'ಉರುಹಾಕಲು' ತೊಡಗಿರುವ ವಿದ್ಯಾರ್ಥಿಗಳಿಗೂ ಉಸಿರಾಡಲೂ ಸಮಯವಿಲ್ಲ! ಹಗಲೂ ರಾತ್ರಿ ತಮ್ಮ ಕೋಣೆಯ ಕದವಿಕ್ಕಿಕೊಂಡು ಓದಿದ್ದನ್ನೇ ಮತ್ತೆ ಮತ್ತೆ ಓದುವರು — ಓದಿ ಓದಿ ಮರುಳಾದ ಕೂಚಭಟ್ಟರಂತೆ! ಅಂತಹವರ ಪೈಕಿ ಕಾಮಣ್ಣನೂ ಒಬ್ಬ. ಅವನದು ಖಾಲಿ ಬುರುಡೆ. ಮಾತು ಬಹಳ. ಒಳಗೆಲ್ಲಾ ಹುಳುಕಾಗಿದ್ದರೂ ಮೇಲೆಲ್ಲಾ ಥಳುಕು. ಸಿಗರೇಟಿಗೆ ಕಾಸಿಲ್ಲದೆ ನಮ್ಮನ್ನು ತಿರುಪೆ ಬೇಡುತ್ತಿದ್ದರೂ ಅವನು ಹಾಕುತ್ತಿದ್ದುದು 'ಗ್ಯಾಬರ್‌ಡೀನ್ ಸೂಟು.' ಮುಖಕ್ಕೆ ಪಚ್ಚುವುದು ಬೂದಿಯೇ! ಬಾಯಲ್ಲಿ ಬೆಂಕಿಯಾರದ ಸಿಗರೇಟೇ....ತನ್ನ ಅಂತರಂಗದ ದುರ್ಗಂಧವನ್ನೆಲ್ಲಾ ಮುಚ್ಚಲು ಪರಿಮಳದ ದ್ರವ್ಯವೇ ಬೇಕು! ಮಾವ ಕೊಡುತ್ತಿದ್ದ ಕಾಸು ಹೀಗೆ ಪೋಲಾಗಿ ತಿಂಗಳ ಕೊನೆಯಲ್ಲಿ ಕಾಫಿಗೆ ಕಾಸಿಲ್ಲದೆ ನಮ್ಮ ಮುಂದೆಲ್ಲಾ ತನ್ನ ಭಿಕ್ಷಾಪಾತ್ರೆ ಹಿಡಿಯುತ್ತಿದ್ದ. ಇವನು ವರ್ಷದ ಆರಂಭದಿಂದಲೂ ಹುಡುಗಿಯರನ್ನು ರೇಗಿಸುವುದು, ಹೋಟಲು ಸಿನಿಮಾ ಎಂದೇ ಕಳೆದಿದ್ದ. ಈಗ ಪರೀಕ್ಷೆಯ ಹೊತ್ತಿನಲ್ಲಿ ಅಪ್ಪನ ಪ್ರಾಣ ಹಿಂಡಿ ಹಣ ತರಿಸಿ, ಯಾರಿಗೋ ಅದನ್ನು ಹಣ್ಣುಕಾಯಿ ಸಮೇತ ಒಯ್ದು, ಅವರಿಂದ ಎಂಟು ಹತ್ತು 'ಪ್ರಬಂಧ' ಗಳನ್ನು ಬರೆಯಿಸಿಕೊಂಡು ಈಗ ಅವನ್ನು ಆಮೂಲಾಗ್ರವಾಗಿ ನುಂಗಲು ನೋಡುತ್ತಿದ್ದ.

ಮೊದಲು ಮೊದಲು ಇವನು ನಮ್ಮೊಡನೆ ಬಾಯಿ ತುಂಬಾ ಹರಟುತ್ತಿದ್ದ. ಆದರೆ 'ಪ್ರಬಂಧ'ಗಳು ಅವನ ಕೈಸೇರಿದ ದಿನದಿಂದ ನಮ್ಮೊಡನೆ ಮಾತೇ ಬಿಟ್ಟುಬಿಟ್ಟ! – ಮಾತನಾಡಿಸಿದರೆ ಎಲ್ಲಿ ನನಗೆ ತೋರಿಸಬೇಕಾಗುತ್ತೊ, ಎಲ್ಲಿ ನಾವು ಪುಕ್ಕಟೆ ಉಪಯೋಗಿಸಿಕೊಳ್ಳುತ್ತೇವೋ ಎಂದು. ಆದರೆ ಅವನನ್ನು ಕೇಳುವವರಾರು? ಆತ್ಮಗೌರವವಿಲ್ಲದ ವಿದ್ಯಾರ್ಥಿ ಕೇಳಬೇಕು. ನಾವು ಯಾರೂ ಈ ಬಗ್ಗೆ ಪ್ರಸ್ತಾಪಿಸಲೇ ಇಲ್ಲ. ಅದರ ಬದಲು

ಅವನ ಮುಂದೆಯೇ ಉದ್‌ಗ್ರಂಥಗಳಿಂದ ಆರಿಸಿಕೊಂಡಿದ್ದ ವಾಕ್ಯದ ಸಾಲು ಗಳನ್ನು ಒದರುತ್ತಿದ್ದೆವು. ಇದರಿಂದ ಅವನ ಹೆಮ್ಮೆ ಇಳಿಯುತ್ತಿತ್ತು. ನಮ್ಮ ಈ 'ಕಾಟ'ವನ್ನು ಸಹಿಸಲಾರದೆ ಅವನು ಒಂದು ಸಾರಿ "ನಿಮ್ಮ ದಮ್ಮಯ್ಯ ...... ದಯವಿಟ್ಟು ನನಗೆ ಬರುವುದು ಮರೆಯುವಂತೆ ಮಾಡಬೇಡಿ" ಎಂದು ಗೋಗರೆದ.

ಕಾಮಣ್ಣ ನನಗೆ 'ರೇಡಿಯೋ' ಅಂತಲೂ, ಅಪ್ರೊಡೈಟಗೆ 'ರಿಕಾರ್ಡ್' ಅಂತಲೂ ಹೆಸರಿಟ್ಟದ್ದ. ನಾನು ಕಿವಿ ತಿರುಗಿಸಿದೊಡನೆಯೇ ಹಾಡಬಲ್ಲ ರೇಡಿಯೋ ಅಂತೆ. ಅಪ್ರೊಡೈಟ ಪಠ್ಯ ಪುಸ್ತಕಗಳನ್ನು ಓದಿಓದಿ ನಾಲಿಗೆಯಲ್ಲಿ ರಿಕಾರ್ಡು ಮಾಡಿದ್ದಾಳಂತೆ! 'ಕೀ' ಕೊಟ್ಟೊಡನೆಯೇ ಹಾಡಬಲ್ಲಳಂತೆ!

ಕಾಮಣ್ಣ ಪರೋಕ್ಷವಾಗಿ ನನಗೆ ಉತ್ತೇಜಕ ವ್ಯಕ್ತಿಯಾಗಿದ್ದ. ಅವನು ನನ್ನ ಮುಂದೆ ಅಪ್ರೊಡೈಟಯ ಬುದ್ಧಿವಂತಿಕೆ, ಹಿರಿಯತನಗಳನ್ನು ಬಾಯಿ ತುಂಬಾ ವರ್ಣಿಸುತ್ತಿದ್ದ. ಆಕೆಯು ಈ ಬಾರಿಯೂ ಎರಡನೆಯ ದರ್ಜೆ ಗಿಟ್ಟಿಸುತ್ತಾಳೆ. ಯಾವುದಾದರೂ 'ಸಬ್ಜೆಕ್ಟ್'ನಲ್ಲಿ ಪದಕ ಹೊಡೆಯು ತ್ತಾಳೆ ಎಂದು ಏನೇನೋ ಹೇಳುತ್ತಿದ್ದ. ಅಪ್ರೊಡೈಟ ಎರಡನೆಯ ದರ್ಜೆ ಯಲ್ಲಿ ತೇರ್ಗಡೆಯಾಗುವಾಗ ನಾನು ಫೇಲಾದರೆ ತುಂಬಾ ನಾಚಿಕೆಕೇಡು. ಏನೇ ಆಗಲಿ ನಾನೂ 'ಪಾಸು' ಮಾಡಿ ನನ್ನ ಯೋಗ್ಯತೆ ಕಾಯ್ದುಕೊಳ್ಳ ಬೇಕು ಎನ್ನುವ ಹುಮ್ಮಸ್ಸು ನನಗುಂಟಾಗುತ್ತಿತ್ತು.

ಅವನು ನನ್ನ ಮತ್ತು ಅಪ್ರೊಡೈಟಯ ಸಂಬಂಧವನ್ನು ಸಂಶಯ ದೃಷ್ಟಿ ಯಿಂದಲೇ ನೋಡುತ್ತಿದ್ದ. ನಾವು ಪರಸ್ಪರ ಪರಿಚಿತರಿದ್ದಾಗ್ಯೂ, ಸಂಬಂಧೀಕ ರಿದ್ದಾಗ್ಯೂ (?) ನಾವು ಕಾಲೇಜಿನಲ್ಲೇಕೆ ಪರಸ್ಪರ ಭೇಟಿಯಾಗುವುದಿಲ್ಲ ಎಂಬುದು ಅವನಿಗೆ ತಿಳಿಯದ ಒಗಟಾಗಿತ್ತು. ಆ ಬಗ್ಗೆ ನಾನು ಕೊಟ್ಟಿದ್ದ ವಿವರಣೆ ಅವನಿಗೆ ಸಾಲದಿತ್ತು. ತನ್ನಂತಹವನಿಗೆ ಅಂಥ ಸಂಬಂಧ ಒಂದಿದ್ದರೆ! ....ಎಂದುಕೊಳ್ಳುತ್ತಿದ್ದ. ನಮ್ಮಿಬ್ಬರ ಆಂತರ್ಯವನ್ನು ತಿಳಿದುಕೊಳ್ಳಲು ಅವನು ಪದೇ ಪದೇ ಕೆಣಕಿ ನೋಡುತ್ತಿದ್ದ.

ಒಂದು ದಿನ ಮಾತಿನ ಭರದಲ್ಲಿ ನುಡಿದೆ.

"ನಾನು ಮದುವೆಯಾಗುವುದಾದರೆ ಶ್ರೀಮತಿಯಂತಹವಳನ್ನೇ ಮದುವೆ ಯಾಗುತ್ತೇನೆ".

ಆಗ ಅಲ್ಲಿದ್ದ ಕಾಮಣ್ಣ "ಆಗುವುದಾದರೆ ಯಾಕೆ ಶ್ರೀಮತಿಯನ್ನ ಮದುವೆಯಾಗಬಾರದು. ಹೇಗೂ ಆಕೆ ನಿಮ್ಮ ದೂರದ ಸಂಬಂಧಿ ಎಂದು ಹೇಳುತ್ತಿದ್ದೀರಿ. ಈಗ ಹತ್ತಿರದ ಸಂಬಂಧ ಬೆಳೆಸಬಹುದಲ್ಲಾ........ಆ ತುಂಬಾ ಒಳ್ಳೆಯ ಹುಡುಗಿ. ನಿಮ್ಮ ಪ್ರಕೃತಿಗೆ ಸರಿಹೋಗುವ ಹುಡುಗಿ ಎಂದು ನುಡಿದ.

ನಾನು ಯಾವ ಉತ್ತರವನ್ನೂ ಕೊಡದೆ ನಗುವಿನಲ್ಲಿ ವಿಷಯವನ್ನು ಮರೆಸಿಬಿಟ್ಟೆ. ಆದರೆ ಅವನ ಮಾತು ನಡೆಯಬಾರದೆ? ಎಂದುಕೊಳ್ಳದೆ ಇರಲಿಲ್ಲ.

ಪರೀಕ್ಷೆಗಳು ನಾಗಾಲೋಟದಿಂದ ಹತ್ತಿರ ಬರುತ್ತಿವೆ. ನಾಲ್ವರು ಗೆಳೆಯರು ತುಂಬಾ ಹುರುಪಿನಿಂದ ಓದತೊಡಗಿದ್ದೇವೆ. 'ಮಿತ್ರಮೇಳದ ದೆಸೆಯಿಂದ, ನಮ್ಮ ಅಭ್ಯಾಸ ಸಾಲದೆ ಮುಗ್ಗರಿಸಿದೆವು' — ಎಂಬಂತಾಗ ಬಾರದು ಎಂದು ಗೆಳೆಯರು ಪುಸ್ತಕದಿಂದ ಕಣ್ಣು ಕೀಳಲಿಲ್ಲ. ಬಾನಾಡಿ ಮತ್ತು ಶ್ರೀಧರ್ ಕಣ್ಣು ಬಾಡಿ, ಮಂಜಾಗುವತನಕ ಕೂತಲ್ಲಿಂದ ಕದಲುತ್ತಿಲ್ಲ. ವರ್ಷದ ಆದಿಯಿಂದ ಅವರು ಅಭ್ಯಾಸವನ್ನು ಒತ್ತಟ್ಟಿಗಿರಿಸಿ, ಉಳಿದ ಚಟುವಟಿಕೆ ಗಳ ಬೆನ್ನು ಹತ್ತಿದ್ದರು. ಈಗ ಪ್ರತಿಯೊಂದು 'ಸಬ್ಜಕ್ಟ್'ಗಳೂ ಅವರ ಭಾಗಕ್ಕೆ ಉಪನಿಷದ್ವಾಕ್ಯಗಳಷ್ಟೇ ನಿಗೂಢ! ಆದರೆ ದೇಹಶ್ರಮವನ್ನು ಲೆಕ್ಕಿಸದೆ ಅವರು ಓದತೊಡಗಿದ್ದರು. ಈಗ – ಪರೀಕ್ಷೆಗಳು ಮೂರೇ ದಿನಗಳಿವೆ ಎನ್ನು ವಾಗ – ಅದೃಷ್ಟ ನೆಟ್ಟಗಿದ್ದರೆ ಆಗಿರುವ ಅಭ್ಯಾಸದಿಂದ ಪಾಸಾದೇವು! ಎನ್ನುವ ಆತ್ಮವಿಶ್ವಾಸ ಬಂದಿತ್ತು.

ಅದೇ ಹೊತ್ತಿನಲ್ಲಿ ನನಗೆ ವಿಚಿತ್ರರೀತಿಯ ಭಯ – ನನ್ನ ಕೈ ಬರಹ ಪರೀಕ್ಷಕರಿಗೆ ಅರ್ಥವಾಗದೆ – ಫೇಲಾಗುವ ಭಯ ಕಾಣಿಸಿಕೊಂಡಿತು. 'ನನ್ನ ಕೈ ಬರಹ ಮೊದಲಿನಿಂದಲೂ ಅಧ್ವಾನ' – ಎಂದು ನಮ್ಮ ತಂದೆಯವರು ತೀರ್ಪುಕೊಟ್ಟಿದ್ದರು. ವಾಸ್ತವಾಂಶವೂ ಹಾಗೆಯೇ ಇತ್ತು. ಸಾಮಾನ್ಯ ವಾಗಿ ನಾನು ಬರವಣಿಗೆಯ ಕೆಲಸಕ್ಕೆಲ್ಲಾ ಸೀಸದ ಕಡ್ಡಿಯನ್ನೇ ಉಪಯೋಗಿ ಸುತ್ತಿದ್ದೆ. ನಾನು ಎರಡು ವರ್ಷಗಳನ್ನು ಕಾಲೇಜಿನಲ್ಲಿ ಕಳೆದಿದ್ದರೂ, ನಾಲ್ಕೆಂಟು ಪುಟಗಳಿಗಿಂತ ಹೆಚ್ಚಿಗೆ 'ಶಾಯಿ'ಯಲ್ಲಿ ಬರೆದಿರಲಿಲ್ಲ. ಪರೀಕ್ಷೆಯ ಹೊತ್ತಿನಲ್ಲಿ 'ಪುಣ್ಯಾತ್ಮರಾದ' ಗೆಳೆಯರು ಬಿಟ್ಟುಹೋಗಿದ್ದ 'ನೋಟ್ಸ್'

ಗಳನ್ನು ತಿರುವುತ್ತಿದ್ದೆ. ಅಷ್ಟನ್ನೇ ಓದಿ ತೇರ್ಗಡೆ ಹೊಂದುವ ಧೈರ್ಯ ನನ್ನದು!

ಆದರೆ ನಾನು ಎದೆಗುಂದದೆ, ಇದ್ದ ಮೂರು ದಿನಗಳ ಅವಧಿಯಲ್ಲೇ 'ಪೆನ್ನಾಯುಧ'ವನ್ನು ಪರೀಕ್ಷಾ ಸಮರದಲ್ಲಿ ಉಪಯೋಗಿಸುವ ಕಲೆಯಲ್ಲಿ ಪಾರಂಗತನಾಗಲು ನಿಶ್ಚಯಿಸಿದೆ. ಎಲ್ಲಾ ವಿದ್ಯಾರ್ಥಿಗಳು ಓದಲು ಹೊತ್ತು ಸಾಲದೆಂದು ಒದ್ದಾಡುತ್ತಿರುವಾಗ ನಾನು 'ಪೆನ್ನಿ'ನೊಂದಿಗೆ ಗುದ್ದಾಡುತ್ತಿದ್ದೆ. ಪಳಗದ ಕುದುರೆಯನ್ನು ಪಳಗಿಸುವಂತೆ ನನ್ನ ಪ್ರಯತ್ನ ಸಾಗಿತ್ತು. ಮೂರು ದಿನಗಳಲ್ಲಿ ನೂರು ಪುಟಗಳಷ್ಟು 'ಕಾಪಿ' ಬರೆದು, ಓದಬಲ್ಲ ಲಿಪಿಯನ್ನು ಸಿದ್ಧಗೊಳಿಸಿದೆ. ನನ್ನ ಈ ಶ್ರಮ ನಿರರ್ಥಕವಾಗಲಿಲ್ಲ. ನಾನು ಮನೆಯಲ್ಲಿ ಬರೆಯುತ್ತಿದ್ದ ಪ್ರಬಂಧಗಳೇ ಪರೀಕ್ಷೆಯಲ್ಲಿ ಧರ್ಮಕರ್ಮ ಸಂಯೋಗದಿಂದ ಬಂದಿತ್ತು. ಅಂತೂ 'ಇಂಗ್ಲಿಷ್' ನಲ್ಲಿ ಪಾಸಾಗುವಷ್ಟು ಗಣ ದಕ್ಕಿಸಿಕೊಂಡೆ!

ಆದರೆ ಪರೀಕ್ಷೆಯ ಮೊದಲನೆಯ ದಿನವೇ ಶ್ರೀಧರ್ ತಾನು ಓದಿದ್ದನ್ನೆಲ್ಲಾ ಮರೆತುಕೊಂಡು ಪರೀಕ್ಷೆಯಲ್ಲಿ ಚನ್ನಾಗಿ ಬರೆಯಲು ಅಸಮರ್ಥರಾದರು.

ಕನ್ನಡದ ದಿನ ನಮ್ಮದು ಒಂದು ರೀತಿಯ ದುರಂತ. ನಾವು ನಾಲ್ವರು ಗೆಳೆಯರು ಕನ್ನಡದಲ್ಲಿ ಅತಿರಥಮಹಾರಥರೆಂದೇ ನಮ್ಮ ಕಲ್ಪನೆ. ಕನ್ನಡ ಏನು ಮಹಾ! ಪರೀಕ್ಷಾ ದಿನವೇ ಓದಿ ಪಾಸುಮಾಡಬಲ್ಲೆವು ಎನ್ನುವ ಸೊಕ್ಕು ಎಲ್ಲರಿಗಿಂತಲೂ ಹೆಚ್ಚು ನನಗಿತ್ತು. ಹೀಗಾಗಿ ಪರೀಕ್ಷೆಯ ದಿನದವರೆಗೂ ಒಂದು ಬಾರಿಯೂ ಕನ್ನಡದ ಪಠ್ಯಪುಸ್ತಕಗಳನ್ನು ತೆರೆದು ನೋಡಿರಲಿಲ್ಲ.

ಹಿಂದಣದಿನ ಇಂಗ್ಲೀಷಿನಲ್ಲಿ ಚನ್ನಾಗಿ ಮಾಡಿದ್ದೆ. ಇದರಿಂದ ಮನಸ್ಸು ಉಲ್ಲಾಸಗೊಂಡಿತ್ತು. ಇದ್ದ ವಿರಾಮವನ್ನೆಲ್ಲಾ ಸುತ್ತಾಟದಲ್ಲಿ ಕಳೆದುಬಿಟ್ಟೆ. ರಾತ್ರಿ ಹೆಚ್ಚು ಹೊತ್ತು ಓದಲಾಗಲಿಲ್ಲ. ಬೆಳಗ್ಗೆ ಬೇಗನೆ ಎದ್ದರೂ ಮಧ್ಯಾಹ್ನದ ವೇಳೆಗೆ ಐದು ಪಠ್ಯಪುಸ್ತಕಗಳ ಪೈಕಿ ಮೂರನ್ನು ಓದಲು ಸಾಧ್ಯವಾಯಿತು. ಉಳಿದ ಎರಡು ಪುಸ್ತಕಗಳನ್ನು ಓದಲು ಸಾಧ್ಯವಾಗದೆ ಕನ್ನಡದಲ್ಲಿ ಪಾಸು ಮಾಡುವ ಆಸೆ ಕಡಿಮೆಯಾಗುತ್ತಾ ಬಂತು. ಹೇಗಾದರೂ ಪಾಸಾಗುವ

ಗಣಗಳನ್ನು ಗಿಟ್ಟಿಸಿಕೊಂಡು ಈ ಬಾರಿ ಪಾರಾಗಬೇಕು. ಕನ್ನಡದ
'ಫೇಲೆ'ಂದರೆ....ನನಗೇ ಅವಮಾನವಲ್ಲ—ಕನ್ನಡಕ್ಕೆ ಅವಮಾನ!

ಕನ್ನಡಮಾತೆ ನನ್ನಮೇಲೆ ಕನಿಕರಿಸಿದಳು. ಅದರಲ್ಲಿಯೂ ನಾನ
ಗೆದ್ದು ಬಂದೆ.

ಆದರೆ ಚರಿತ್ರೆಯ ದಿನ ಇದುವರೆಗೂ ಬೀಳದಿದ್ದ ಪೆಟ್ಟು ಬಿತ್ತು
ಮೊದಲದಿನ ಓದಿದುದೆಲ್ಲಾ ಮರೆತುಹೋದ ಕಾರಣ 'ಖಾಲಿ' ಹಾ
ಕೊಟ್ಟು ಬಂದು, ಉಳಿದ ಎರಡು ಪತ್ರಿಕೆಗಳಲ್ಲಿ ಹೆಚ್ಚು ಗಣ ತೆಗೆಯಲು
ರಾತ್ರಿಯೆಲ್ಲಾ ತಪಸ್ಸು ಮಾಡಬೇಕಾಯಿತು – 'ಚರಿತ್ರೆ'ಯ ಇತಿಹಾಸ
ದಿಂದ ಬುದ್ಧಿ ಕಲಿತ ನಾನು ಉಳಿದ ಪತ್ರಿಕೆಗಳಲ್ಲಿ ಚನ್ನಾಗಿ ಬರೆದು ಬಂದೆ.

ಪರೀಕ್ಷೆಯಲ್ಲಿ ನಾಲ್ವರು ಮಿತ್ರರಲ್ಲಿ ಒಬ್ಬೊಬ್ಬರದು ಒಂದೊಂದು
ಬಗೆಯಾಯಿತು. ಶ್ರೀಧರ್ ಇಂಗ್ಲೀಷಿನ ಜತೆಗೆ 'ಎಕನಾಮಿಕ್ಸ್' ನಲ್ಲಿಯೂ
ಕೈ ಸುಟ್ಟುಕೊಂಡರು. ಶ್ರೀಕಾಂತನ್ ಕೂಡ ಅಷ್ಟೇ. ಆತನಿಗೂ 'ಎಕ
ನಾಮಿಕ್ಸ್' ಬಿಸಿ ತಾಗಿಸಿತ್ತು. ಇನ್ನು ಬಾನಾಡಿಯದು – ಅದೊಂದು
ಕಥೆಯೇ ಆಯಿತು.

ಆ ದಿನ 'ಪಾಲಿಟಿಕ್ಸ್' ಪೇಪರ್. ಎರಡು ಗಂಟೆಗೆ ಇನ್ನು ಐದು
ಹತ್ತು ನಿಮಿಷಗಳಿವೆ. ಬಾನಾಡಿ ಓದು ಸಾಲದೆಂದು ಹತಾಶರಾಗಿ ಹಾಸಿಗೆಯ
ಮೇಲೆ ಮಲಗಿದ್ದರು. ಶ್ರೀಕಾಂತನ್ ಎಷ್ಟು ಬಲವಂತಮಾಡಿದರೂ ಬಾನಾಡಿ
ಮಲಗಿದೆಡೆಯಿಂದ ಕದಲಲಿಲ್ಲ.

ನಾನು ಬಂದಾಗ ಶ್ರೀಕಾಂತನ್ ಆಸೆಯಿಂದ ಕೂಡಿದ ದೃಷ್ಟಿಯಲ್ಲಿ
ನನ್ನನ್ನು ನೋಡಿದರು.

"ಪರೀಕ್ಷೆಗೆ ಬರುವುದಿಲ್ಲವೇ ಬಾನಾಡಿ?" ಎಂದೆ ನಾನು.

"ಬಂದು ಪ್ರಯೋಜನವಿಲ್ಲ. ರಾತ್ರಿ ಓದಿದ್ದೆಲ್ಲಾ ಕಲಬೆರಕೆಯಾಗಿ,
ಓದುವ ಮೊದಲು ತಲೆ ಹೇಗಿತ್ತೊ, ಈಗಲೂ ಹಾಗೆಯೇ ಇದೆ. ಇಂತಹದರಲ್ಲಿ
ಪರೀಕ್ಷೆಗೇಕೆ ಬರಬೇಕು? ನಿನ್ನೆಯೂ ಚನ್ನಾಗಿ ಮಾಡಲಿಲ್ಲ. ಚನ್ನಾಗಿ
ಮಾಡಿದ್ದರೆ ಒಂದಿಷ್ಟಾದರೂ ಆಸೆ ಇರುತ್ತಿತ್ತು" ಎಂದರು ನಡುಗುವ
ಧ್ವನಿಯಲ್ಲಿ ಬಾನಾಡಿ. ಅವರ ಆ ಕರುಣಾಜನಕವಾದ ಸ್ಥಿತಿಯನ್ನು ನೋಡಿ
ನನ್ನ ಕಣ್ಣಿನಿಂದ ಬಳಬಳನೆ ನೀರು ಬರದೆ ಇರಲಿಲ್ಲ.

"ನಿಮಗೆ ತೋಚಿದಷ್ಟು ಬರೆದು ಬನ್ನಿ" ಎಂದೆ.

"ಸುಮ್ಮನೆ ಯಾಕೆ ಬರಬೇಕು? ಅರ್ಧ ಗಂಟೆಗೆ ಎದ್ದು ಬರಲು. ಅದೊಂದು ಅವಮಾನ ಬೇರೆ........"

"ಅವಮಾನವೂ ಇಲ್ಲ – ಎಂಥದೂ ಇಲ್ಲ. ಹೋಗಲಿ, ಪ್ರಶ್ನಪತ್ರಿಕೆ ಯನ್ನಾದರೂ ತೆಗೆದುಕೊಳ್ಳಲು ಬರಬಾರದೆ?"

"ಅಷ್ಟಕ್ಕಾಗಿ ಬರಬೇಕೆ? ಪರೀಕ್ಷೆಯೇ ನೆಗೆದುಬೀಳುವಾಗ ಪ್ರಶ್ನ ಪತ್ರಿಕೆ ಯಾಕೆ?" ಎಂದು ಒಂದು ವಿಧವಾದ ಒಣನಗೆ ನಕ್ಕರು.

ಮಾತಿನಲ್ಲಿ ಹೊತ್ತು ಕಳೆಯಲು ಸಮಯವಲ್ಲ ಈಗ. ಇನ್ನೆಲ್ಲಾ ಮೂರು ನಾಲ್ಕು ನಿಮಿಷಗಳು ಉಳಿದಿವೆ. ನನಗೆ ಬೇಸರವಾಯಿತು. ಸಿಟ್ಟಿನ ಧ್ವನಿಯಲ್ಲಿ ಹೇಳಿದೆ.

"ಈಗ ಬರುತ್ತೀರೋ ಇಲ್ಲವೋ?"

ಬರುವುದಿಲ್ಲವೆಂದು ಬಾನಾಡಿ ತಲೆಯಲ್ಲಾಡಿಸಿದರು.

"ಹಾಗಾದರೆ ನಾನೂ ಪರೀಕ್ಷೆಗೆ ಹೋಗುವುದೇ ಇಲ್ಲ. ನನ್ನಿಂದ ತಾನೇ ನಿಮಗೆ ಇಷ್ಟೆಲ್ಲಾ ಆದುದು. ನನ್ನ ಚಿಂತೆಯಲ್ಲಿ ಅಕಾರಣವಾಗಿ ನೀವು ಬೆಂದಿರಿ. ನಾನು ಕಾಲು ಮುರಿದುಕೊಂಡು ಹಾಸಿಗೆ ಹಿಡಿದಾಗ ನನ್ನ ದೆಸೆಯಿಂದ ನಿಮಗೆ ಎಂಟು ಹತ್ತು ದಿನ ಪಾಠಹೋಯಿತು........ನಿಮಗಾ ದುದು ನನಗೂ ಆಗಲಿ". ನನಗೆ ದುಃಖ ಒತ್ತರಿಸಿಕೊಂಡು ಬಂತು. ಕಣ್ಣೀರು ಧಾರಾಪ್ರವಾಹವಾಗಿ ಹರಿಯಿತು.

ಬಾನಾಡಿಗೆ ನನ್ನ ಮಾತು ಸೇರಿತೆಂದು ತೋರುತ್ತದೆ. ಬೇಸರಪಟ್ಟು ಕೊಂಡು ಹಾಸಿಗೆಯಿಂದ ಎದ್ದರು. ತಲೆಯನ್ನು ಬಾಚಲಿಲ್ಲ. ಬಟ್ಟೆಯನ್ನು ಬದಲಿಸಲಿಲ್ಲ. ಪೆನ್ನಿಗೆ ಶಾಯಿಯಿದೆಯೋ ಇಲ್ಲವೋ ಅದನ್ನೂ ಗಮನಿಸಲಿಲ್ಲ.

"ಹೂಂ, ನಡೆಯಿರಿ" ಎಂದರು.

ಬಾನಾಡಿಯನ್ನು ಕಂಡವರೊಬ್ಬರು "ಯಾಕ್ರಿ ಹೀಗಿದ್ದೀರಿ! ರಾತ್ರಿ ಯೆಲ್ಲಾ ತುಂಬಾ ಓದಿರಬೇಕು. ಅಷ್ಟೆಲ್ಲಾ ಓದಿ ತಲೆಕೆಡಿಸಿಕೊಳ್ಳಬಾರದು" ಎಂದರು. ಮತ್ತೊಬ್ಬರು "ಯಾಕೆ ಮೈ ಸ್ವಸ್ಥವಿಲ್ಲವೇ?" ಎಂದರು.

"ಹೂಂ, ಹೌದು. ಮನಸ್ಸಿಗೆ ಸರಿಯಿಲ್ಲ" ಎಂದು ನಗುತ್ತಾ ಹೇಳಿದರು ಬಾನಾಡಿ.

ಅಂದಿನ ಪರೀಕ್ಷೆಯಲ್ಲಿ, ತಾವು ಊಹಿಸಿದ್ದಷ್ಟು ಕಠಿಣ ಪ್ರಶ್ನೆಗಳ ಬಾರದಿದ್ದುದರಿಂದ ಬಾನಾಡಿ ಸಾಕಷ್ಟು ಚನ್ನಾಗಿಯೇ ಬರೆದು ಬಂದರು ಮುಂದಿನ ಪರೀಕ್ಷೆಗಳಿಗೆ ಅವರು ತಪ್ಪಿಸಿಕೊಳ್ಳಲಿಲ್ಲ.

ಈ ಎಲ್ಲಾ ಗೆಳೆಯರ ಪಾಡು ಇಷ್ಟಾದರೆ ಕಾಮಣ್ಣನದು ಇನ್ನೂ ವಿಚಿತ್ರಕಥೆ:

ಅವನು ಮೊದಲನೆಯ ದಿನವೇ 'ಠಕ್ಕರ್' ತಿಂದ. ಅವನು ಬರೆಯಿಸಿದ್ದ ಪ್ರಬಂಧಗಳನ್ನು ಅವನು ಮರೆತುಬಿಟ್ಟು ಯಾರೋ ಪ್ರೊಫೆಸರರು ಬರೆಯಿಸಿದ್ದ ಪ್ರಬಂಧಗಳನ್ನು ನೆಚ್ಚಿಕೊಂಡು ಪರೀಕ್ಷೆಯಲ್ಲಿ ಬೇಸ್ತುಬಿದ್ದ.

ಚರಿತ್ರೆಯ ದಿನ ಅವನು ಪ್ರಶ್ನಪತ್ರಿಕೆಯನ್ನು ಕೈಗೆ ತೆಗೆದುಕೊಂಡು ಅರ್ಧ ಗಂಟೆಯವರೆಗೆ ಕೂತಿದ್ದು ಶ್ರೀಮದ್ಗಾಂಭೀರ್ಯದಿಂದ ಪರೀಕ್ಷಾ ಮಂದಿರದಿಂದ ಎದ್ದು ಬಂದುಬಿಟ್ಟ. ಫೇಲಿನ ಪೋಷಾಕನ್ನು ಸಂತೋಷ ದಿಂದ, ಸ್ವಹಸ್ತದಿಂದಲೇ ಧರಿಸಿಕೊಂಡು, ತನ್ನ ಅಲಂಕಾರಕ್ಕಾಗಿ ತಾನೇ ಹಿಗ್ಗಿದ!

ಪರಿಚಿತರ ಪೈಕಿ ಯಾವ ಹೊಡತಕ್ಕೂ ಸಿಕ್ಕದೆ ತಪ್ಪಿಸಿಕೊಂಡ ವ್ಯಕ್ತಿ ಯೆಂದರೆ ಅಪ್ರೊಡೈಟ. ಆಕೆ ಎಲ್ಲದರಲ್ಲಿಯೂ ಚನ್ನಾಗಿ ಬರೆದು ಬಂದಿದ್ದಳು. ಆದರೂ ಚರಿತ್ರೆಯ ದಿನ 'ರೋಮನ್ ಕಾನ್ಸ್ಟಿಟ್ಯೂಷನ್' ಕೇಳಿದ್ದರೆ ಆಕೆ 'ಗ್ರೀಸ್ ಕಾನ್ಸ್ಟಿಟ್ಯೂಷನ್' ಬರೆದುಬಿಟ್ಟಿದ್ದಳು! ಇನ್ನು ಆಕೆಯ ಗೆಳತಿ— ಸುಲೋಚನದಾಕೆ—ಇಂಗ್ಲೀಷಿನಲ್ಲಿ ಅಷ್ಟು ಚನ್ನಾಗಿ ಮಾಡಲಿಲ್ಲವಂತೆ!

"ನೋಡ್ರಿ ನನ್ನ 'ಫ್ರೆಂಡ್' ಯಾರದೋ 'ಪ್ರಬಂಧ' ತಂದು ಉರು ಹಾಕಿಬಿಟ್ಟಿದ್ದಳು ......ಅದೇ ಬರುತ್ತೆ. ನೂರಕ್ಕೆ ನೂರು ನಂಬರು, ತನ್ನ ದೆಂದುಕೊಂಡಿದ್ದಳು. ಆದರೆ ಅದು ಬರಲೇ ಇಲ್ಲ. ಅವಳು ಆ ದಿನ ಅತ್ತು ಬಿಟ್ಟಳು ರೀ........" ಎಂದು ಅಪ್ರೊಡೈಟ ಹೇಳಿದಳು ಬಿದ್ದು ಬಿದ್ದು ನಗುತ್ತಾ.

ಅಂದು 'ಯೂರೋಪಿಯನ್' ಚರಿತ್ರೆ ಪೇಪರ್. ಆ ಹಿಂದಣ ರಾತ್ರಿ ಅಪ್ರೊಡೈಟಗೆ ಜ್ವರ ಬಂದಿತ್ತು. ಆದರೂ ಓದುವ ಆಸೆ! ಚರಿತ್ರೆಯ ಪುಸ್ತಕ ಆಕೆಯ ಹತ್ತಿರವಿರಲಿಲ್ಲ. ನನ್ನ ಹತ್ತಿರ ಪುಸ್ತಕವಿದ್ದರೆ, ನನ್ನ ಓದು ಮುಗಿ ಸಿದ್ದರೆ ಒಮ್ಮೆ ಕಳುಹಿಸಿಕೊಡಬೇಕೆಂದು ಕಾಮಣ್ಣನ ಕೈಲಿ ಹೇಳಿಕಳುಹಿಸಿದಳು. ಕಾಮಣ್ಣ ರಾತ್ರಿಯೇ ನನಗೆ ಈ ಸುದ್ದಿಕೊಟ್ಟ. ಆ ಹೊತ್ತಿಗೆ ಅದನ್ನೊಂದು

ಬಾರಿ ನಾನು ಓದಿದ್ದೆ. ಇಂತಹ ಹೊತ್ತಿನಲ್ಲಿ ಸಹಾಯಮಾಡದೆ ಹೋದರೆ! ಇನ್ನೆಂಥ ಗೆಳೆತನ ನಮ್ಮದು?........

ಆ ದಿನ ರಾತ್ರಿ ನಾನು ಶ್ರೀಧರ್ ಕೂಡಡಿಗೆ ಓದಿಕೊಳ್ಳಲು ಹೋಗುವವನಿದ್ದೆ. ದಾರಿಯಲ್ಲಿಯೇ ಅಪ್ರೊಡೈಟೆಯ ಮನೆ. ಹಾಗೆಯೇ ಕೊಟ್ಟು ಹೋಗಲು ನೋಡಿದೆ. ಆದರೆ ಆ ಅಪರಾತ್ರಿಯಲ್ಲಿ ಆಕೆಯನ್ನು ಕಾಣಬಯಸಿದರೆ ಆಕೆಯ ಮನೆಯವರು ಏನು ತಿಳಿಯುವರೋ ಎನ್ನುವ ಶಂಕೆ. ಕೊಡುವುದು 'ಬೇಡಾ' ಎಂದಿತು ಒಂದು ಮನಸ್ಸು. ಇನ್ನೊಂದು ಮನಸ್ಸು 'ಆಕೆಗೆ ಪುಸ್ತಕದ ಅಗತ್ಯ ಹೆಚ್ಚಾಗಿದೆ – ನಿನ್ನಿಂದ ಪುಸ್ತಕ ತೆಗೆದುಕೊಂಡರೆ ಮನೆಯವರು ತಪ್ಪು ತಿಳಿಯುವ ಅವಕಾಶವಿಲ್ಲ. ಕೊಟ್ಟು ಬರುವುದೇ ಸರಿ' ಎಂದಿತು.

ಅಪ್ರೊಡೈಟೆಯ ಮನೆಗೆ ಬಂದಾಗ ಮನೆಯವರೆಲ್ಲಾ ಮಲಗುವ ಹೊತ್ತು – ಸುಮಾರು ಹತ್ತರ ಸಮಯ. ನಾನು ಬಂದಿರುವುದನ್ನು ತಿಳಿದು ಕತ್ತಲಿನಲ್ಲಿ ಬೆಳಕಾಗಿ ಬಂದಳು ಅಪ್ರೊಡೈಟ. ನಾನು ಒಂದೆರಡು ಮಾತಿನಲ್ಲಿ ನಾನು ಬಂದ ಕಾರಣ ತಿಳಿಸಿ ಕೈಗೆ ಪುಸ್ತಕ ಇತ್ತು ಹೊರಡಲು ಸಿದ್ಧನಾದೆ. ಕೈಗೆ ಪುಸ್ತಕ ತೆಗೆದುಕೊಳ್ಳುತ್ತಾ ಆಕೆಯೆಂದಳು "ನೀವು ನನಗಾಗಿ ತುಂಬಾ ಶ್ರಮ ತೆಗೆದುಕೊಂಡಿರಿ. ನನಗೆ ಬೆಳಗಿನಿಂದ ಜ್ವರ. ನಾಳೆ ಏನು ಮಾಡುತ್ತೇನೋ ಕಾಣೆ? ಇನ್ನೂ ಚರಿತ್ರೆ ಓದಿಯೇ ಇಲ್ಲ. ಹಿಂದೆ ಓದಿದುದೆಷ್ಟೊ ಅಷ್ಟೇ ನನ್ನ ದಾರಿ ಬುತ್ತಿ" ಎಂದಳು ಸಣ್ಣ ದನಿಯಲ್ಲಿ. ಮುಖ ಜ್ವರದಿಂದ ಬಾಡಿತ್ತು.

'ಈಗ ಮಾತನಾಡಲು ಸಮಯವಲ್ಲ' ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ "ಆಗಲಿ ನಾನು ಇನ್ನು ಬರುತ್ತೇನೆ" ಎಂದು ಅಲ್ಲಿಂದ ಕಾಲು ತೆಗೆದೆ.

ಅಂದಿನ ನನ್ನ ವರ್ತನೆಯ ಬಗ್ಗೆ ನನಗೇ ಹೆಮ್ಮೆಯಾಗದಿರಲಿಲ್ಲ. ಆದರೂ ಆಕೆಯ ಖಾಯಿಲೆಯ ವಿಷಯ ಕೇಳಿದ ಮೇಲೂ ಒಂದು ಸಹಾನುಭೂತಿಯ ನುಡಿ ಹೇಳದೆ ಹಿಂದಿರುಗಿ ಬಂದೆನಲ್ಲಾ! ಆಕೆ ಏನು ತಿಳಿದುಕೊಂಡಳೋ ಏನೋ ಎಂದುಕೊಳ್ಳದಿರಲಿಲ್ಲ.

ನನ್ನ ಪರೀಕ್ಷೆಗಳು ಎಲ್ಲರಿಗಿಂತ ಬೇಗನೆ ಮುಗಿದುಹೋದುವು. ಈಗ

ನನಗೆ ಬಿಡುಗಡೆ ದೊರೆತಿತ್ತು. ಆದರೆ ಶ್ರೀಕಾಂತನ್, ಬಾನಾಡಿ, ಶ್ರೀಧರ್ ಅಪ್ರೊಡೈಟಿ ಇವರುಗಳಿಗೆ ಇನ್ನೂ ಮೂರು ನಾಲ್ಕು ದಿನಗಳು ಪರೀಕ್ಷೆ ಇತ್ತು. ಈಗ ನಾನು ಊರಿಗೆ ಹಿಂದಿರುಗುವ ಆಲೋಚನೆಯಲ್ಲಿದ್ದೆ. ತಮಗಾಗಿ ಮೂರು ದಿನ ಕಾದರೆ, ತಾವೂ ಜತೆಗೆ ಬರುವುದಾಗಿ ಬಾನಾಡಿ ಹೇಳಿದರು. ಆ ಮೂರು ದಿನಗಳನ್ನು ಬೇಲೂರು, ಹಳೇಬೀಡು ಮೊದಲಾದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು ಬರುವುದರಲ್ಲಿ ಕಳೆದು, ಬಾನಾಡಿಯ ಜತೆಯಲ್ಲಿ ಊರಿಗೆಹೋಗುವ ಆಲೋಚನೆ ಮಾಡಿದೆ. ಆಗ ಕೈಯಲ್ಲಿ ಕೊಂಚ ಹಣವೂ ಇತ್ತು. ನನ್ನ ಪ್ರಯಾಣದ ದಿನವನ್ನು ನಿಶ್ಚಯಿಸುವ ಮುನ್ನ ಅಪ್ರೊಡೈಟಿಯನ್ನು ಕಡೆಯ ಬಾರಿ ಕಂಡು, ಆಕೆಯಿಂದ ಬೀಳ್ಕೊಂಡು ಬರಲು ಆಕೆಯ ಮನೆಗೆ ಬಂದೆ. ಹಾಗೆಯೇ ಆಕೆಯ ಆರೋಗ್ಯವನ್ನು ತಿಳಿಯುವ ಮನಸ್ಸಿತ್ತು.

ಇಂದು ಅಪ್ರೊಡೈಟಿ ತುಂಬಾ ಮೋಹಕಳಾಗಿ ಕಂಡಳು. ಆಕೆ ಆಗ ತಾನೇ ನೀರು ಹಾಕಿಕೊಂಡು, ಒಗೆದ ಬಟ್ಟೆಯುಟ್ಟು, ಹೆರಳನ್ನು ಒಣಗಿಸಿಕೊಳ್ಳುತ್ತಿದ್ದಳು. ಆಕೆಯ ಮುಂಗುರುಳು ದುಂಬಿಗಳಂತೆ ಗಾಳಿಯಲ್ಲಿ ಎದ್ದು ಎದ್ದು ಹಾರಾಡುತ್ತಿತ್ತು.

"ನಾನು ಇನ್ನು ಮೂರು ನಾಲ್ಕು ದಿನಗಳಿಗೆ ನಮ್ಮೂರಿಗೆ ಹೋಗುತ್ತೇನೆ........" ಎಂದೆ.

ನನ್ನ ಮಾತು ಆಕೆಯನ್ನು ಯೋಚನಾಪರಳನ್ನಾಗಿ ನಾಡಿತು.

"ಇನ್ನು ಮುಂದೆ ನೀವೆಲ್ಲೋ........ನಾನೆಲ್ಲೋ........ಎಂದಾದರೂ ಒಮ್ಮೆ ಸಿಕ್ಕಿದಾಗ ಮಾತನಾಡುತ್ತೀರಿ ತಾನೆ?" ಎಂದೆ ನಾನು.

"ನೀವು ಮರೆಯದೆ ಇಂತಹವಳೊಬ್ಬಳು........ಇದ್ದಳೆಂದು ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ನಾನಂತೂ ನಿಮ್ಮನ್ನೆಂದಿಗೂ ಮರೆಯಲಾರೆ" ಎಂದಳು.

ಕ್ಷಣಕಾಲ ಇಬ್ಬರೂ ಮೌನ.

"ಅಂದಹಾಗೆ, ನಾನು ಹೀಗೆ ಹೇಳುತ್ತೇನೆಂದು ನೀವು ಏನೂ ತಿಳಿಯಬಾರದು........ನೀವು ನನ್ನಲ್ಲಿ ತಾರಿಣಿಯ ಅದಾವ ಗುಣವನ್ನು ಕಂಡುಕೊಂಡಿದ್ದೀರಿ?"

ನನಗೆ ತಟಕ್ಕನೆ ಏನು ಹೇಳಲೂ ತೋಚಲಿಲ್ಲ.

" ಆಕೆಯ ಸೊಬಗೆ ? ಸೌಂದರ್ಯವೇ ? ಆಕೆಯ ಮೇಧಾಶಕ್ತಿಯೆ ? "

"ಇಂಥಹದೇ ಎಂದು ಹೇಳುವುದು ಕಷ್ಟ. ಬಹುಶಃ ಇವೆಲ್ಲದರ ಕೆಲವಂಶ ನಿಮ್ಮಲ್ಲಿ ಕಂಡಿದ್ದೇನೆಂದು ತೋರುತ್ತೆ...." ಎಂದೆ ನಿಧಾನವಾಗಿ.

ಆಕೆ ನನ್ನ ಮಾತನ್ನು ಕೇಳಿ ' ಖೊಳ್ ' ಎಂದು ನಕ್ಕುಬಿಟ್ಟಳು. ನಗುವಿನ ಕಾರಣ ಆಕೆಗೇ ಗೊತ್ತು !

" ಇದುವರೆಗೆ ಕಳೆದ ದಿನಗಳು ನನ್ನ ಪಾಲಿನ ವಸಂತಕಾಲ. ಇನ್ನು ಹೇಮಂತ ಕಾಲಿರಿಸಲಿದೆ. ನಿಮ್ಮಂತಹವರ ಸಹವಾಸದಿಂದ ವಸಂತದ ನೆನಪು ಚಿರಸ್ಮರಣೀಯವಾಯಿತು" ಎಂದೆ.

" ಯಾಕೆ ಹಾಗೆನ್ನುತ್ತೀರಿ ? ಮುಂದಿನ ದಿನಗಳು ಇದಕ್ಕಿಂತಲೂ ಸುಖ ಸಂತೋಷದ ದಿನಗಳಾಗುತ್ತವೆ" ಎಂದಳು ಆಕೆ.

" ಆದರೆ ಆ ಆಸೆ ನನಗಿಲ್ಲ. ಊರಿಗೆ ಹೋದೊಡನೆಯೇ ನನ್ನನ್ನು ನುಂಗಿ ನೀರು ಕುಡಿಯುವ ಹೆಬ್ಬುಲಿಯೊಂದು ಬಾಯಿ ತೆರೆದುಕೊಂಡು ಕುಳಿತಿದೆ" ಎಂದೆ.

ಆಕೆಗೆ ನನ್ನ ಮಾತು ಅರ್ಥವಾಗಲಿಲ್ಲವೆಂದು ಆಕೆಯ ಮುಖ ಹೇಳಿತು. ಅದನ್ನು ಅರಿತು ಆ ಹೆಬ್ಬುಲಿಯ ಕಥೆ – ನಮ್ಮಕ್ಕನ ಮಗಳ ಪಾಣಿಗ್ರಹಣದ ಕಥೆಯನ್ನು ನಾಲ್ಕೇ ಮಾತುಗಳಲ್ಲಿ ಹೇಳಿದೆ.

" ಇಂತಹ ವಿಷಯಗಳಲ್ಲಿ ಹಿರಿಯರೆನಿಸಿಕೊಂಡವರು ಬಲವಂತ ಮಾಡಲೇಬಾರದು....ನಿಮ್ಮ ಸುಖ ಯಾವ ಮಾರ್ಗ ಹಿಡಿದರೆ ಸಿಗುತ್ತದೆಂದು ನಿಮಗೆ ಖಚಿತವೋ ಆ ದಾರಿ ಹಿಡಿದು ಮುಂದೆ ಸಾಗಿರಿ. ಇದೇ ನಿಮ್ಮ ಗೆಳತಿಯ ಹಿತನುಡಿ" ಎಂದಳು ಅಫ್ರೊಡೈಟ.

" ಹಾಗಾದರೆ ಆ ವಿಷಯದಲ್ಲಿ ನೀವು ಅಂದು ಆಡಿದುದೇ ಕಡೆಯ ನಿರ್ಧಾರವೇ ? "

" ಯಾವ ವಿಷಯ ? ಓ !....ಆ ವಿಷಯವನ್ನೋ....ನಾವು ಈಗಿರುವಂತೆಯೇ ಎಂದೆಂದಿಗೂ ಗೆಳೆಯರಾಗಿ ಇರೋಣ. ನಮ್ಮ ಸ್ನೇಹ ಎರಡು ಆತ್ಮಗಳ ಪವಿತ್ರ ಗೆಳೆತನವಾಗಲಿ" ಎಂದಳು ಅಫ್ರೊಡೈಟ ನನ್ನನ್ನು ಎವೆಯಿಕ್ಕದೆ ನೋಡುತ್ತಾ.

ಈ ವೇಳೆಗೆ ನಾನೂ ಹೊಸ ಹುರುಪಿನಲ್ಲಿದ್ದೆ. ಆಕೆ ನನ್ನ ಕೈಗೆ

ನಿಲುಕದ ವ್ಯಕ್ತಿಯೆಂದು ಈ ಮೊದಲೇ ನನಗೆ ಅರ್ಥವಾಗಿತ್ತು. ಹೀಗ
ನಾನು ಆಕೆಯ ಬಗ್ಗೆ ಹೆಚ್ಚಿನ ಚಿಂತೆಯನ್ನು ಹಚ್ಚಿಕೊಂಡಿರಲಿಲ್ಲ.
ಎಂದೆಂದಿಗೂ ನನ್ನ ಸ್ನೇಹಿತೆಯಾಗಿದ್ದರೆ, ಕಾಲ ದೇಶಲಿಂಗಾತೀತ ಗೆಳೆತನ
ಎರಡು ಆತ್ಮಗಳ ಪವಿತ್ರ ಸ್ನೇಹ – ನಮ್ಮದಾದರೆ, ನನಗೆ ಅಷ್ಟೇ ಸಾಕಿತ್ತು
ಅಷ್ಟರಿಂದಲೇ ತೃಪ್ತಿ ಕಾಣಲೆತ್ನಿಸುತ್ತಿತ್ತು – ನನ್ನ ಮನಸ್ಸು !!

"ಆಗಲಿ, ನಾವು ಎಂದೆಂದಿಗೂ ಗೆಳೆಯರಾಗಿರೋಣ. ಎರ
ಹೃದಯಗಳ ಮಧುರ ಬಾಂಧವ್ಯ ನಮ್ಮದಾಗಲಿ" ಎಂದೆ. ಆಕೆಯ ಕಣ
ಅರುಂಧತಿ ನಕ್ಷತ್ರದಂತೆ ಮಿನುಗುತ್ತಿತ್ತು. ತನ್ನ ಮಾತನ್ನು ಕೇಳಿ ಎ
ನಾನು ಬೇಸರಪಟ್ಟುಕೊಳ್ಳುತ್ತೇನೋ, ಊರಿಗೆ ಹೋಗುವ ಹೊತ್ತಿನ
ಮನಸ್ಸು ಚಿಕ್ಕದು ಮಾಡಿಕೊಂಡು ಹೋಗುವಂತಾಗುವುದೋ ಎಂದು ಆ
ಗಾಬರಿಗೊಂಡಿದ್ದಳು. ಆದರೆ ನಾನು ಸೋಲನ್ನು ಧೈರ್ಯವಾಗಿ ಎದುರಿಸಿದ್ದೆ
ಬಿದ್ದಾಗ ಎದ್ದು ನಿಲ್ಲುವ ಸಾಹಸದಲ್ಲಿದ್ದೆ !

"ಐ ಆಮ್ ರಿಯಲಿ ಪ್ರೌಡ್ ಆಫ್ ಯು ! (ನೀವು ಗೆಳೆಯರಾಗಿ
ರುವುದು ನನಗೊಂದು ಹೆಮ್ಮೆ). ಅದು ನನ್ನ ಸುಕೃತ ಪುಣ್ಯವೆಂದೇ ನನ್ನ
ಭಾವನೆ. ನಿಮ್ಮನ್ನು ಮೊದಲು ಕಾಲೇಜಿನಲ್ಲಿ ನೋಡಿದ ಲಾಗಾಯಿತು
ನಿಮ್ಮ ಗೆಳೆತನ ಸಂಪಾದಿಸುವ ಆಸೆಯಿತ್ತು. ಅಂದು ನೀವು – ವರ್ಷದ
ಆದಿಯಲ್ಲಿ – ನಮ್ಮನ್ನು ಚರಿತ್ರೆಯ ತರಗತಿಗೆ ಕರೆಯಲು ಬಂದಿರಲ್ಲಾ....
(ಅದನ್ನು ನೀವು ಬಹುಶಃ ಮರೆತುಬಿಟ್ಟಿರಬೇಕು ; ಆದರೆ ನಾನು ಮರೆತಿಲ್ಲ !)
....ಆ ದಿನವೇ ಅಂದುಕೊಂಡೆ. ಯು ಆರ್ ರಿಯಲಿ ಪೆಕ್ಯೂಲಿಯರ್ ಇ
ಯುವರ್ ಓನ್ ವೇ ಅಂತ (ಕಾಲೇಜಿನಲ್ಲಿ ಇತರ ವಿದ್ಯಾರ್ಥಿಗಳಂತೆ ನೀವಲ್ಲ).
ಅಂದಿನಿಂದಲೂ ನಿಮ್ಮ ವಿಷಯದಲ್ಲಿ ನನಗೆ ಒಂದು ವಿಧವಾದ ಗೌರವ
ಬೆಳೆದು ಬಂದಿದೆ....ಇಂದು ವರ್ಷದ ಅಂತ್ಯದಲ್ಲಿ ನಿಮ್ಮ ಪರಿಚಯ, ಗೆಳೆತನ
ನನ್ನದಾಯಿತು. ಐ ಆಮ್ ರಿಯಲಿ ಹ್ಯಾಪೀ (ಈ ಹೊತ್ತಿನಲ್ಲಿ ನಾನು
ತುಂಬಾ ಸುಖಿ)" ಎಂದಳು ಅಪ್ರೊಡೈಟ.

ನಾನು ಮಾತನಾಡಲಿಲ್ಲ.

"ಕಾಲೇಜಿನಲ್ಲಿ ನಾನು ಮೆಚ್ಚಿದ ಏಕೈಕ ವಿದ್ಯಾರ್ಥಿ ಎಂದರೆ ನೀವು"
ಎಂದಳು.

ಆಕೆಯ ಮಾತನ್ನು ಗಮನಿಸದಂತೆ ನಾನೆಂದೆ.

"ಹಾಗಾದರೆ ನನಗೊಂದು ಉಪಕಾರಮಾಡುತ್ತೀರಾ?"

"ಏನದು?"

"ನನ್ನ ಮನಸ್ಸು ಹೊತ್ತು ತಿರುಗಿದ ಹೂ. ಒಮ್ಮೆ ಇದ್ದಂತೆ ಇನ್ನೊಂದು ಗಳಿಗೆಗೆ ಇಲ್ಲ. ನನ್ನ ಬೇಸರದ ದಿನಗಳಲ್ಲಿ ನನಗೆ ಕಾಗದ ಬರೆಯುತ್ತೀರಾ?"

ಹಾಗೆಯೇ ಆಗಲೆಂದು ಅಪ್ರೊಡೈಟ ತಲೆಯಲ್ಲಾಡಿಸಿದಳು.

"ನನ್ನ ನೆನಪಿಗೆಂದು, ನಿಮಗೆ ಏನನ್ನಾದರೂ ಕೊಡುವ ಮನಸ್ಸಿದೆ. ಅದನ್ನೂ ತೆಗೆದುಕೊಳ್ಳಬೇಕು" ಎಂದೆ.

"ಹಾಗೆಯೇ ನನ್ನ ನೆನಪಿನ ಗುರುತಿಗೆ ನಾನೂ ಏನನ್ನಾದರೂ ಕೊಡ ಬಯಸುತ್ತೇನೆ....ನೀವು ಊರಿಗೆ ಹೊರಡುವುದು ಎಂದು?"

"ನಾನು ಇನ್ನೊಂದು ನಾಲ್ಕುದಿನ ಬಿಟ್ಟುಕೊಂಡು ಹೊರಡಲು ನಿಶ್ಚಯಿಸಿದ್ದೇನೆ. ಈ ಮಧ್ಯೆ ಸಿಗುವ ವಿರಾಮದಲ್ಲಿ ಹಳೆಬೀಡು, ಬೇಲೂರು ಶ್ರವಣಬೆಳಗೊಳ ಇವುಗಳನ್ನು ನೋಡಿಬರುವ ಆಸೆಯಿದೆ....ನೀವು ಅವುಗಳನ್ನು ನೋಡಿದ್ದೀರಾ?"

"ಇಲ್ಲಾರೀ, ನನಗೂ ಈ ರಜದಲ್ಲಿ ನೋಡಿ ಬರುವ ಆಸೆ ಇದೆ. ನಮ್ಮ ಸೋದರಮಾವ ಮೊನ್ನೆ ಹೇಳಿದರು. 'ನೋಡಮ್ಮ ಉತ್ತರಕ್ಕೆ ಪ್ರವಾಸ ಹೋಗೋಣೋ, ದಕ್ಷಿಣಕ್ಕೆ ಹೋಗೋಣೋ....ನೀನು ಹೇಗೆ ಹೇಳಿದರೆ ಹಾಗೆ' ಅಂದರು. ನಾನು ಇನ್ನು ಯಾವುದನ್ನೂ ನಿಶ್ಚಯಿಸಿಲ್ಲ. ಅಂತೂ ಈ ಬಾರಿ ನಾನು 'ಲಾಂಗ್ ಟೂರ್' (ದೀರ್ಘ ಪ್ರವಾಸ) ಮಾಡು ತ್ತೇನೆ" – ಅಪ್ರೊಡೈಟ ಹೇಳಿದಳು.

ನಾನು ಆಕೆಯನ್ನು ಮತ್ತೆ ಕಾಣುವುದಾಗಿ ಹೇಳಿ ಬೀಳ್ಕೊಂಡೆ. ಹಾಸ್ಟಲಿಗೆ ಬರುವಾಗ ಗಂಡು ನವಿಲಿನ ಹೆಮ್ಮೆ ನನ್ನದಾಗಿತ್ತು. ಅಪ್ರೊಡೈಟ ನನ್ನ ಮುಂದೆಯೇ ನನ್ನನ್ನು ಬಾಯಿತುಂಬಾ ಹೊಗಳಿದ್ದಳು. ನನ್ನ ಬಗ್ಗೆ ಆಕೆಗಿರುವ ಸದಭಿಪ್ರಾಯ ಒಂದೇ ಸಾಕಿತ್ತು. ಆಕೆ ನನ್ನವಳಾಗಲು ಒಪ್ಪು ವುದಕ್ಕಿಂತಲೂ, ಹೆಚ್ಚಿನ ಸಂತೋಷ ತಂದಿತ್ತು – ಆಕೆಯ ಮಾತುಕತೆ.

ಮಾರನೆಯ ದಿನ ನನ್ನ ಸ್ನೇಹದ ಕಾಣಿಕೆಯೊಂದಿಗೆ ಅಪ್ರೊಡೈಟಿಯ

ಮನೆಗೆ ಹೋದೆ. ಅಂದು ಏಕಾದಶಿ. ಆಕೆಯು ಮಹಡಿಯ ಮೇಲ ಊಟಮಾಡುತ್ತಿದ್ದಳು. ಆಕೆಯ ಸೋದರತ್ತೆ ನಾನು ಬಂದುದನ್ನು ತಿಳಿಸಿ ದೊಡನೆಯೇ, ಅಪ್ರೊಡೈಟಿ ಎಂಜಲು ಕೈಯಲ್ಲೇ (ಬಹುಶಃ ಊಟವನ್ನು ಅರ್ಧಕ್ಕೇ ಮುಗಿಸಿ) ಬಂದುಬಿಟ್ಟಳು. ಆಕೆಗೆ ನಾನು ಏನು ತಂದಿರುವೆ ನೆನ್ನುವ ಕುತೂಹಲ!

ಇದೇ ಹೊತ್ತಿಗೆ ಅವರ ಮನೆಗೆ ಅಂಚೆಯಾಳು ಬಂದ. ಅಪ್ರೊಡೈಟಿಯ ಹೆಸರಿಗೆ 'ಎಂ.ಓ' ತಂದಿದ್ದ. ಅದನ್ನು ತೆಗೆದುಕೊಳ್ಳಲೂ ಆಕೆಗೆ ವಿರಾಮ ವಿಲ್ಲ. 'ಫಾರಂ'ಗೆ ಸಹಿ ಹಾಕಿ ಹಣವನ್ನು ಎಣಿಸದೆ ಕೊಟ್ಟಷ್ಟು ತೆಗೆದು ಕೊಂಡಳು – ಎತ್ತಲೋ ನೋಡುತ್ತಾ. ಅದರಲ್ಲಿ ಬರೆದಿದ್ದ ತಂದೆಯ ಬರಹವನ್ನು ಓದಲೂ ಆಕೆಗೆ ವ್ಯವಧಾನವಿಲ್ಲ. ಆಕೆಯ ಮನಸ್ಸು ನೋಟ ವೆಲ್ಲಾ ನನ್ನ ಕಡೆಗೇ ಇತ್ತು....ನಾನು ತಂದಿರುವ ಕಾಣಿಕೆ ಎಂಥದು ಎಂದು ತಿಳಿಯುವ ತವಕ!

ಅಪ್ರೊಡೈಟಗೆ ಕಾಣಿಕೆಯಾಗಿ ಏನನ್ನು ಕೊಡಬೇಕೆನ್ನುವ ವಿಷಯದಲ್ಲಿ ದೀರ್ಘವಾಗಿ ಆಲೋಚಿಸಬೇಕಾಯಿತು. ನಾನು ಕೊಡುವ ವಸ್ತು 'ಯೋಗ್ಯ ಬೆಲೆಯುಳ್ಳದ್ದಾಗಿರಬೇಕು, ಮೂಲೆಗೆ ಎಸೆಯುವಂತೆ ಇರಬಾರದು. ಆಗಾಗ್ಗೆ ಅದು ಉಪಯೋಗಕ್ಕೆ ಬರುವಂತಿರಬೇಕು. ಇಷ್ಟೆಲ್ಲಾ ಅರ್ಹತೆಯುಳ್ಳ ಯಾವ ವಸ್ತುವನ್ನು ಆಕೆಗೆ ಕೊಡಬೇಕು. ದಂತದ ಬಾಚಣಿಗೆ....ಉಪಯೋಗಿ ಸುತ್ತಿದ್ದಂತೆ ಸವೆದುಹೋಗಿ ಮುಂದೊಂದು ದಿನ ಹೆಸರಿಲ್ಲದಂತಾಗುತ್ತದೆ.... ಬಟ್ಟೆ....ಉಟ್ಟು ಹರಿದಾಗ ಇನ್ನಿಲ್ಲವಾಗುತ್ತದೆ....ಬೆಳ್ಳಿಯ ಬಟ್ಟಲು.... ಅಥವಾ ಬೆಳ್ಳಿಯ ಫೋಟೋ....ಯಾಕೋ ಇವೆಲ್ಲಾ ಸರಿಬರಲಿಲ್ಲ. ಯಾವು ದಾದರೂ ಒಳ್ಳೆಯ ಪುಸ್ತಕ ಕೊಡಬೇಕು – ಅದೇ ಸಾಹಿತ್ಯಪ್ರೇಮಿಗೆ ಸಾಹಿತಿ ಯೋರ್ವನು ಕೊಡಬಲ್ಲ ಯೋಗ್ಯ ಕಾಣಿಕೆ! ....ಪುಸ್ತಕ....ಸರಿ....ಯಾವ ಬಗೆಯ ಪುಸ್ತಕ....ಕಥೆಯೇ? ಕಾದಂಬರಿಯೇ? ಕವನವೇ? ಇತಿಹಾಸವೇ? ಶಾಸ್ತ್ರಗ್ರಂಥವೇ? ಯಾವುದು ಕೊಡಬೇಕೆನ್ನುವ ವಿಷಯದಲ್ಲಿ ಬಗೆಹರಿಯ ಲಿಲ್ಲ. ಕಡೆಗೆ ಮಹದೇವ್ ದೇಸಾಯಿ ಅವರು ಬರೆದಿರುವ "ಗೀತಾ ಅಕಾ ರ್ಡಿಂಗ್ ಟು ಗಾಂಧೀಜೀ" ಎನ್ನುವ ಗ್ರಂಥ ಕೊಡಲು ನಿಶ್ಚಯಿಸಿದೆ.

ಆ ಪುಸ್ತಕದ ಮೊದಲನೆಯ ಪಾಸಿನಲ್ಲಿ ಹೀಗೆಂದು ಬರೆದೆ.

ಶ್ರೀಮತಿ (ತಾರಿಣಿ)ಗೆ,
ಸವಿನೆನಪಿನೊಂದಿಗೆ
ಇತ್ತ ಕಾಣಿಕೆ
—ಮೂರ್ತಿ

ಆ ಹಾಳೆಯ ಹಿಂಬದಿಯಲ್ಲಿ ಮೂರು ಸಾಲಿನ ಶ್ಲೋಕ — ಹಾರೈಕೆ:

ಗೆ

"ಎಲ್ಲಾದರೂ ಇರು,
ಎಂತಾದರೂ ಇರು,
ಎಂದೆಂದಿಗೂ ನೀ ನೆಮ್ಮದಿಯಾಗಿರು."

ಆಕೆ ಪುಸ್ತಕವನ್ನು ತೆಗೆದುಕೊಳ್ಳುತ್ತಾ,

"ಓ! ವಾಟ್ ಎ ಫ್ರೈಸ್‌ಲೆಸ್ ಪ್ರೆಸೆಂಟೇಷನ್ (ಎಂತಹ ಅಮೂಲ್ಯ ಕಾಣಿಕೆ!). ನೀವು ನನಗೆ ತುಂಬಾ ಬೆಲೆಬಾಳುವ ಪುಸ್ತಕ ಕೊಟ್ಟಿದ್ದೀರಿ. ಐ ಆನ್ ವೆರಿ ಮಚ್ ಥ್ಯಾಂಕ್‌ಫುಲ್ ಟು ಯು! (ನಿಮಗೆ ತುಂಬಾ ಆಭಾರಿಯಾಗಿದ್ದೇನೆ) ಎಂದಳು ಅಪ್ರೊಡೈಟ.

ಅದರ ಒಳಗಡೆ ಬರೆದಿದ್ದ ನನ್ನ ಹಾರೈಕೆಯನ್ನು ಓದಿಕೊಂಡು ಮನಸ್ಸಿನಲ್ಲೇ ಹಿಗ್ಗಿ, ಒಂದು ಬಗೆಯ ಮತ್ತನ್ನುಂಟುಮಾಡುವ ಓರೆನೋಟದಿಂದ ನನ್ನನ್ನು ನೋಡಿದಳು. ಆ ಪದ್ಯ ಆಕೆಗೆ ತುಂಬಾ ಸೇರಿರಬೇಕು. ನನ್ನನ್ನು ಆಕೆ ಒಳ್ಳೆಯ ಕನಸುಗಾರ ಎಂದುಕೊಂಡಿರಬೇಕು.

ಈಗ ನಾನು ನನ್ನ ಪ್ರೇಮದ ಸ್ವಪ್ನದಿಂದ ಎಚ್ಚೆತ್ತಿದ್ದೆ. ಈಗ ಆಕೆಯ ಬಗ್ಗೆ ಹೊಸ ದೃಷ್ಟಿ ಬಂದಿತ್ತು. ಆಕೆ ನನಗೆ ಲಭ್ಯವಾಗುವುದು ಬೇಡ. ಆಕೆ ಎಲ್ಲೇ ಇರಲಿ, ನೆಮ್ಮದಿಯಾಗಿರಲಿ. ಇದೇ ನನ್ನ ಆಶಯವಾಗಿತ್ತು. ಆಕೆಯ ಬಗ್ಗೆ ನನಗೆ ಯಾವ ಅಸಮಾಧಾನ, ಅಸೂಯೆ ಇರಲಿಲ್ಲ. ಆಕೆ ಕೆಲವು ದಿನದ ಮಟ್ಟಿಗಾದರೂ ನನ್ನ ಮನಸ್ಸನ್ನು ರಂಜಿಸಿದಳೆನ್ನುವ ಸಂತೋಷ ನನಗಿತ್ತು. ಆಕೆಯ ಭಾವಚಿತ್ರ ಕೇಳಿದ್ದರೆ, ಅದನ್ನು ಸಂತೋಷದಿಂದ ಕೊಡುತ್ತಿದ್ದಳೋ ಏನೋ, ಆದರೆ ಕೇಳಲಿಲ್ಲ. ಯಾಕೆಂದರೆ ಭಾವಚಿತ್ರ

ದಿಂದ ನನ್ನ ಕಲ್ಪನೆಗೆ ಧಕ್ಕೆ ಬರುವುದೆಂದು ಹೆದರಿ. ಕಲ್ಪನೆಯನ್ನು ಆ ಚಿತ್ರದ ಚೌಕಟ್ಟಿನಲ್ಲಿ ಸೆರೆ ಹಿಡಿಯುವುದು ನನ್ನ ಮನಸ್ಸಿಗೆ ಹಿತವೆನಿಸಲಿಲ್ಲ. ಆಕೆಗೂ ನನ್ನ ಭಾವಚಿತ್ರ ಕೊಡಲಿಲ್ಲ. ಅದರ ಬದಲು ನಾನು ಹಳ್ಳಿಯಲ್ಲಿ ತೆಗೆದಿದ್ದ ನಮ್ಮ ತಾಯಿಯ ಚಿತ್ರ ಒಂದನ್ನು ಕೊಟ್ಟೆ. ಅದರಲ್ಲಿ ತಾಯಿ ಹಸುವಿನ ಹಾಲನ್ನು ಕರೆಯುತ್ತಿದ್ದಾರೆ.....ತಾಯಿಯೊಂದಿಗೆ ಸ್ಪರ್ಧೆಗೆ ನಿಂತ ಎಳೆಗರು ಹಾಲು ಕುಡಿಯಲು, ಒಂದು ನೆಗೆತ ಹಾರಿ ಕೆಚ್ಚಲಿಗೆ ಮೂತಿ ಇಟ್ಟಿದೆ..... ತನ್ನ ಕರುವಿನ ಮೇಲಿನ ಪ್ರೀತಿಯನ್ನೆಲ್ಲಾ ಒಮ್ಮೆಲೆ ಹರಿಸಿಬಿಡಲೆಂಬಂತೆ – ಹಸು ಕರುವನ್ನು ನೆಕ್ಕಲು ಬಾರುದ್ದ ನಾಲಗೆಯನ್ನು ಚಾಚಿ, ಕರುವಿನತ್ತ ಮುಖ ತಿರುವಿದೆ....ಓ! ಎಂತಹ ಸಹಜ ಸುಂದರ ಚಿತ್ರ ಅದು! ಅದರೊಂದಿಗೆ ನಮ್ಮ ಹಳ್ಳಿಯ ವಿಹಂಗಮ ನೋಟವನ್ನು ತೋರಿಸುವ ಎರಡು ಚಿತ್ರಗಳನ್ನೂ ಕೊಟ್ಟೆ.

ಆ ಚಿತ್ರಗಳನ್ನು ನೋಡಿ ಅಪ್ರೊಡೈಟ ನನಗೆ 'ಒಳ್ಳೆಯ ಫೋಟೋ ಗ್ರಾಫರ್' ಎನ್ನುವ ಪ್ರಶಸ್ತಿ ಕೊಡದೆ ಇರಲಿಲ್ಲ.

"ನೀವು ಹಾಗಾದರೆ ನನಗೆ ಮತ್ತೆ ಎಂದು ಸಿಗುತ್ತೀರಿ? ನಮಗೆ ಏಳನೆಯ ತಾರೀಖಿನ ತನಕ ಪರೀಕ್ಷೆಗಳಿವೆ. ಈ ಮಧ್ಯೆ ಕಾಲೇಜಿನ ಬಳಿ ಒಮ್ಮೆ ನನಗೆ ಭೇಟಿಯಾಗುತ್ತೀರಾ? ಆಗ ನಿಮಗೆ ನನ್ನ ಪ್ರೆಸೆಂಟೇಷನ (ಕಾಣಿಕೆ) ಕೊಡುತ್ತೇನೆ."

"ಹೂಂ, ಹಾಗೆಯೇ ಆಗಲಿ. ಆ ವೇಳೆಗೆ ನನ್ನ ಪ್ರವಾಸದಿಂದ ಹಿಂದಿರುಗಿರುತ್ತೇನೆ" ಎಂದೆ.

"ನೀವು ಖಂಡಿತ ನನ್ನನ್ನು ನೋಡಬೇಕು. ಕಾಣದೆ ಹೋದರೆ ನನ್ನಾಣೆ ಇದೆ".

ಆದರೆ ಇದೇ ಅಪ್ರೊಡೈಟಿಯೊಂದಿಗೆ ನನ್ನ ಕಡೆಯ ಮಾತುಕತೆ. ನಾನು ಹೇಳಿದ್ದಂತೆ ಮತ್ತೆ ಆಕೆಯನ್ನು ಕಾಣಲಾಗಲಿಲ್ಲ. ಈ ನಮ್ಮ ಭೇಟಿಯೇ ಕಡೆಯ ಭೇಟಿಯಾಯಿತು. ನನ್ನ ಮನಸ್ಸಿನಲ್ಲಿದ್ದ ಯಾವ ಕೆಲಸವೂ ನಡೆಯಲಿಲ್ಲ. ನನ್ನ ಪ್ರವಾಸ ಕಾರಣಾಂತರಗಳಿಂದ ನಿಂತುಹೋಯಿತು. ಇದ್ದಕ್ಕಿದ್ದಂತೆ ನೇರ ಊರಿಗೆ ಹೊರಟುಬಿಡುವ ಮನಸ್ಸಾಯಿತು. ತಲೆಯಲ್ಲಿ ಊರಿನ ಬಗ್ಗೆ ಹತ್ತೆಂಟು ಚಿತ್ರಗಳು ತುಂಬಿಕೊಂಡುವು. ಊರಿನಲ್ಲಿ ಏನೋ

ನಡೆದಿದೆ. ನನ್ನ ಇರುವು ಅಲ್ಲಿ ಅಗತ್ಯವಾಗಿದೆ, ಎನ್ನುವ ಕರುಳಿನಕರೆ (ಸೈಕಲಾಜಿಕಲ್ ಕಾಲ್) ಅಂತರಂಗವನ್ನು ಬಾಧಿಸತೊಡಗಿತು. ಇದಕ್ಕೆ ಕಿವುಡನಾಗಿ ಮೈಸೂರಿನಲ್ಲಿ ಇರಲು ನನ್ನಿಂದಾಗದ ಕೆಲಸವಾಯಿತು. ಮಧ್ಯಾಹ್ನದ ವರೆಗೂ ಈ ಸುದ್ದಿ ತೆಗೆಯದಿದ್ದ ನಾನು ಆ ಸಂಜೆ ಹಠಾತ್ತಾಗಿ ಸ್ನೇಹಿತರಿಗೆ ಹೇಳಿದೆ "ನನಗೆ ಊರಿನಿಂದ ಕರೆ ಬಂದಿದೆ. ನಾನು ಊರಿಗೆ ಹೋಗಬೇಕು, ತಕ್ಷಣ ಹೊರಡಬೇಕು."

ಗೆಳೆಯರಿಗೆ ನನ್ನ ಮಾತು ಅಚ್ಚರಿಯನ್ನುಂಟುಮಾಡಿತು. ಒಂದೆರಡು ದಿನ ಇದ್ದು ಹೋಗಲು ಹೇಳಿದರು. ಆದರೆ ನಾನು ಕಿವಿಕೊಡಲಿಲ್ಲ.

"ಇಲ್ಲ. ನಾನಿಲ್ಲಿ ಇರಲಾರೆ. ನಾಳೆ ಬೆಳಗಿನ ಗಾಡಿಗೆ ಊರಿಗೆ ಹೋಗುತ್ತೇನೆ"

ಇನ್ನು ತಡೆದು ಫಲವಿಲ್ಲವೆಂದು ಗೆಳೆಯರು "ಒಳ್ಳೆಯದು, ಹೋಗಿ ಬನ್ನಿ" ಎಂದರು. ನಾವು ನಾಲ್ವರು ಗೆಳೆಯರು ಸವಿ ನೆನಪಿಗೆಂದು ಪರಸ್ಪರ ಪುಸ್ತಕಗಳನ್ನು ಕೊಟ್ಟುಕೊಂಡೆವು.

ರಾತ್ರಿ ನನ್ನ ಬಟ್ಟೆ ಬರೆಯನ್ನೂ, ಪುಸ್ತಕ ಮೊದಲಾದ ಸಾಮಾನುಗಳನ್ನೂ ಕಟ್ಟುತ್ತಿರುವಾಗ ಗೆಳೆಯ ಶ್ರೀಕಾಂತನ್ ಹೇಳಿದರು.

"ಅಫ್ರೊಡೈಟಯನ್ನು ಕಾಣದೆ ಹೋಗುತ್ತೀರಾ? ಆಕೆ ನಿಮಗೆ ಏನನ್ನೊ 'ಪ್ರೆಸೆಂಟ್' ಮಾಡಲು ಹೇಳಿದ್ದಾರೆ. ಅದನ್ನೂ ತೆಗೆದುಕೊಳ್ಳದೆ ಹೋಗುತ್ತೀರಾ?"

ಅಲ್ಲಿಯವರೆಗೆ ನಾನು ಕಾಯಲಾರೆ. ದಯವಿಟ್ಟು ನೀವು ನನಗಾಗಿ ಆಕೆಯನ್ನು ಕಂಡು ಬರುತ್ತೀರಾ? ಆಕೆ ಏನನ್ನಾದರೂ ಕೊಟ್ಟರೆ ತೆಗೆದುಕೊಂಡು ನನಗೆ ತಲುಪಿಸುತ್ತೀರಾ?"

"ಹಾಗೆಯೇ ಆಗಲಿ. ನೀವು ಒಂದು ಪತ್ರ ಬರೆದುಕೊಡಿ." ನಾನು ಪತ್ರ ಬರೆದುಕೊಟ್ಟೆ.

ಶ್ರೀಮತಿ,

ನಾನು ಊರಿಗೆ ಹೊರಡುವ ಮುನ್ನ ನಿಮ್ಮನ್ನು ನೋಡುವುದಾಗಿ ಹೇಳಿದ್ದೆ. ನಾನು ಅಂದುಕೊಂಡಂತೆ ಶ್ರವಣಬೆಳಗೊಳ, ಹಳೆಬೀಡುಗಳಿಗೆ

ಹೋಗಲಿಲ್ಲ. ಅನಿವಾರ್ಯವಾಗಿ ಊರಿಗೆ ಇಂದೇ ಹೋಗಬೇಕಾಯಿತ
ಹೀಗಾಗಿ ನಿಮ್ಮನ್ನು ಮತ್ತೊಮ್ಮೆ ನೋಡಲಾಗಲಿಲ್ಲ. ಕ್ಷಮೆ ಇರಲಿ.

ಇಲ್ಲಿ ಕಳೆದ ಎರಡು ವರ್ಷಗಳು ನನ್ನ ಪಾಲಿಗೆ ಎಂದೂ ಮಾಸದ ರಂ
ರಂಗಿನ ಚಿತ್ರ. ಚಿತ್ರದ ಚಿತ್ತಾರದಲ್ಲಿ ನನ್ನ ಜೀವದ ಗೆಳೆಯರ ಪಾ
ಎಷ್ಟೋ ಅಷ್ಟೇ ನಿಮ್ಮದು ಕೂಡ. ಆದರೆ ಗೆಳೆಯರ ಒಲವು, ಸ್ನೇಹ, ನನ
ದೊರೆತಿತ್ತು. ಆದರೆ ನಿಮ್ಮ ವಿಶ್ವಾಸ ಸಹಾನುಭೂತಿ, ನನಗೆ ಈಚೆ
ದೊರೆಯಿತು. ಇದಿಷ್ಟೇ ಸಾಕು ನನಗೆ. ಇದಕ್ಕಿಂತಲೂ ಹೆಚ್ಚಿನದನ್
ಬಯಸಿ, ಸಿಗದುದಕ್ಕಾಗಿ ಮರುಗಿ, ಇರುವುದನ್ನು ಕಳೆದುಕೊಳ್ಳುವುದು ಬೇಡ
ಇಷ್ಟರಲ್ಲಿಯೇ ತೃಪ್ತಿಕಾಣಲೆತ್ನಿಸುತ್ತೇನೆ. ಆದರೆ ನಿಮ್ಮ ಗೆಳೆತನ ನಿರಂತರ
ವಾಗಿ ನನ್ನದಾಗಿ ಉಳಿಯಬೇಕು. ನಿಮ್ಮ ಅಭಿಮಾನ ಏಕರೀತಿಯಾಗಿರ
ಬೇಕು.

ನೀವು ಸಾಂಪ್ರದಾಯ ಮನೆತನಕ್ಕೆ ಸೇರಿದವರು. ಸಾಂಪ್ರದಾಯದ
ಸೆಳತಕ್ಕೆ ಸಿಕ್ಕುವುದು ಸಹಜ. ನನ್ನಂತಹವನೊಂದಿಗೆ ಪತ್ರವ್ಯವಹಾರವಿಟ್ಟು
ಕೊಳ್ಳಲು ಸಂಕೋಚಪಡುವುದೂ ಸಹಜ. ಆದರೆ ನೀವು ಸುಸಂಸ್ಕೃತರು.
ಮೇಲಾಗಿ ಕಲಿತವರು. ನಿಮ್ಮಂತಹವರೂ ಸಂಪ್ರದಾಯದ ಸೋಗಿಗೆ ಒಳಗಾಗ
ಬೇಕೆ ?

ನನ್ನ ಪತ್ರದ ವಿಚಾರ, ಧೋರಣೆ ನಿಮ್ಮಲ್ಲಿ ತಪ್ಪು ಕಲ್ಪನೆ – ಹುಟ್ಟಿಸ
ದಿರಲಿ. ನನ್ನ ಆಶಯವಿಷ್ಟೇ. ದಯವಿಟ್ಟು ನನ್ನ ಬೇಸರದ ದಿನಗಳಲ್ಲಿ
ಒಂದು ಮಾತು ಉತ್ತರವಾಗಿ ಬರೆಯಿರಿ. ಇಷ್ಟೇ ನಾನು ನಿಮ್ಮಿಂದ ಅಪೇಕ್ಷಿ
ಸುವ ಪ್ರತಿಫಲ !

ನಿಮ್ಮ ನೆನಪಿನ ಕುರುಹೆಂದು ಏನನ್ನಾದರೂ ಕೊಡುವುದಾಗಿ ಹೇಳಿದ್ದಿರಿ.
ಅದನ್ನು ತೆಗೆದುಕೊಳ್ಳುವ ಅವಕಾಶ ನನಗೆ ಲಭಿಸಲಿಲ್ಲ. ಅದನ್ನು ಗೆಳೆಯ
ಶ್ರೀಕಾಂತನ್ ಅವರಿಗೆ ಇತ್ತರೆ ಅವರು ನನಗೆ ತಲುಪಿಸುತ್ತಾರೆ. ನೀವು
ಅನ್ಯಥಾ ಭಾವಿಸಬಾರದು. ಯಾವುದಕ್ಕೂ ಪತ್ರ ಬರೆಯಿರಿ. ವಿಶ್ವಾಸವಿರಲಿ.

ಇಂತಿ ನಿಮ್ಮವ
ಮೂರ್ತಿ.



# ಕಪಿಂಜಲನ ಮೆಸೇಜ್

ಊರಿಗೆ ಬಂದಮೇಲೆ ಶ್ರೀಕಾಂತನ್ ಅವರ ಪತ್ರಕ್ಕಾಗಿ ಕಾಯುವುದರಲ್ಲೇ ಸಮಯ ಸರಿಯಿತು. ಅವರು ಯಾವ ವಿಷಯಕ್ಕೂ ಉದ್ದವಾದ ಪತ್ರ ಬರೆಯುವುದಾಗಿ ಮಾತುಕೊಟ್ಟಿದ್ದರು. ನಾನು ಹಳ್ಳಿಯಲ್ಲಿ ದಿನಗಳನ್ನೆಣಿಸುತ್ತಾ ಕುಳಿತಿದ್ದೆ. ಒಂದು ವಾರ ಕಳೆಯಿತು. ಶ್ರೀಕಾಂತನ್‌ರಿಂದ ಬರಬೇಕಾದ ಕಾಗದ ಬರಲಿಲ್ಲ. ಅವರು ಯಾಕೆ ಬರೆಯಲಿಲ್ಲ? ಅಪ್ರೊಡೈಟಿಯನ್ನು ಕಂಡಿದ್ದರೋ ಇಲ್ಲವೋ? ನನ್ನ ಕಾಗದ ಕೊಟ್ಟರೊ ಇಲ್ಲವೋ? ಎನ್ನುವ ಅನುಮಾನ ನನಗೆ.

ಮೈಸೂರಿನಿಂದ ಅನಂತ್ ಒಂದು ಕಾರ್ಡು ಬರೆದರು. ಅದರಲ್ಲಿ ಶ್ರೀಕಾಂತನ್ ಬಗ್ಗೆ ಒಂದು ತುಣುಕು ಸುದ್ದಿ ಸಿಕ್ಕಿತು. ಶ್ರೀಕಾಂತನ್ ಅಪ್ರೊಡೈಟಿಯನ್ನು ಕಂಡಿದ್ದರಂತೆ. ಅಪ್ರೊಡೈಟಿ ಅವರ ಕೈಗೆ ಯಾವುದೋ ಮೂರು ಪುಸ್ತಕಗಳನ್ನು ಕೊಟ್ಟರಂತೆ........ಇದಕ್ಕೂ ಹೆಚ್ಚಿನ ಸುದ್ದಿಯನ್ನು ಆ ಪತ್ರ ತಿಳಿಸಲಿಲ್ಲ. ಭಲೆ ಹುಡುಗಿ! ನಾನು ಒಂದು ಪುಸ್ತಕ ಕೊಟ್ಟರೆ ತಾನು ಮೂರು ಪುಸ್ತಕಗಳನ್ನು ಕೊಟ್ಟಿದ್ದಾಳೆ! ಅವು ಯಾವ ಪುಸ್ತಕಗಳು? ಎಂದು ಯೋಚಿಸುತ್ತಾ ಕುಳಿತಾಗ, ಒಂದು ದಿನ ಶ್ರೀಕಾಂತನ್ ಅವರ ಪತ್ರ ಬಂತು. ಆ ಕವರಿನ ತುಂಬಾ ಮುದ್ರೆಗಳು. ಅದು 'ಸತ್ತ ಅಂಚೆಯ ಕಛೇರಿ'ಯನ್ನು ಸಂದರ್ಶಿಸಿ, ನನ್ನನ್ನು ಹುಡುಕಿಕೊಂಡು ಮತ್ತೆ ಹಿಂದಕ್ಕೆ ಬಂದಿತ್ತು. ಶ್ರೀಕಾಂತನ್ ನನ್ನ ವಿಳಾಸವನ್ನು ತಪ್ಪಾಗಿ ಬರೆದಿದ್ದುದರಿಂದ ಇಷ್ಟು ತಡವಾಯಿತು.

(ಕಪಿಂಜಲನು ಪುಂಡರೀಕನಿಗೆ ಕಳುಹಿಸಿದ ಮಹಾಶ್ವೇತೆ – ಅಪ್ರೊಡೈಟಿಯ ಸಂದೇಶ.)

ಒಲುವಿನ ಗೆಳೆಯಾ ಮೂರ್ತಿ,

ತಾವು ರಾಮಗಿರಿ ಪರ್ವತದಿಂದ ಕಳುಹಿಸಿದ ಸಂದೇಶ ನಿನ್ನೆ ತಲುಪಿತು. (ತಮ್ಮ ಕಾಗದದ ಉತ್ತರಾರ್ಧಕ್ಕೆ ಹಾಳಾದ ಪೋಸ್ಟ್ ಆಫೀಸಿನವರು ಮುದ್ರೆ

ಒತ್ತಿ ಕಾಣದ ಹಾಗೆ ಮಾಡಿದ್ದು, ಸೌಂದರ್ಯವತಿಯ ಕೆನ್ನೆಯಮೇಲೆ ಒಂದು ಕಪ್ಪು ಬಟ್ಟಿಟ್ಟಂತಾಗಿತ್ತು). ಕಾರ್ಡು ಸಿಗದುದರಿಂದ ಬರೆಯುವುದು ತಡವಾಯಿತು – ಅಂತ ಕಾಗದದ ಮೇಲೆ ಸೂಚನೆ ಕೊಡದೆ ಇದ್ದಿದ್ದರೆ ಇತ್ತು ಅದರ ತಮಾಷೆ!

ಅಂತು ಪ್ರತಿದಿನ ನಾವು ನಿಮ್ಮ ಕಾಗದವನ್ನು ಎದುರು ನೋಡುತ್ತಿದ್ದೆವು. ತಮ್ಮ ಕಾಗದ ನೋಡಿ ವ್ಯಥೆಯಾಯಿತು. ಅಯ್ಯೋ ಪಾಪ! ನಾಲ್ಕು ಹಕ್ಕಿಗಳಲ್ಲಿ ಮೂರು ಉಳಿದು, ಒಂದೇ ಹಕ್ಕಿ ಒಂಟಿಯಾಗಿ ಹೋಯಿತಲ್ಲ ಅಂತ ವ್ಯಥೆಪಟ್ಟೆವು. ತಮ್ಮ ಮನಸ್ಸಿನಲ್ಲಾದ ಆಂದೋಳನಕ್ಕೆ ತಮ್ಮ ಕಾಗದವೇ ಸಾಕ್ಷಿ. ಅಯ್ಯೋ ಪಾಪ! ಬಹಳ ಬೇಜಾರು ಪಟ್ಟುಕೊಂಡಿದ್ದಾರೆ – ಅಂತ ಅಂದುಕೊಂಡೆವು ನಾವು. ನಾಲ್ಕು ಪಕ್ಷಿಗಳಲ್ಲಿ ಒಂದೇನೋ ಅವಧಿ ಪೂರೈಸಿದುದರಿಂದ ಹಾರಿಹೋಯಿತು. ಇನ್ನು ಮೂರು ಪಕ್ಷಿಗಳು ಪುಣ್ಯಮಾಡಿವೆ. ಏಕೆಂದರೆ ಇನ್ನೂ ಕೆಲವು ದಿನಗಳು ಒಟ್ಟಾಗಿ ಗೂಡಿನಲ್ಲಿರುವ ಸೌಭಾಗ್ಯ ಇದೆಯಲ್ಲಾ ಅನ್ನುವ ಸಂತೋಷ. ಮೂರು ಜನ ಎಂದಿನಂತೆ ವಿಹಾರಕ್ಕೆ ಹೋಗುತ್ತೇವೆ. ಲಲ್ಲೆ ಹೊಡೆಯುತ್ತೇವೆ. ರಾಮಚಂದ್ರ ವಿಲಾಸಕ್ಕೆ ಹೋಗಿ 'ವೆಂಗಾಯ್ ದೋಸೆ'ಗೆ ಆರ್ಡರ್ ಮಾಡುತ್ತೇವೆ. ನಾವು ಮೂವರು ಎಷ್ಟು ನಗುತ್ತಿದ್ದರೂ ಭಣ ಭಣವೇ. ಉಳಿದ ಮೂರು ಹಕ್ಕಿಗಳು ಸ್ವಲ್ಪ ದಿನದಲ್ಲೇ ಚದುರುತ್ತವೆ. ಗೂಡು ಬರಿದಾಗುತ್ತದೆ. ಆದರೆ ಹಕ್ಕಿಗಳು ಹಾರಿಹೋದರೂ, ಅವು ವಾಸಿಸುತ್ತಿದ್ದ ಗೂಡುಗಳು ಹಾರದೆ ಇರುತ್ತವೆ – ಗತ ಸ್ಮೃತಿಗಾಗಿ.

ನನಗೆ ಗೊತ್ತು ಸಾರ್ – ನಿಮಗೆ ನನ್ನ ಕಾಗದ ಸಿಗುತ್ತಿದ್ದ ಹಾಗೆಯೇ ನಿಮ್ಮ ಮನಸ್ಸಿನಲ್ಲಿ ಏನು ವಿಷಯ ಬರುತ್ತೆ ಅಂತ. ನಮ್ಮಗಳ ಯೋಗಕ್ಷೇಮ, ನಮ್ಮ ಪರೀಕ್ಷೆಯ ವಿಚಾರ ತಿಳಿಯಬೇಕು ಎನ್ನುವ ಕುತೂಹಲವಿದೆ. ಆದರೆ ಅದು 'ಸೆಕೆಂಡರಿ' ಅಲ್ವೇ ಸಾರ್! 'ಪ್ರೈಮರಿ' ಯಾವುದು? ಪುಂಡರೀಕ ಕಪಿಂಜಲನ ಕೈಲಿ ಮಹಾಶ್ವೇತೆಗೆ ಸಂದೇಶಾನ ಕಳ್ಸಿರ್ತಾನೆ. ಜೀವ ಹೊಡ್ಕೋತಾ ಇರುತ್ತೆ —ನನ್ನ ಸಂದೇಶಕ್ಕೆ ಏನು ಉತ್ತರ ಬರುತ್ತೊ, ಕಪಿಂಜಲ ಎಷ್ಟು ಹೊತ್ತಿಗೆ ಬಂದಾನೋ, ಎಷ್ಟು ಹೊತ್ತಿಗೆ ವಿಷಯ ತಿಳಿದೇನೋ ಅಂತ. ನಿಮಗೂ ಪಾಪ ಹಾಗೆಯೇ ಆಗಿಲ್ವೇ? ಕಾಗದ ನೋಡುತ್ತಿದ್ದ ಹಾಗೆಯೇ 'ಓಹೋ ಯಾರದ್ದು ಕಾಗದ?' 'ಕಪಿಂಜಲನದು' – ಹಾಗಾದರೆ ನಾನು

ಮಹಾಶ್ವೇತೆಗೆ ಕಳುಹಿಸಿದ ಸಂದೇಶಕ್ಕೆ ಉತ್ತರ ಬಂದಿರಬೇಕು, ಅಂತ ಒಂದೇ ಹರಿತಕ್ಕೆ ಕವರನ್ನು ಹರಿಯುತ್ತೀರಿ – ಅಲ್ಲವೇ ? ಇಲ್ಲಿಯವರೆಗೂ ಅಂತೂ ಇಂತೂ ಮಹಾಶ್ವೇತೆಯ ವಿಚಾರಾನೇ ಪ್ರಸ್ತಾಪಿಸಿದೆ. ಸುಮ್ಮನೆ ಏನೇನೋ ಬರಕೊಂಡು ಬಂದೆ. ಇನ್ನು ಮುಂದೆ ಕಥೆಗ ಬರದೆ ಇದ್ದರೆ ನಿಮಗೆ 'ಪೇಷನ್ಸ್' (ವ್ಯವಧಾನ) ಇರೋದಿಲ್ಲ. ಆ ಕಾರಣವಾಗಿ ತಡಮಾಡದೆ ಅಪ್ರೊಡೈಟ ಎಂಬ ಸಾಧ್ವೀಮಣಿಯ ಕಥೆಯನ್ ಪೇಳ್ವೆನ್. ಅದನ್ನು ಸಾವಧಾನದಿಂದ ಲಾಲಿಸು ಮುನಿವರಾ !!!........

ತಾವೇನೋ ಸಂದೇಶನ್ನ ತಲ್ಪಿಸುವ ಭಾರವನ್ನು ಕಪಿಂಜಲನ ಭಾಗಕ್ಕೆ ವಹಿಸಿಬಿಟ್ಟು 'ಪರವಾಗಿಲ್ಲ ಇವನು ಕಪಿಂಜಲನ ಪಾತ್ರ ವಹಿಸೋದಕ್ಕೆ ಯೋಗ್ಯನಾಗಿದ್ದಾನೆ' ಎಂದು ತಿಳಿದು ನನ್ನ ಹೆಸರನ್ನು ಕಾಗದ್ದಲ್ಲಿ ಪ್ರಸ್ತಾಪಿಸಿ ಬಿಟ್ಟಿದ್ದಿರಿ — 'ಗೆಳೆಯ ಶ್ರೀಕಾಂತನ್ ಅವರ ಕೈಗೆ ಕೊಡಿ' ಅಂತ. ಪತ್ರ ತಲಪಿಸುವ ಮುನ್ನ ಉಳಿದ ಈರ್ವರು ಗೆಳೆಯರಿಗೆ ತೋರಿಸಿದೆ. ದಿಸ್ ಈಸ್ ಎ ಲೆಟರ್ ವಿಚ್ ಆಟ್ ಟು ಬಿ ಪ್ರಿಸರ್ವ್ಡ್ ! (ಕಾಯ್ದಿರಿಸಲರ್ಹವಾದ ಪತ್ರ) ಅಂತ ನಾನು ಹೇಳಿದೆ. ತಮ್ಮ ಕಾಗದ ಚನ್ನಾಗಿದೆ. ಪಾಪ! ಏನೇನೋ ಬರೆದುಕೊಂಡಿದ್ದಾರೆ ಎಂದು ಗೆಳೆಯರು ಹೇಳಿದರು.

ತಾವು ಅವರನ್ನು ಭೇಟಿ ಮಾಡ್ತೀನಿ ಅಂತ ಹೇಳಿದ್ದು ಮಂಗಳವಾರ ಅಲ್ವೇನ್ ಸಾರ್! ಪಾಪ ಅವರು ಸೋಮವಾರಾನೇ ಪುಸ್ತಕ ತಂದಿದ್ರಂತೆ ಸಾರ್, ಅವತ್ತು ನೀವು ಆಬ್‌ಸೆಂಟ್ – ನಾನೂ ಅವರನ್ನು ನೋಡಲಿಲ್ಲ. ನೋಡ್ದೆ — ಆದರೆ ಮಾತನಾಡಿಸಲಿಲ್ಲ. ತಮ್ಮ ಅವಧಿ ದಿನ ಬಂತು – ಮಂಗಳವಾರ. ಅವತ್ತು ಸಾಯಂಕಾಲ 'ಯಾರದ್ದೊ ಭಾಷಣ ಇತ್ತು. ಅಪ್ರೊಡೈಟ ಅವತ್ತು ಸಿಗಲಿಲ್ಲ. ಪಾಪ ಅವತ್ತು ತಂದು ವಾಪಸ್ ತೆಗೆದು ಕೊಂಡು ಹೋಗಿರಬೇಕು. (ಈ ಕಾಗದ ಬರೀತಿರಬೇಕಾದ್ರೆ, ಕಾಗದದ ಮೇಲೆ ಆಕೆಯ ಚಿತ್ರ ಕಾಣುತ್ತಾ ಇದೆ. ಮಾತಾಡ್ತಾ ಇದ್ದಹಾಗಿದೆ.)

ಸರಿ ಬುಧವಾರ ಬಂತು. ಕಾಲೇಜಿಗೆ ಕಡೇದಿನ – ತರ್ಪಣ ಕೊಡೋ ದಿವಸ. ನನಗೂ ಕಡೇದಿನ ಪರೀಕ್ಷೆ. ಅವರ್ಗೂನೂ ಅಷ್ಟೆ. ಅವತ್ತು ಭೇಟಿ ಮಾಡ್ದೆ ಇದ್ರೆ ವಿಧೀನೇ ಇಲ್ಲ. ಇಲ್ದೆ ಇದ್ರೆ ಮನೆಗೆ ಹುಡುಕಿಕೊಂಡು ಹೋಗಬೇಕಾಗಿತ್ತು. ಅದು ಚನ್ನಾಗಿ ಇರ್ತಿರಲಿಲ್ಲ. ಐದು ಗಂಟೆ ಆಯಿತು.

' ಬೆಲ್ಲೂ ' ಆಯಿತು. ಪೇಪರ್ ಕೊಟ್ಟು ತಲೆಕೊಡವಿಕೊಂಡು ಹೊಸಲಿನಿಂ
ಹೊರಗೆ ಬಂದೆ. ' ಅಫ್ರೊಡೈಟ ಅಂಡ್ ಹರ್ ಕಂಪ್ಯಾನಿಯರ್ಸ (ಕನ್ನಡಕ
ಆಕೆ) ವರ್ ಸ್ಪೀಕಿಂಗ್ ವಿತ್ ಕಾಮಣ್ಣ (ಅಫ್ರೊಡೈಟ ಮತ್ತು ಆಕೆಯ ಗೆಳ
ಕಾಮಣ್ಣನ ಜತೆಯಲ್ಲಿ ಮಾತಾಡುತ್ತಿದ್ದರು.) ಸ್ವಲ್ಪ ಹೊತ್ತು ನಿಂತಿದ್ದೆ
ಆಮೇಲೆ ಯಾರದೋ ರಿಜಿಸ್ಟರ್ ನಂಬರ್ ನೋಡೋಕೆ ಅಂತ ಎಕ್ಸಾಮಿ
ನೇಷನ್ ಹಾಲ್‌ಗೆ ಅವರೂ ಅವರ ಫ್ರೆಂಡ್ಸೂ ಹೋದರು. ನಾನೂ ಹೋದೆ
ನನ್ನ ಮುಖ ನೋಡಿ ಅವರು ಮುಂದೆ ಬಂದರು. ಅಲ್ಲದೆ ಅವರು ಪೇಪರ
ಕೊಟ್ಟು ಹೊರಗೆ ಬರೋವಾಗ ನಾನು ಕೂತಿದ್ದ ಜಾಗ ನೋಡಿದ್ದರು
ಆಗಲೇ ನಾನು ಅರ್ಥಮಾಡಿಕೊಂಡಿದ್ದೆ. ಭೇಟಿ ಆಯಿತು. ಏನ್ ಸಾರ್
ಕಾಲೇಜು ಸುವಾಸಿನಿಯರ ಹತ್ತಿರ ಮಾತಾಡಿದ್ದು ಅದೇ ಮೊದಲನೇ ಸಾ
ಸಾರ್ ! ಅನಂತರ ಕನ್‌ವರ್‌ಸೇಷನ್ (ಸಂಭಾಷಣೆ) ಆರಂಭವಾಯಿತು —
' ಪ್ರೊಪೊಸಿಷನ್ ಮೂ ' (ವಿಷಯ ಪ್ರಸ್ತಾಪ) ಮಾಡಿದೋನು ನಾನು
ವಿಷಯ ನಿಮ್ಮ ಕಾಗದ.

ನಾನು :—ಮತ್ತೆ ಮೂರ್ತಿಯವರು ನಿಮಗೊಂದು ಕಾಗದ ಕೊಟ್ಟು ಹೋಗಿ
ದ್ದಾರೆ. (ಹಾಗೆಂದು ಹೇಳಿ ಕಾಗದ ಕೊಟ್ಟೆ).

ಅವರು :—ಓ ! ಯಾಕ್ರಿ ಅವರು ಬರ್ಲೇ ಇಲ್ಲ....ಬರ್ತೀನಿಂತ ಹೇಳಿದ್ರು.
ಮಂಗಳವಾರ ಕಾಲೇಜಿನ ಹತ್ರ ಸಿಕ್ಕುತ್ತೀನೆ ಅಂತ ಹೇಳಿದ್ರು. ' ಐ
ಎಕ್ಸ್‌ಪೆಕ್ಟೆಡ್ ಹಿಂ ' (ಬರುತ್ತಾರೆಂದಿದ್ದೆ)

ನಾನು :—ಇಲ್ಲರೀ ! ಅವರಿಗೆ ಅವರ ಊರಿನಿಂದ ಅದೆಂತಹದೋ....ಸೈಕಲಾ
ಜಿಕಲ್ ಕಾಲ್ - (ಕರುಳಿನಕರೆ) ಬಂತಂತೆ. ' ಸಡನ್ ' ಆಗಿ ಹೊರಟು
ಹೋದರು. (' ಸೈಕಲಾಜಿಕಲ್ ಕಾಲ್ ' ಅಂದಾಗ ಅವರು ನಕ್ಕರು.)

ಅವರು :—ಮತ್ತೆ ಅದೆಲ್ಲೊ ಶ್ರವಣಬೆಳಗೊಳ, ಬೇಲೂರಿಗೆ ಹೋಗ್ತೀನೀಂತ
ಹೇಳಿದ್ರೂ........

ನಾನು :—ಇಲ್ಲ ಹೋಗ್ಲಿಲ್ಲ. ಯಾಕೋ ಬೇಜಾರುಮಾಡಿಕೊಂಡು ಇದ್ದಕ್ಕಿದ್ದ
ಹಾಗೇ ಹೊರಟುಹೋದ್ರು.

ಅವರು :—ಅರರೆ ! ಮತ್ತೆ ಐ ವಾಂಟೆಡ್ ಟು ಪ್ರೆಸೆಂಟ್ ಸಂಥಿಂಗ್.
ನಾನೂ ಏನಾದರೂ ಕಾಣಿಕೆ ಕೊಡುವುದಾಗಿ ಅವರಿಗೆ ಹೇಳಿದ್ದೆ.

ನಾನು :—ಹೌದು. ಹೇಳಿದ್ದಿರಂತೆ. ಆ ವಿಚಾರ ಕಾಗದ್ದಲ್ಲಿ ಬರೆದಿದ್ದಾರೆ. ನೀವೇನೇ ಅವರ ಅಡ್ರಸ್ಸಿಗೆ ಕಳುಹಿಸಿಬಿಡಿ. ಅಡ್ರಸ್ಸು ಕೊಟ್ಟಿದ್ದಾರೆ. ಇಲ್ಲದೆ ಇದ್ದರೆ ನಾನು ಬೆಂಗಳೂರಿಗೆ ಹೋಗಬೇಕು ಅಂತ ಇದ್ದೇನೆ. ಕೊಟ್ಟರೆ ತಗೊಂಡು ಹೋಗುತ್ತೇನೆ. ಅಲ್ಲಿಗೆ ಅವರೂ ಬರ್ತ್ತಾರಂತೆ.

ಅವರು :—(ಒಂದು ಸೆಕೆಂಡ್ ಯೋಚಿಸಿ) ಹಾಗೇ ಮಾಡ್ರಿ. ಟು ಬಿ ಆನ್ ದಿ ಸೇಫರ್ ಸೈಡ್ (ಇದೇ ಒಳ್ಳೆಯದು) ನೀವೇ ತಗೊಂಡ್ಹೋಗಿ ಕೊಟ್ಟುಬಿಡಿ. ನಾನು ಮತ್ತೆ ಯಾಕೆ ಕಳುಹಿಸೋದಕ್ಕೆ ಹೋಗಲಿ. ನಾನು ಮೂರು ದಿನದಿಂದ ತರುತ್ತಾ ಇದ್ದೆ. ವಾಪಸ್ಸು ತಗೊಂಡು ಹೋಗ್ತಾ ಇದ್ದೆ.

ನಾನು :—ಹಾಗಾದರೆ ಕೊಡಿ. ತಲಪಿಸುತ್ತೇನೆ.

ಅವರು :—ಪ್ಲೀಸ್ ಒನ್ ಮಿನೀಟ್....ಲೇಡಿಸ್ ರೂಂನಲ್ಲಿ ಇಟ್ಟಿದ್ದೇನೆ. ತಂದುಕೊಡುತ್ತೇನೆ.

(ಪುಸ್ತಕ ತಂದು ಡೆಸ್ಕಿನ ಮೇಲಿಟ್ಟರು. ತಗೊಂಡೆ)

ನಾನು :—ನೀವು ಅವರಿಗೆ ಖಂಡಿತ ಕಾಗದ ಬರೀಬೇಕಂತೆ.

ಅವರು :—ಬೇಡ್ರಿ....ಯಾಕ್ರೀ ಸುಮ್ಮನೆ ಬರೀಬೇಕು !

ನಾನು :—ಇಲ್ಲರೀ, ಪಾಪ ಅವರು ಹೇಳಿದ್ದಾರೆ. ನೀವು ಖಂಡಿತ ಬರೀ ಬೇಕಂತೆ.

ಅವರು :—ಬೇಡ್ರಿ, ಕಾಗದ ಬರೆಯೋದು ಬೇಡ್ರಿ........

(ಪತ್ರವ್ಯವಹಾರ ಮಾಡಿದರೆ ಮನೇಲಿ ಅಥವಾ ಇನ್ನೊಬ್ಬರು ಅವರ ವಿಷಯದಲ್ಲಿ ತಪ್ಪು ತಿಳಿಯುತ್ತಾರೆ ಅಂತನ್ನೊ ಭಾವನೆಯಿಂದ ಹಾಗೆಂದಿರ ಬಹುದು.)

ನಾನು :—ಪರೀಕ್ಷೆ ಮುಗಿಯಿತು ಎಂದು ತೋರುತ್ತೆ.

ಅವರು :—ಹೂಂ, ಮುಂದೆ ಹನಿಗಿರಿಗೆ ಹೋಗ್ತೀನಿ.

ನಾನು :—ನಾನಿನ್ನು ಬರುತ್ತೇನ್ರಿ.

ಅವರು :—ಓ ಎಸ್, ದಯವಿಟ್ಟು ಏನೂ ತಿಳಿಯಬಾರದು. ತುಂಬಾ ಥ್ಯಾಂಕ್ಸ್ ಅಂತ ಹೇಳಿ ಅವರಿಗೆ !

— ಇದು ಅಪ್ರೊಡೈಟೆಯ ಕಡೆ ಮಾತು. ಪರ್ ಹ್ಯಾಪ್ಸ್ ಇಟ್ ಮೆ

ಬಿ ದಿ ಲಾಸ್ಟ್ ವರ್ಡ್ ಫಾರ್ ಎವರ್ (ಬಹುಶಃ ಇದೇ ಎಂದೆಂದಿಗೂ ಕಡೆ ಮಾತೋ ಏನೋ....) ನನಗೇನೋ ಅವರ ಉತ್ತರ ತೃಪ್ತಿಗೊಳಿಸಲಿ ಅವರು ಇನ್ನೂ ಹೆಚ್ಚಿಗೆ ಮಾತು ಬೆಳಸಿದ್ರೆ ನಿಮ್ಮ ಒಳತೋಟಿಯನ ಅವರ ಮುಂದೆ 'ಹಲಸಿನ ತೊಳೆ' ಬಿಡಿಸಿದ ಹಾಗೆ ಬಿಡಿಸಿ ಹೇಳಬೇಕೆಂದಿದ್ದೆ ಈ ಸಂಭಾಷಣೆ ನಿಮ್ಮ ಮೇಲೆ ಏನು ಪರಿಣಾಮ ಮಾಡುತ್ತೋ ನಾನ ಹೇಳಲಾರೆ.

ಮುನಿವರ ಚಿಂತೈಸದಿರೈ. ಇಲ್ಲಿಗೆ ಅಪ್ರೊಡೈಟ ಎಂಬ ಸಾಧ್ವೀಮಣಿಯ ಚರಿತೆಯ ಪೂರ್ವಾರ್ಧ ಮುಗಿದುದು........

ಪರೀಕ್ಷೇಲಿ ಬರದೇ ಇದ್ರೂ ಕಾರ್ಯರೂಪದಲ್ಲಿಯಾದರೂ ತನ್ನಿ ಸಾರ್— 'ಲಾಸ್ಟ್ ರೈಡ್ ಟುಗೆದರ್' ಸಂದೇಶಾನಾ ! ಅವರಲ್ಲಿ ಹೇಳೋಹಾಗ 'ಇಲ್ಲಿ ಅಪೂರ್ಣಗೊಂಡ ನಮ್ಮ ಆಸೆ ಆಕಾಂಕ್ಷೆಗಳು, ಮುಂದಿನ ಜನ್ಮದಲ್ಲಿ ಪೂರ್ಣಗೊಳ್ಳುತ್ತವೆ........' ಮರೀಬೇಡಿ ಸಾರ್....

ಉತ್ತರಾರ್ಧವನ್ನು ಪೇಳ್ವೆನ್ ಕೇಳ್........

ವಿಷಯ ಹೆಚ್ಚಿಗೆ ಏನೂ ಇಲ್ಲ. ಅಪ್ರೊಡೈಟಿಯ ವಿಚಾರ ನಿಮಗೆ ಅರ್ಥ ಗೊತ್ತಾದ ಹಾಗೆ ಆಯಿತು. ಮುಂದಿನ ಪ್ರಶ್ನೆ ಅವರು ಯಾವ ಯಾವ ಪುಸ್ತಕ ಪ್ರೆಸೆಂಟ್ ಮಾಡಿದ್ದಾರೆ ಅಂತ. ಒಂದು ಪುಸ್ತಕ ಅಲ್ಲಾ ಸಾರ್! ಮೂರು ಪುಸ್ತಕ – ಅವರು ಪ್ರೆಸೆಂಟ್ ಮಾಡಿದ್ದು. ಬಹಳ ಕ್ಲವರ್ (ಬುದ್ಧಿವಂತರು) ಆಗಿದ್ದಾರೆ ಸಾರ್. ಒಂದು ಕಾಸೂ ಅವರು ಮೇಲೆ ಹೊತ್ತುಕೊಂಡಿಲ್ಲ. ನೀನು ನಾಲ್ಕು ರೂಪಾಯಿನ ಪುಸ್ತಕ ಪ್ರೆಸೆಂಟ್ ಮಾಡಿದ್ರೆ ಅವರೂನೂ ಸರಿಯಾಗಿ ನಾಲ್ಕು ರೂಪಾಯಿನ ಪುಸ್ತಕಾನ್ನೇ ಪ್ರೆಸೆಂಟ್ ಮಾಡಿದ್ದಾರೆ.

ಅವು ಇವು :

ಕಬೀರರ ಗೀತೆಗಳು
ದೀಪದ ಮಲ್ಲಿ
ನನ್ನತಾಯಿ – ಬಾಪು

ಇವು ಮೂರು ಪುಸ್ತಕಗಳಲ್ಲಿ ಅವರು ಏನೇನೋ ಹಾರೈಕೆ ಬರೆದಿದ್ದಾರೆ ಸಾರ್.

ಪುಸ್ತಕ ತಂದು ಟೇಬಲ್ ಮೇಲೆ ಇಟ್ಟಿದ್ದೆ. ಅದನ್ನು ನೋಡಿದ ಸ್ನೇಹಿತರೊಬ್ಬರು "ಅಪ್ರೊಡೈಟೆ ಮೆ ಬಿ ಎ ಗರ್ಲ್ ಇನ್ ದಿ ಕಾಲೇಜ್ (ಅಪ್ರೊಡೈಟೆ – ಕಾಲೇಜು ಹುಡುಗಿ ಇರಬಹುದು) ಎಂದರು. ಅದಕ್ಕೆ ನಾನು,

"ನೊ ಇಟ್ ಈಸ್ ಎ ಸ್ಪಿರಿಟ್" (ಅಲ್ಲ. ಆಕೆ ಒಂದು ಶಕ್ತಿ) ಅಂದೆ.

ಏನು ಸಾರ್ ತಮ್ಮ ಮನೆಯಲ್ಲಿ ನಡೆದಿರೋ ಕ್ರಾಂತಿಕಾರಕ ಬದಲಾವಣೆಗಳು? ವಿಶದವಾಗಿ ಬರೆಯಿರಿ. ಬೆಂಗಳೂರಿಗೆ ಯಾವಾಗ ಬರುತ್ತೀರಿ? ಪಾಪ ಶ್ರೀಧರ್‌ಗೆ ಇನ್ನೂ ಪರೀಕ್ಷೆಗಳು ನಾಳೆಯಿಂದ! ಪ್ರಾಣಿ ಬೇಜಾರು ಪಟ್ಟುಕೊಂಡಿದೆ!

ಇನ್ನೊಂದು ವಿಷಯ. ಹೇಳೋಕೆ ತುಂಬಾ ದುಃಖವಾಗುತ್ತೆ ಸಾರ್. ಕಣ್ಣಲ್ಲಿ ನೀರು ಬರುತ್ತೆ. ನಿಮ್ಮ ಕಣ್ಣಲ್ಲಿಯೂ ನೀರು ಬಂದೀತು. 'ಕವಿಯ ಹೆಸರು ಉಳಿಯಿತು, ಕಾವ್ಯ ಹಾಳಾಯಿತು.' ಕಲಾವಿದನಿಂದ ಸೃಷ್ಟಿಯಾದ ಕಲಾಮಂದಿರದ ನಿಮ್ಮ 'ಋಷಿಕನ್ಯೆ', ನನ್ನ 'ಕಲ್ಪನಾ ಸುಂದರಿ', ಆಗಿದ್ದ ಆ ಭವ್ಯವಾದ ಚಿತ್ರ ಕಲಾವಿದನಿಂದಲೇ ಹತವಾಯಿತು. ಈಗ ಕಲಾಮಂದಿರ ಭಣ ಭಣ! ಏನೋ ಮಾಡುವುದಕ್ಕೆ ಹೋಗಿ ಋಷಿಕನ್ಯೆಯನ್ನು ಪೂರ್ತಿ ಅಳಿಸಿದ – ಬಾನಾಡಿ. ಕೊಠಡಿಗೆ ಬಂದವರೆಲ್ಲಾ "ಅಯ್ಯೋ ಯಾಕ್ರಿ ಹೀಗೆ ಮಾಡಿದ್ರಿ? ಎಷ್ಟು ಚನ್ನಾಗಿತ್ತಲ್ಲರಿ?" ಅಂತಂದ್ರು. ಆ ಚಿತ್ರದ ಬಳಿ ಇದ್ದ ಗೆಳೆಯರ ಕಾವ್ಯವಾಹಿನಿ "ಯಾರ ಚೆಲುವನು ಕಂಡು ಮನದಿ ಯೋಚಿಸುತಿರ್ಪೆ" ಕಣ್ಣೀರು ಸುರಿಸುತ್ತಾ ಇನ್ನೂ ಹಾಗೆಯೇ ಇದೆ. ಗಂಡ ಹೋದಮೇಲೆ ಮಾಂಗಲ್ಯ ಹೋದರೇನು ಇದ್ದರೇನು? ಬಾನಾಡಿ ಇಂತಹ ಕೆಲಸ ಮಾಡಬಹುದೇನ್ ಸಾರ್!

ಕಾಗದ ಸುಮ್ಮನೆ ಮುಂದುವರಿಸುವುದಿಲ್ಲ. ನಾವೆಲ್ಲಾ ಆರೋಗ್ಯವಾಗಿದ್ದೇವೆ. ಶ್ರೀಧರ್ ಪರೀಕ್ಷೆ ಆದಮೇಲೆ ಬರೀತಾರಂತೆ. ವಿಷಯಗಳು ತಲೆಯಲ್ಲಿ ಕಲಬೆರಕೆಯಾಗಿದೆ. ಗೋಡೆ ನೋಡಿದರೆ ಹೊಟ್ಟೆ ಉರಿಯುತ್ತೆ.

**"ಶಾಂತಿ, ಸಂಯಮ, ನಿನ್ನ ಕಾಯುತ್ತಲಿರಲಿ."**

ಓಂ ಶಾಂತಿ, ಶಾಂತಿ, ಶಾಂತಿಃ

ಇತಿ,

ಶ್ರೀಕಾಂತನ್

ಶ್ರೀಕಾಂತನ್‌ರವರ ಕಾಗದ ಓದಿ ಅವರೆಂದುಕೊಂಡಿದ್ದಷ್ಟು ನಿರಾ ನನಗಾಗಲಿಲ್ಲ. ಅಪ್ರೊಡೈಟೆಯ ಬಗ್ಗೆ ನಾನು ಒಂದು ನಿರ್ಧಾರಕ್ಕೆ ಬಂದು ಎಷ್ಟೋ ದಿನಗಳಾಗಿತ್ತು. ಆಕೆಯೊಂದು ತಾರೆ. ನೋಡಿ ಆನಂದಿಸೋಣ. ಕೈಚಾಚಿ ಕಿತ್ತುಕೊಳ್ಳುವ ಸಾಹಸ ಮಾತ್ರ ಬೇಡ. ಅಲ್ಲದೆ ಆಕೆಯೂ ನಾನೂ ಗೆಳೆಯರಾಗಿರಲು ಒಪ್ಪಂದ ಮಾಡಿಕೊಂಡ ಮೇಲೆ ನಿರಾಶೆಗೆ ಅವಕಾಶವೆಲ್ಲಿ? ಪಾಲಿಗೆ ದೊರೆತದ್ದು ಪಂಚಾಮೃತವೆಂದು ಸವಿಯೋಣ — ಎನ್ನುವಷ್ಟು ಆಶಾವಾದಿಯಾಗಿದ್ದೆ. ಜತೆಗೆ ಗೆಳೆಯ ಬಾನಾಡಿಯ ಪದ್ಯ ಬೇಸರದ ಹೊತ್ತಿನಲ್ಲೆಲ್ಲಾ ಮನಸ್ಸಿಗೆ ಸಮಾಧಾನ ಕೊಡುವ ದಿವ್ಯ ಮಂತ್ರ ವಾಗಿತ್ತು. ಅವರು ಟಿ.ಎಸ್. ಇಲಿಯಟ್ ರವರ 'ಆಯ್ದ ಕವನಗಳು' ಕವನ ಸಂಗ್ರಹದಲ್ಲಿ ಮೂರು ಚರಣದ ಗೀತೆಯೊಂದನ್ನು, ನನಗಾಗಿ ರಚಿಸಿ ಕೊಟ್ಟಿದ್ದರು:

**ನೆನಪು:**

ಬೆಂದಮನ, ನೊಂದತನು,
ಹೃದಯ ಬರಿದಾಗಿಹುದು,
ಆಗಲಿಕೆಯ ಕಾಲದಲಿ
ಮಾತು ಮೂಕಾಗಿಹುದು.

ಕಳೆದೆರಡು ವರ್ಷಗಳ
ಸವಿನೆನಪ ಮರೆಯದಿರು.
ಹೆಜ್ಜೆಹೆಜ್ಜೆಗು ನಡೆದ
ಘಟನೆಗಳ ನೆನೆಯುತಿರು.

ಮಧುತುಂಬಿ ಕೊಡಲಿರ್ದ
ಕುಸುಮ ಮರೆಯಾಗಿರಲು
ಹೃದಯದಂಬುಧಿಯನ್ನು
ಬಿರುಗಾಳಿ ಕಲಕಿರಲು

**ಶಾಂತಿ, ಸಂಯಮ, ನಿನ್ನ ಕಾಯುತ್ತಲಿರಲಿ.**

ಈ ಗೀತ ಹಾಡಿಕೊಳ್ಳುತ್ತಾ ನನ್ನ ಮುಂದಿನ 'ಗೃಹತ್ಯಾಗ'ಕ್ಕಾಗಿ ಪ್ರಯಾಣ ಸನ್ನದ್ಧನಾಗುತ್ತಿದ್ದೆ. ಮೈಸೂರಿನಿಂದ ಪತ್ರ ಒಂದು ಬಂತು. ಅದರಲ್ಲಿ ಗೆಳೆಯ ಶ್ರೀಧರ್ ಹೀಗೆ ಬರೆದಿದ್ದರು:

ಗೆಳೆಯ ಮೂರ್ತಿ,

....ಶ್ರೀ ಅನಂತ್ ಅವರು ಏನೋ ಮಹದ್ವಿಷಯದ ಮೇಲೆ ಕಾಗದ ಬರೆದಿದ್ದಾರಂತೆ. ಅದನ್ನು ಓದಿ ಕನಸು ಕಾಣುತ್ತಿದ್ದೀರಾ? ಮಹಲ್ ಕಟ್ಟುತ್ತಿದ್ದೀರಾ? ಅಥವಾ ನಾಟಕವಾಡ್ತಿದ್ದೀರಾ? ಇಲ್ಲವೆ ಕದನವಾಡ್ತಿದ್ದೀರಾ? ಅಥವಾ ಕಣ್ಣೀರು ಕೋಡಿ ಹರಿಯೋ ಹಾಗೆ ಪ್ರಸಂಗಗಳು ಏನಾದ್ರು ನಡೆದಿವೆಯೇ?

"ಎಲ ಎಲಾ ಮಾರ್ಜಾಲ! ಇವನಿಗೆ ಇಷ್ಟು ಧೈರ್ಯ ಬಂತೇ" ಅಂತ ನಿಮ್ಮ ಅಂತರಾತ್ಮ ಕೇಳಬಹುದು, ಅಚ್ಚರಿಪಡಬಹುದು. ಏನ್ಮಾಡ್ಲಿ ಸಾರ್. ಪರೀಕ್ಷೆ ಭಾರಾನ ತಲೆಯಿಂದ ಇಳಿಸಿದ್ದೀನಿ. ಅದು ಹುಚ್ಚು ಹುಚ್ಚಾಗಿ ನನ್ನ ಕೈಯಿಂದ ಬರೆಸ್ತಾ ಇದೆ........

ಈ ದಿವಸ ಶ್ರೀ ಅನಂತ್ ಅವರ ಮನೆಗೆ ಹೋಗುತ್ತೀನಿ. ಏನೇನೋ ಭಾರಿಭಾರಿ ಕಾರ್ಯ ಅವರು ನಡೆಸಿಬಿಟ್ಟಿದ್ದಾರಂತೆ! ಎಲ್ಲಾ ವಿಷಯವನ್ನು ವಿಶದವಾಗಿ ತಿಳಿದುಕೊಂಡು, ನೀವು ಬೆಂಗಳೂರಿಗೆ ಬಂದ್ರೆ, ಮುಖ್ತ ತಿಳಿಸ್ತೀನಿ. ಇಲ್ಲವೇ ಕಾಗ್ದ ಬರೀತೀನಿ.

ಇಂತು ನಿಮ್ಮವ
ಶ್ರೀಧರ್

ಮೈಸೂರಿನಲ್ಲಿ ಅಂತಹ ಮಹದ್ವಿಷಯ ಏನು ನಡೆದಿರಬಹುದು?

ಈ ಪ್ರಶ್ನೆಯ ಉತ್ತರಕ್ಕಾಗಿ ನಾನು ಹೆಚ್ಚು ದಿನ ಕಾಯಬೇಕಾಗಲಿಲ್ಲ. ಮೂರನೆಯ ದಿನದ ಟಪ್ಪಾಲಿನಲ್ಲಿ ಅನಂತ್ ಅವರ ಪತ್ರ ಬಂತು. ಅವರು ಹೀಗೆ ಬರೆದಿದ್ದರು:

ಪ್ರಿಯ ಮೂರ್ತಿ,

ನಿಮಗೆ ಒಳ್ಳೆಯ ಸುದ್ದಿಯನ್ನು ತಿಳಿಸಲು ನನಗೆ ಬಹಳ ಆನಂದವಾಗುತ್ತದೆ. ಅಪ್ರೊಡೈಟ ನಿಮ್ಮವರಾಗಲು ಸಿದ್ಧರಾಗಿರುವರು. ನೀವು

ಆಫ್ ಕೋರ್ಸ್ ಸಿದ್ಧ. ಆದರೆ ನಿಮ್ಮ ತಂದೆತಾಯಿಯವರನ್ನು ಒಪ್ಪಿಸ ಬೇಕಾಗಿದೆ. ಶ್ರೀ ಜಿ....ಅವರಿಗೆ ಅಫ್ರೊಡೈಟ ಎಲ್ಲಾ ವಿಷಯಗಳನ್ನು ತಿಳಿಸಿದ್ದಾರೆ. ಅವರು ನಿನ್ನೆ ರಾತ್ರಿ ನನಗೆ ಸಿಕ್ಕಿ ಈ ಬಗ್ಗೆ ಮಾತನಾಡಿದರು. ನಾನು ನಿಮಗೆ ಕೂಡಲೇ ಕಾಗದ ಬರೆಯುವುದಾಗಿ ಹೇಳಿ ಇದನ್ನು ಬರೆಯು ತ್ತಿದ್ದೇನೆ. ನಿಮ್ಮ ಕಡೆಯ ಒಪ್ಪಿಗೆ ಸಿಕ್ಕಿದೊಡನೆಯೇ ಅಫ್ರೊಡೈಟಿಯ ತಂದೆಯೊಂದಿಗೆ ಜಿ....ಅವರು ಎಲ್ಲಾ ತೀರ್ಮಾನಮಾಡುವರು. ನಾನೂ ಅವರಿಗೆ ನೆರವಾಗುತ್ತೇನೆ. ಇತ್ತ ನಿಮ್ಮ ಕಡೆಯವರನ್ನು ಒಪ್ಪಿಸಬೇಕು. ಈ ಮಧ್ಯೆ ನಿಮ್ಮ ಜಾತಕ ನನಗೆ ತಕ್ಷಣ ಕಳುಹಿಸಿ. ಅಂತೆಯೇ ಲೆಟ್ ಮಿ ನೊ ಇಫ್ ಯುವರ್ ಪೇರೆಂಟ್ಸ್ ಅಂಡ್ ಯು ವುಡ್ ಅಗ್ರಿ ಫಾರ್ ಇಟ್, ಈವನ್ ಇಫ್ ಟೂ ಹಾರೋಸ್ಕೋಪ್ಸ್ ಡು ನಾಟ್ ಅಗ್ರಿ. (ನಿಮ್ಮಿಬ್ಬರ ಜಾತಕಗಳು ಕೂಡಿ ಬರದಿದ್ದರೂ ಈ ವಿವಾಹಕ್ಕೆ ನೀವೂ ಹಾಗೂ ನಿಮ್ಮ ತಂದೆತಾಯಿಗಳು ಒಪ್ಪುತ್ತೀರೊ ಇಲ್ಲವೊ ಎನ್ನುವುದನ್ನು ತಿಳಿಸಿರಿ). ನಾನು ನಿಮ್ಮ ಊರಿಗೆ ಬರಬೇಕಾದ ಅವಶ್ಯಕತೆ ಇದ್ದರೆ, ಬಂದು ನಿಮ್ಮವರಿಗೆ ತಿಳಿಯ ಹೇಳಿ ಒಪ್ಪಿಸಲು ಸಿದ್ಧ. ನಾನೂ, ಜಿ....ಅವರೂ ' ಬೋತ್ ಆಫ್ ಅಸ್ ವೆರಿ ಮಚ್ ಇಂಟ್ರೆಸ್ಟೆಡ್ ಇನ್ ದಿ ಹ್ಯಾಪಿನೆಸ್ ಆಫ್ ಬೋತ್ ಆಫ್ ಯು. ಈ ಅಫ್ರೊಡೈಟ – ಮಾರ್ಕೊಪೋಲೊ.* (ನಾನೂ ಮತ್ತು ಜಿ. ಅವರೂ ನಿಮ್ಮಿಬ್ಬರ ಸುಖಸಂತೋಷದಲ್ಲಿ ತುಂಬಾ ಆಸಕ್ತಿ ಹೊಂದಿದ್ದೇವೆ.) ಒಕ್ಕೂಟ ಮಾಡಿಸಿಯೇ ತೀರಿಸಬೇಕೆಂದು ಇದೇವೆ. ಆದ್ದರಿಂದ ಈ ಕಾಗದ ಕಂಡಕೂಡಲೇ ತಕ್ಷಣ ಕಾಗದ ಬರೆದರೂ ಸರಿ, ಬೆಂಗಳೂರಿಗೆ ಬಂದರೂ ಸರಿ. ಯಾವುದನ್ನೂ ಬರೆಯಿರಿ. ಅಫ್ರೊಡೈಟಿಯ ತಂದೆ ಇಷ್ಟರಲ್ಲಿಯೇ ಇಲ್ಲಿಗೆ ಬರಲಿರುವರು. ಅದೇ ವೇಳೆಗೆ ನಿಮ್ಮ ಪತ್ರ ಬಂದರೆ ನಾವು ಯಾವುದಕ್ಕೂ ಮುಂದೆ ಹೆಜ್ಜೆ ಇಡಬಹುದು. ಕೂಡಲೇ ಪತ್ರ ಬರೆಯಿರಿ. ಮರೆಯಬೇಡಿ.

ಇತಿ,

ಅನಂತ್

---

* ನನ್ನ ಸಾಹಸಕೃತ್ಯಗಳನ್ನು ಮಾರ್ಕೊಪೋಲೋನ ಸಾಹಸಗಳು ಎಂದು ಗೆಳೆಯರು ಕರೆಯುತ್ತಿದ್ದರು.

ಪತ್ರ ಓದುತ್ತಾ ಓದುತ್ತಾ ನನಗೆ ಎಚ್ಚರ ತಪ್ಪುವಂತಾಯಿತು. ಇವೆಲ್ಲಾ ಕನಸೋ ನನಸೋ ಎಂಬುದು ಕೆಲವು ಕಾಲ ನನಗೆ ತಿಳಿಯದೆ ಹೋಯಿತು. ಈಗ ನನ್ನ ಹೃದಯ ಡವಡವನೆ ಹೊಡೆದುಕೊಂಡಿತು. ಕಡೆಗೂ ಅಪ್ರೊಡೈಟ ನನ್ನವಳಾಗಲು ಸಿದ್ಧಳಾದಳೆ? ........ಈ ಸುದ್ದಿಯನ್ನು ನಂಬಲಾಗಲಿಲ್ಲ....ಪತ್ರವನ್ನು ಮತ್ತೆ ಓದಿಕೊಂಡೆ. ಹೌದು....ಆಕೆ ನನ್ನ ಜತೆಗಾತಿಯಾಗಿ ಬಾಳಲು ಸಿದ್ಧಳಾಗಿದ್ದಾಳೆ....ಹೀಗೆಂದು ಅನಂತ್ ಬರೆದಿದ್ದಾರೆ ....ಅವರೆಂದೂ ಸುಳ್ಳು ಬರೆಯುವವರಲ್ಲ. ಇಂತಹ ವಿಷಯಗಳಲ್ಲಿ ಯಾರು ತಮಾಷೆ ಮಾಡುತ್ತಾರೆ....ಆದುದರಿಂದ ನಾನು ಬಂದನಂತರ ಮೈಸೂರಿನಲ್ಲಿ, ಅಪ್ರೊಡೈಟಿಯ ತಲೆಯಲ್ಲಿ ಮನೋವಿಪ್ಲವ ನಡೆದಿರಬೇಕು! ಆಕೆ ತಾನು ಮಾಡಿದುದು ತಪ್ಪೆಂದು ಅರಿತುಕೊಂಡು, ಕಾರ್ಯ ಮಿಂಚಿಹೋಗುವ ಮುನ್ನ ಶ್ರೀ ಜಿ....ಅವರ ಹೆಂಡತಿಯ ಮೂಲಕ ಜಿ....ಅವರಿಗೆ ತಿಳಿಸಿ, ಅವರ ಮೂಲಕ ಅನಂತ್ ಅವರಿಗೆ ಹೇಳಿಸಿದ್ದಾಳೆ! ನನ್ನ ಹಾಗೂ ಅನಂತ್ ಅವರ ಬಾಂಧವ್ಯ ವನ್ನು ಬಲ್ಲ ಅಪ್ರೊಡೈಟಿ ಸರಿಯಾದ ವ್ಯಕ್ತಿಯನ್ನೇ ಆರಿಸಿ ಈ ವಿಷಯದಲ್ಲಿ ಮುಂದಕ್ಕೆ ಬಿಟ್ಟಿದ್ದಾಳೆ! ....ಈಗ ನನಗೆ ಹೇಳಲಾರದಷ್ಟು ಹಿಗ್ಗು, ಆನಂದ. ಈ ವಿಷಯವನ್ನು ಯಾರೊಂದಿಗಾದರೂ ಹೇಳಿಕೊಂಡು ಪಾಲುಗೊಳ್ಳ ಬೇಕೆಂಬ ಉತ್ಕಟಾಕಾಂಕ್ಷೆ. ಆದರೆ ಈ ವಿಷಯ ಪ್ರಸ್ತಾಪ ಯಾರೊಂದಿಗೆ ಮಾಡುವುದು? ಹೇಗೆ ಮಾಡುವುದು? ....ಯಾರಿಗಾದರೂ ಹೇಳಿದರೆ ಹೇಗೋ ಏನೋ. ನನ್ನ ನಡತೆಯ ಬಗ್ಗೆ ಸಂಶಯ ತೋರಿದರೆ....?

ಒಂದು ದಿನ ತಾಯಿಯವರಿಗೆ ಅಪ್ರೊಡೈಟಿಯ ಕಥೆಯನ್ನು ಮೊದ ಲಿನಿಂದ ಕಡೆಯತನಕ ಹೇಳಿ, ಗೆಳೆಯ ಅನಂತ್ ಅವರ ಪತ್ರವನ್ನೂ ಓದಿದೆ. ನನ್ನ ಮಾತೆಲ್ಲವನ್ನೂ ಸಾವಧಾನವಾಗಿ ಆಲಿಸಿ ತಾಯಿಯವರು ಹೇಳಿದರು.

"ಅವಳು ಯೋಗ್ಯಮನೆತನದವಳಾಗಿದ್ದು, ನಡೆನುಡಿಯಲ್ಲಿ ಕೊಂಕಿಲ್ಲ ದವಳಾಗಿದ್ದರೆ....ಓದಿದ್ದರೇನಂತೆ! ಯೋಗ್ಯವಾಗಿ ಬಾಳುತ್ತಾಳೆ. ನಿನಗೆ ಅವಳನ್ನು ಮದುವೆಯಾಗಲು ಆಸೆಯಿದ್ದರೆ ನಾನೇಕೆ ಬೇಡ ಎನ್ನಲಿ! ಮುಂದೆ ಬಾಳುವವರು ನೀವು. ನಿಮ್ಮಿಷ್ಟದಂತೆಯೇ ನಡೆಯಲಿ.....ಆದರೆ ಈ ವಿಷಯ ಈಗ ಎತ್ತುವುದು ಬೇಡ. ಅಕ್ಕನ ಮಗಳ ಸೆರೆಯಿಂದ ಬಿಡಿಸಿಕೊಂಡಮೇಲೆ ಆ ಮಾತಾಡೋಣ."

ತಾಯಿಯವರ ಮಾತು ಸಮಂಜಸವೆನಿಸಿತು.

ಈಗ ಅಪ್ರೊಡೈಟ ನನಗೆ ಮುಗಿಲ ಮಲ್ಲಿಗೆಯಾಗಿ ತೋರಲಿಲ್ಲ. ಮನೆಯ ಮುಂದಿನ ಬನದಲ್ಲಿ ಅರಳಿದ ಮಲ್ಲಿಗೆಯಾಗಿ ತೋರಿದಳು. ಅದನ್ನು ಯಾವಾಗ ಬೇಕಾದರೂ ಕಿತ್ತು ನನ್ನದು ಮಾಡಿಕೊಳ್ಳಬಹುದಿತ್ತು....

ಅನಂತ್ ಅವರಿಗೆ ನಾನು ಏನೂ ಕಾಗದ ಬರೆಯಲಿಲ್ಲ. ಬರೆಯುವುದಾದರೂ ಏನು? ಮೈಸೂರಿನಿಂದ ಬಂದಮೇಲೆ ಊರಿನ ಸಂಗತಿಗಳು ನನ್ನನ್ನು ವಿಚಾರಪರನನ್ನಾಗಿ ಮಾಡಿದ್ದುವು. ಅಪ್ರೊಡೈಟಿಯ ಬಗ್ಗೆ ಕಟ್ಟಿದ್ದ ನನ್ನ ಕನಸು ಹುಸಿನೆಲದ ಮೇಲೆ, ಸೌಧವೆಬ್ಬಿಸುವ ಸಾಹಸವಾಗಿ ತೋರಿತ್ತು. ನೆಲ ಭದ್ರಪಡಿಸಿಕೊಳ್ಳದೆ ಹೋದರೆ ಕಟ್ಟಡಕ್ಕೆ ಅಪಾಯ ತಪ್ಪಿದ್ದಲ್ಲ.

ಈಗ ಅಪ್ರೊಡೈಟಿಯ ಬಗ್ಗೆ ನನಗೆ ಸಂಶಯವಿಲ್ಲ. ಆಕೆ ನನ್ನವಳಾಗಲು ಸಿದ್ಧವಾಗಿದ್ದಾಳೆ! ಆಕೆ ನನಗಾಗಿ ಕೆಲವು ತಿಂಗಳು ಕಾಯಲಾರಳೆ?

ನನಗೆ ಈಗ ಸಂದಿಗ್ಧ ಪರಿಸ್ಥಿತಿ. ನನ್ನ ಮತ್ತು ಅಪ್ರೊಡೈಟಿಯ ವಿವಾಹಕ್ಕೆ ತಂದೆಯವರು ಸಮ್ಮತಿಸುವುದಿಲ್ಲ. ಅವರನ್ನು ಒಲಿಸಿಕೊಳ್ಳದೆ ನಮ್ಮ ವಿವಾಹ ನಡೆಯುವಂತಿಲ್ಲ! ಅವರನ್ನು ಒಲಿಸಿಕೊಳ್ಳಲು ಒಂದೇ ದಾರಿ. ಅದು ಅಕ್ಕನ ಮಗಳ ಪಾಣಿಗ್ರಹಣ! ಹೀಗೆ ನನ್ನ ಮದುವೆಯ ವಿಷಯ 'ಮೂರಾಬಟ್ಟೆ' ಯಾಗಿರುವಾಗ ಅಪ್ರೊಡೈಟಗೆ — ಅವಳ ತಂದೆಗೆ — ಏನೆಂದು ತಿಳಿಸಲಿ?

ಇನ್ನು ಕೊಂಚ ದಿನಗಳಲ್ಲೇ ಅನಂತ್ ಬೆಂಗಳೂರಿಗೆ ಬರುವವರಿದ್ದರು. ಆಗ ಅವರನ್ನು ಕಂಡು ಹೇಳುವುದು ಉತ್ತಮವೆಂದು ನಾನು ಯಾವುದನ್ನೂ ಬರೆಯದೆ ಸುಮ್ಮನಾದೆ.

ಅಪ್ರೊಡೈಟ ಸ್ನೇಹದ ಕಾಣಿಕೆಗಾಗಿ ಕೊಟ್ಟಿದ್ದ ಪುಸ್ತಕಗಳು ನನಗೆ ತಲುಪಿದುವು.

"ಯುಗಾದಿಯ ಶುಭದಿನದಲ್ಲಿ, ತಮ್ಮ ಭವಿಷ್ಯದ ಜೀವನ ಬೆಳ್ಬೆಳಗಿನಲ್ಲಿ ಬೆಳಗಲೆಂದು ಶುಭಕೋರಿ, ದೀಪದ ಮಲ್ಲಿಯ ದೀವಿಗೆಯ ಕುಡಿ ಬೆಳಕನ್ನು, ನಿಮ್ಮೆಡೆಯಲಿಟ್ಟಿಹೆನು."

"ಜಗನ್ನಿಯಾಮಕನು ಹೊಸವರ್ಷದಲ್ಲಿ ತಮಗೆ ಸಕಲ ಸನ್ಮಂಗಳವನ್ನು ಉಂಟುಮಾಡಲಿ."

— ಎಂಬುದಾಗಿ "ದೀಪದ ಮಲ್ಲಿ" ಪುಸ್ತಕದಲ್ಲಿ ಬರೆದಿದ್ದಳು.

'ನನ್ನ ತಾಯಿ–ಬಾಪು' ಎನ್ನುವ ಮನೂಬೆನ್ ಗಾಂಧಿಯ ಕಿರುಹೊತ್ತಿಗೆಯಲ್ಲಿ—

"ಗೆಳೆಯನಿಗೆ ಸವಿನೆನಪಿನೊಂದಿಗೆ ಇತ್ತ ಕಾಣಿಕೆ ಇದು" — ಎಂದು ತಿಳಿಸಿ ತನ್ನ ಹೆಸರನ್ನು ಬರೆದಿದ್ದಳು.

"ಅಮರ ಕವಿ ರವೀಂದ್ರರ ಕವಿವಾಣಿಯಿಂಚರ, ಅನಂತವೂ ನಿಮ್ಮ ಕರ್ಣರಂಧ್ರದಲ್ಲುಲಿದು, ನಿನಾದಮಯವಾಗಿ, ನವಚೈತನ್ಯವನ್ನು ಇತ್ತು, ತಮಗೆ ಸರ್ವದಾ ಸ್ಫೂರ್ತಿ ಈಯಲಿ" — ಎಂಬುದಾಗಿ ಮುತ್ತಿನಂತಹ ಮಾತುಗಳನ್ನು 'ಕಬೀರರ ಗೀತೆಗಳು' ಗ್ರಂಥದಲ್ಲಿ ಬರೆದಿದ್ದಳು. ಅದೇ ಪುಸ್ತಕದ ಕೊನೆಯ ಹಾಳೆಯಲ್ಲಿ ರವೀಂದ್ರರ ಅಮರವಾಣಿಯೊಂದನ್ನು ಉಲ್ಲೇಖಿಸಿದ್ದಳು :—

ನಿಲುವುದಕೆ ನಾಚದಿರಿ ಸೋದರರೆ, ನೀವು !
ಅಧಿಕಾರ ಹೆಮ್ಮೆಯಲಿ ಮೆರೆವವರ ಮುಂದೆ
ಸರತೆಳೆಯ ಧವಳಿಮದ ವಸನದಲಿ ನಿಂದು
ಮಾನವತೆ ಮುಕುಟವನು ಶಿರದಲ್ಲಿ ಹೊತ್ತು
ಆತ್ಮಸ್ವಾತಂತ್ರ್ಯಕ್ಕೆ ಕಾದುವರು ನೀವು !
ಬಡತನದ ಬರಡುಮೈದಾನದಲ್ಲಿಂದು
ದೇವಸಿಂಹಾಸನವ ನಿಲಿಸುವರು ನೀವು !
ಮಹತ್ತಲ್ಲ ಬೃಹತ್ತು — ದೈವತ್ವವಲ್ಲ !
ಅರಿಯಲಿದು ಸಾಕು — ನಿತ್ಯವೇನಲ್ಲ ಹೆಮ್ಮೆ ! *

—**ಟಾಗೂರ್.**

---

* ಅನುವಾದ ಮಾಡಿಕೊಟ್ಟ ಹಿರಿಯಮಿತ್ರರಾದ ಶ್ರೀಮಾನ್ ಹೊಯಿಸಳ ಅವರಿಗೆ ಲೇಖಕನ ವಂದನೆಗಳು.

## ಅ. ನ. ಕೃಷ್ಣರಾಯರ ಗ್ರಂಥಗಳು

## ನಮ್ಮ ಪ್ರಕಟನೆಗಳು

---

| | | |
|---|---|---|
| ತಾಯಿಯ ಕರುಳು | — | ಕಾದಂಬರಿ |
| ಮುಯ್ಯಿಗೆ ಮುಯ್ಯಿ | — | ಕಾದಂಬರಿ |
| ಗೋಮುಖವ್ಯಾಘ್ರ | — | ನಾಟಕ |
| ಜೀವನ ಯಾತ್ರೆ | — | ಕಾದಂಬರಿ |
| ಸಾಹಿತ್ಯರತ್ನ | — | ಕಾದಂಬರಿ |
| ಮಿಂಚು | — | ಕಥಾಸಂಗ್ರಹ |
| ಕಿಡಿ | — | ಕಥಾಸಂಗ್ರಹ |
| ಶಿಲ್ಪಿ | — | ಕಥಾಸಂಗ್ರಹ |
| ಹೊಸಲು ದಾಟಿದ ಹೆಣ್ಣು | — | ಕಾದಂಬರಿ |
| ಸ್ವರ್ಣಮೂರ್ತಿ | — | ನಾಟಕ |
| ಹಿರಣ್ಯಕಶಿಪು | — | ನಾಟಕ |
| ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ | — | ಪ್ರಬಂಧ |
| ಮದುವೆಯೋ-ಮನೆಹಾಳೋ | — | ನಾಟಕ |

### ಅಚ್ಚಿನಲ್ಲಿ

| | | |
|---|---|---|
| ಕರ್ಣಾಟಕದ ಕಲಾವಿದರು-ಭಾಗ ೨ | — | ಕಲಾವಿಮರ್ಶೆ |
| ರಜಪೂತ ಲಕ್ಷ್ಮೀ | — | ನಾಟಕ |
| ಉಮರ್ ಖಯ್ಯಾಂ | — | ಕಾವ್ಯವಿಮರ್ಶೆ |

---

ಆನಂದ್ ಬ್ರದರ್ಸ್,
ಬೆಂಗಳೂರು-೨.

## ಚಿ. ಸದಾಶಿವಯ್ಯನವರ ಪುಸ್ತಕಗಳು

| | |
|---|---|
| ಸೌಭಾಗ್ಯ | (ನಾಟಕ) |
| ಮಕ್ಕಳೇ ದೇವರು | ,, |
| ಸೊಂಪಿನ ಸಾಗರ | ,, |
| ಭೀಮಸೇನ ಬೇಬಿ | ,, |
| ಶಿವಾಜಿಯ ಬಾಲ್ಯ | ,, |
| ಮೈಸೂರ ಮಾಣಿಕ್ಯ | ,, |
| ಅಮ್ಮ | ,, |
| ಶಿವ—ಮಂಗಳ | ,, |
| ಜಯಶ್ರೀ | ,, |
| ಶಾಂತಿ | ,, |
| ಕನ್ಯಾಸೆರೆ | ,, |
| ಮಾಂಗಲ್ಯ | ,, |
| ರಹಸ್ಯ | ,, |
| ಸಿಂಹ | ,, |
| ಬೃಂದಾವನ | ,, |
| ಉಗಾದಿಯ ಸಡಗರ | ,, |
| ರಾಮ ದರ್ಶನ | ,, |
| ತಂಗಚ್ಚಿ | ,, |
| ಆಮೇಲೆ | ,, |
| ಏಕನಾಥ | ,, |
| ಪ್ರತೀಕ್ಷೆ | (ಕಥೆಗಳು) |
| ಮೈಸೂರು ಹುಲಿ | ,, |
| ಸ್ವಾಮಿ ರಾಮ ತೀರ್ಥ | (ಜೀವನ ಚರಿತ್ರೆ) |
| ರಾಜಶ್ರೀ | (ಕಾದಂಬರಿ) |
| ಲೀಲೂ ಗಂಡ | |

**ಆನಂದ್ ಬ್ರದರ್ಸ್ — ಪಬ್ಲಿಷರ್ಸ್ — ಬೆಂಗಳೂರು ೨**